॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ— ೧೯

# ಶ್ರೀ ಲಿಂಗಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದ, ವಿವರಣೆಗಳೊಡನೆ)

ಪೂರ್ವಭಾಗ—ಸಂಪುಟ ೨

ಅಧ್ಯಾಯಗಳು ೪೦–೬೯

ಅನುವಾದಕ:

ಆಸ್ಥಾನ ಮಹಾವಿದ್ವಾನ್

**ಎಡತೊರೆ ಚಂದ್ರಶೇಖರ ಶಾಸ್ತ್ರೀ, ಎಂ.ಎ.**

ಸಾಹಿತ್ಯ ವಿದ್ವಾನ್

---

**ಮೈಸೂರು:**

**ಬೆಂಗಳೂರು ಪ್ರೆಸ್ ಬ್ರಾಂಚ್**

೧೯೪೫

# ಮುನ್ನುಡಿ

॥ ಶ್ರೀ ಗಣೇಶಶಾರದಾಗುರುಭ್ಯೋ ನಮಃ ॥

ಈ ಲಿಂಗಮಹಾಪುರಾಣದ ಮೊದಲನೆಯ ಸಂಪುಟದ ಕಡೆಯ ಅಧ್ಯಾಯದಲ್ಲಿ ನಾಲ್ಕು ಯುಗಗಳ ಸಾಮಾನ್ಯ ಧರ್ಮಗಳನ್ನು ವಿವರಿಸಿದೆ. ಈಗ ಕಲಿಯುಗದ ವಿಶೇಷ ಧರ್ಮಗಳನ್ನು ಸಂಗ್ರಹವಾಗಿ ನಿರೂಪಿಸಿ, "ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ" ಎಂಬ ಶ್ರುತಿವಾಕ್ಯದ ತಾತ್ಪರ್ಯವನ್ನು ಮನಗಾಣಿಸಲಾಗಿದೆ. ಕಾಲಪರಿಪಾಕ ವಶದಿಂದ ಆಗುವ ಬ್ರಹ್ಮನ ಸೃಷ್ಟಿಕ್ರಮವನ್ನು ವಿವರಿಸಲು ಹೊರಟು, ಪ್ರಸಂಗ ವಶದಿಂದ ನಂದಿಕೇಶ್ವರನ ಚರಿತ್ರೆಯನ್ನು ತಿಳಿಸಿ, ಮುಖ್ಯ ಸೃಷ್ಟಿ ಅನುಸೃಷ್ಟಿಗಳನ್ನು ವಿವರಿಸಿದೆ. ನಮ್ಮ ಈ ಸೂರ್ಯ ಸಂಸ್ಥಾನವನ್ನು ವರ್ಣಿಸುತ್ತಾ ಸೂರ್ಯನೇ ಮೊದಲಾದ ಗ್ರಹಗಳ ರಚನೆ, ದೂರ, ಚಲನ, ವಲನ, ಗಳನ್ನು ಸಂಗ್ರಹವಾಗಿ ಹೇಳಿದೆ. ಜ್ಯೋತಿಶ್ಚಕ್ರದಲ್ಲಿ ಭೌತ ಪರಮಾಣುಗಳಲ್ಲಿನ ಸ್ಪಂದ ಕ್ರಿಯೆಯಿಂದ ಗ್ರಹಗಳ ರಚನೆ, ಪೃಥಕ್ಕರಣಗಳನ್ನೂ ಸೂಚಿಸಿರುವಂತಿದೆ. "ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ" ಎಂಬ ಶ್ರುತಿಯ ಅರ್ಥವನ್ನೂ ಮನಗಾಣಿಸಲಾಗಿದೆ. ಆಮೇಲೆ ಎಲ್ಲಕ್ಕೂ ಮೇಲಾದ ಧ್ರುವ ಮಂಡಲದ ಸ್ಥಾನ ಸ್ವಭಾವಗಳನ್ನು ತಿಳಿಸಿದೆ. ಅನಂತರದಲ್ಲಿ ಈ ಬ್ರಹ್ಮಾಂಡದಲ್ಲಿರುವ ಭೂರಾದಿ ಊರ್ಧ್ವ ಲೋಕಗಳು, ಪಾತಾಳಾದಿ ಅಧೋ ಲೋಕಗಳು, ಮೇರು ಮುಂತಾದ ಮಹಾ ಪರ್ವತಗಳನ್ನು ವರ್ಣಿಸಿ, ಕಡೆಯಲ್ಲಿ ಈ ಜಂಬೂದ್ವೀಪ, ಭಾರತವರ್ಷ ಮುಂತಾದ ಭೂ ವಿಭಾಗಗಳು, ಪರ್ವತಗಳು, ನದಿಗಳು, ಸಮುದ್ರಗಳು, ದ್ವೀಪಗಳು ಇವನ್ನೂ ವಿವರಿಸಿದೆ. ಅನಂತರದಲ್ಲಿ ಲೋಕ ಪಾಲಕರನ್ನೂ, ದೇಶಗಳ ರಾಜರನ್ನೂ ವಿವರಿಸಿ, ಮಹಾಪುರಾಣಗಳ ಲಕ್ಷಣಗಳಾದ ಕಲ್ಪ, ಮನ್ವಂತರಗಳನ್ನು ತಿಳಿಸುತ್ತಾ, ಆಯಾ ಕಲ್ಪಗಳಲ್ಲೂ, ಆವಿರ್ಭವಿಸಿದ ವಂಶಗಳನ್ನು ತಿಳಿಸಿದೆ. ವಸಿಷ್ಠಾದಿಗಳಿಂದ ಮುಂದುವರಿದ ಬ್ರಾಹ್ಮಣ ವಂಶಗಳನ್ನೂ, ಸೂರ್ಯ ಚಂದ್ರರಿಂದ ಮೊದಲಾದ ರಾಜ ವಂಶಗಳನ್ನೂ, ಮನು, ಮಾಂಧಾತಾದಿ ಚಕ್ರವರ್ತಿಗಳನ್ನೂ, ವಿಶೇಷವಾಗಿ ಯಾದವ ವಂಶವು ಮೊದಲಾಗಿ ಬೆಳೆದ ವಿವರಗಳನ್ನೂ ಕೊಡಲಾಗಿದೆ. ಈ ಸಂದರ್ಭದಲ್ಲಿ ಆ ವಂಶಗಳಲ್ಲಿ ಪುಣ್ಯಶ್ಲೋಕರಾದ, ಪರಾಶರ, ಧ್ರುವ, ಯಯಾತಿ, ಯದು, ಕೃಷ್ಣ ಮುಂತಾದ ಮಹಾನುಭಾವರ ಚರಿತ್ರೆಯನ್ನೂ ಸಂಗ್ರಹವಾಗಿ ತಿಳಿಸಿದೆ. ಯಯಾತಿ ಮಹಾರಾಜನ ಕಡೆಯ ಅನುಭವದ ಮಾತು ಸ್ಮರಣೀಯವಾಗಿದೆ.

ಈ ಲಿಂಗಮಹಾಪುರಾಣದ ಮುದ್ರಣ ಕಾರ್ಯದಲ್ಲಿ ಮೂರು ಪ್ರತಿಗಳನ್ನು ಆಧಾರವಾಗಿ ಇಟ್ಟುಕೊಂಡಿರುತ್ತೇನೆ. ಅರಮನೆಯಿಂದ ದೊರೆತ ದೇವನಾಗರೀ ಲಿಪಿಯ ಪ್ರತಿಯು ಒಂದು. ಓರಿಯಂಟಲ್ ಲೈಬ್ರೆರಿಯಿಂದ ತರಿಸಿಕೊಟ್ಟ ದೇವನಾಗರಾಕ್ಷರದ ಪ್ರತಿಯು ಎರಡನೆಯದು. ಮ॥ ರಾ॥ ಪಂಡಿತ ಶಂಕರ ಶಾಸ್ತ್ರಿಗಳಲ್ಲಿದ್ದ ಆಂಧ್ರ ಲಿಪಿಯ ಗ್ರಂಥವನ್ನು ಮ॥ ರಾ॥ ಪಂಡಿತ ಕಾಶೀನಾಥ ಶಾಸ್ತ್ರಿಗಳು ದಯೆಯಿಟ್ಟು ತರಸಿಕೊಟ್ಟ ಪ್ರತಿಯು ಮೂರನೆಯದು. ಇವನ್ನು ಹೋಲಿಸಿ ನೋಡಿದ್ದರಿಂದ ಗ್ರಂಥಪಾತವಾಗಲಿ ಪ್ರಕ್ಷೇಪವಾಗಲಿ ಕಂಡು ಬಂದಿಲ್ಲ. ಪಾಠಭೇದಗಳನ್ನು ಅಲ್ಲಲ್ಲಿ ದುಂಡನೆಯ ಕಂಸಗಳಲ್ಲಿ ಸೇರಿಸಿದ್ದೇನೆ. ಆಂಧ್ರ ಲಿಪಿಯ ಪುಸ್ತಕದಲ್ಲಿದ್ದ ೬೫ ಮತ್ತು ೬೬ ನೆಯ ಅಧ್ಯಾಯಗಳನ್ನು ಒಟ್ಟುಗೂಡಿಸಿ ದೇವನಾಗರ ಪ್ರತಿಗಳಲ್ಲಿ ಒಂದೇ ಅಧ್ಯಾಯವಾಗಿ ಮಾಡಿದೆ. ಆದರೆ ಗ್ರಂಥ ಸಂಖ್ಯೆಯಲ್ಲಿ ಹೆಚ್ಚು ಕಡಿಮೆಗಳೇನೂ ಇಲ್ಲ. ೪೪ ನೆಯ ಅಧ್ಯಾಯದಲ್ಲಿ "ಹಾರಂಚ ಮಣಿಚಿತ್ರಾಂಗಂ ನಿರ್ಮಿತಂ ವಿಶ್ವಕರ್ಮಣಾ ॥" ಎಂಬ ಈ ಅರ್ಧ ಶ್ಲೋಕವು ಮಾತ್ರ ಹೆಚ್ಚಾಗಿದೆ.

ಕರುಣಾ ಮಯಳೂ ಜಗನ್ಮಾತೆಯೂ ಅಗಿರುವ ಶ್ರೀ ಮಹಾ ತ್ರಿಪುರ ಸುಂದರೀ, ಭುವನೇಶ್ವರೀ, ಚಾಮುಂಡೇಶ್ವರೀ ಮುಂತಾದ ನಾಮ ರೂಪಗಳಿಂದ ಪ್ರಸಿದ್ಧಳಾಗಿ ಪೂಜ್ಯಳಾಗಿರುವ ದೇವಿಯ ಕೃಪೆಯ ಫಲವಾಗಿ, ನಮ್ಮನ್ನಾಳುತ್ತಿರುವ ಧಾರ್ಮಿಕ ಪ್ರಭುವರ್ಯರಾದ ಶ್ರೀ **ಜಯ ಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಎಸ್. ಐ.** ಮಹಾಸ್ವಾಮಿಯವರ ಔದಾರ್ಯ ಪ್ರೋತ್ಸಾಹ ಪೂರ್ವಕವಾದ ಅಪ್ಪಣೆಯನ್ನು ಶಿರಸಾ ವಹಿಸಿ, ಈ ಲಿಂಗ ಮಹಾ ಪುರಾಣವನ್ನು ಕನ್ನಡ ಅರ್ಥಾನುವಾದದೊಡನೆ ಮುದ್ರಿಸಿ ಪ್ರಕಟಿಸಲಾಗಿದೆ. ಇದರಿಂದ ಜನತೆಯ ತಿಳಿವಳಿಕೆ ನಡೆವಳಿಕೆಗಳು ಮೇಲ್ಪಟ್ಟು ದೇಶದಲ್ಲಿ ಶಾಂತಿ ಸುಖಗಳು ನೆಲೆಸುವಂತಾಗಲೆಂದೂ, ಈಗ ಅರ್ಧ ಕಡಿಮೆಯಾಗಿರುವ ಘೋರ ಯುದ್ಧವು ಸಂಪೂರ್ಣವಾಗಿ ನಿಂತು, ಮುಂದೆಯೂ ಯುದ್ಧಗಳು ಸಂಭವಿಸದಂತೆ ಆಗಲು ಧಾರ್ಮಿಕ ಸಂಸ್ಕೃತಿಯು ಜನರ ಮತ್ತು ಮುಖಂಡರ ಹೃದಯದಲ್ಲಿ ಬೇರೂರಿ ಬೆಳೆದು ಬಲಗೊಂಡು, ಶಾಂತಿ ನೆಮ್ಮದಿ ಸೌಖ್ಯಗಳು ಜಗತ್ತಿನಲ್ಲಿ ಶಾಶ್ವತವಾಗಿ ನೆಲೆಗೊಳ್ಳಲೆಂದೂ ದೇವರಲ್ಲಿ ಪ್ರಾರ್ಥಿಸುತ್ತಿರುತ್ತೇನೆ.

ಪಾರ್ಥಿವ ಸಂವತ್ಸರದ
ಆಷಾಢ ಶುಕ್ಲ ಪೂರ್ಣಿಮಾ
ಬುಧವಾರ ೨೫–೭–೧೯೪೫

ಎಡತೊರೆ ದೇವಯ್ಯ ದೀಕ್ಷಿತರ ಮಗ,
**ಚಂದ್ರಶೇಖರ ಶಾಸ್ತ್ರೀ.**

# ವಿಷಯಗಳ ಸೂಚಿಕೆ.

ಪುಟಸಂಖ್ಯೆ

# ಶ್ರೀ ಲಿಂಗಮಹಾಪುರಾಣಂ

## ಸಂಪುಟ ೨.

ಅಥ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ
ಚತ್ವಾರಿಂಶೋಽಧ್ಯಾಯಃ

**ಚತ್ವಾರಿಂಶೇ ವರ್ಣ್ಯತೇಽಸ್ಮಿನ್ ಧರ್ಮಾಃ ಕಲಿಯುಗೋದ್ಭವಾಃ ।**
**ಕೃತಾರಂಭಕ್ರಮೋ ವ್ಯಾಖ್ಯಾ ಕಲ್ಪ ಮನ್ವಂತರಸ್ಯ ಚ ॥**

**॥ ಶಕ್ರ ಉವಾಚ ॥**

**ತಿಷ್ಯೇ ಮಾಯಾಮಸೂಯಾಂ ಚ ವಧಂ ಚೈವ ತಪಸ್ವಿನಾಂ ।**
**ಸಾಧಯಂತಿ ನರಾಸ್ತತ್ರ ತಮಸಾ ವ್ಯಾಕುಲೇಂದ್ರಿಯಾಃ ॥ ೧ ॥**

---

ಶ್ರೀ ಗಣೇಶಶಾರದಾಗುರುಭ್ಯೋ ನಮಃ

**ಧರ್ಮಃ ಸರ್ವಸುಖಾವಹಃ, ಪರತರಂ ಧರ್ಮಂ ಬುಧಾ ಶ್ಚಿನ್ವತೇ,**
**ಧರ್ಮೇಣೇಹ ಪರಾರ್ಥಸಾಧನ, ಮತೋ ಧರ್ಮಾಯ ತಸ್ಮೈ ನಮಃ ।**
**ಧರ್ಮಾತ್ ತ್ಸರ್ವಸ್ಪೃಹಾಂಪುರೋಽಭಿಗಮನಂ, ಧರ್ಮಸ್ಯ ಮೂಲಂ ದಯಾ**
**ಧರ್ಮೇ ಬುದ್ಧಿ ರಿಹಾಸ್ತು ಮೇ, ನ ತು ಫಲೇ, ಹೇಧರ್ಮ ಮಾಂ ತಾರಯ॥**

ಎಲ್ಲ ಜನರಿಗೂ ಎಲ್ಲ ಬಗೆಯ ಸುಖಗಳೂ ದೊರಕುವಂತೆ ಮಾಡುವುದು ಧರ್ಮವೇ ಆಗಿದೆ. ಉಪನಿಷತ್ತುಗಳ ಮುಖ್ಯತಾತ್ಪರ್ಯವನ್ನು ತಿಳಿದಿರುವ ವಿವೇಕಿಗಳಾದ ಉತ್ತಮಾಧಿಕಾರಿಗಳು ಯೋಗದಿಂದ ಆತ್ಮಚಿಂತನ ರೂಪವಾದ ಅತ್ಯುತ್ತಮ ಧರ್ಮವನ್ನು ಪರಮ ಪುರುಷಾರ್ಥವಾದ ಮೋಕ್ಷಕ್ಕೋಸ್ಕರ ಸಂಪಾದಿಸುತ್ತಿರುತ್ತಾರೆ. ಫಲಕಾಮನೆಯುಳ್ಳ ಮಧ್ಯಮಾಧಿಕಾರಿಗಳಿಗೆ ಐಹಿಕ ಸುಖಗಳ ಮತ್ತು ಆಮುಷ್ಮಿಕಗಳಾದ ಸದ್ಗತಿ ಅಭ್ಯುದಯಗಳ ಸಾಧನೆಯೂ ಧರ್ಮದಿಂದಲೇ ಆಗುತ್ತಿದೆ. ಆದು

ದರಿಂದ ಇಂತಹ ಉತ್ತಮ ಸಾಧನವಾದ ಧರ್ಮಕ್ಕೆ ನಮ್ಮ ಗೌರವಾದರಗಳು ಸಲ್ಲಬೇಕಾಗಿರುತ್ತವೆ. ಅಲ್ಲದೆ ನಮ್ಮ ಇಷ್ಟಾರ್ಥಗಳ ಪ್ರಾಪ್ತಿಗೆ ಧರ್ಮಕ್ಕಿಂತಲೂ ಉತ್ತಮವಾದ ಮತ್ತೊಂದು ಸಾಧನ ವಿಲ್ಲವು. ಮತ್ತು ಧರ್ಮಾಚರಣೆಯಿಂದಲೇ ಪ್ರಪಂಚದಲ್ಲಿರುವ ಎಲ್ಲರೂ ಶ್ರೇಯಸ್ಸಿನ ಮಾರ್ಗದಲ್ಲಿ ಮುಂದುವರಿಯುವುದು ಸಾಧ್ಯವೂ, ಸುಲಭವೂ ಆಗಿದೆ. ಆದರೆ ಈ ಧರ್ಮಾಚರಣೆಗೆ ಪ್ರೇರಣೆಯು ಸ್ವಾರ್ಥ, ಸ್ವಾಭಿಮಾನ, ಅನಾದರ, ಮುಂತಾದ ರಾಜಸ ಮನೋವೃತ್ತಿಯಿಂದ ಉಂಟಾಗಬಾರದು. ಏಕೆಂದರೆ ಅದರಿಂದ ಧರ್ಮದ ಮೇಲ್ಮೆಯು ಕುಗ್ಗುತ್ತದೆ. ಇತರರ ದುಃಖವನ್ನು ನಿವಾರಿಸಬೇಕೆಂಬ ಮನೋವೃತ್ತಿಯೇ ದಯೆಯು. ದಯೆಯನ್ನು ತೋರಿಸುವ ಅವಕಾಶವು ದೊರೆಯುವುದು ನಮ್ಮ ಜನ್ಮದ ಸಾರ್ಥಕತೆಗೆ ಕಾರಣವೆಂದು ತಿಳಿದು ಆದರದೊಡನೆ ಪ್ರವರ್ತಿಸುವ ನಮ್ರವೂ ಸಾತ್ವಿಕವೂ ಆಗಿರುವ ಮನೊವೃತ್ತಿಯು ಧರ್ಮಾಚರಣೆಗೆ ಪ್ರೇರಕವಾಗಿರುವುದಾದರೆ, ಅದು ಶ್ರೇಯಸ್ಕರವಾಗುತ್ತದೆ; ಎಂದು ಭಾವವು. ಆದುದರಿಂದ ನನ್ನ ಬುದ್ಧಿಯು ಯಾವಾಗಲೂ ಧರ್ಮಾಚರಣೆಯಲ್ಲಿಯೇ ಆಸಕ್ತಿಯುಳ್ಳದ್ದಾಗಿರಲಿ. ಅಲ್ಲದೆ ಧರ್ಮದ ಫಲಗಳ ವಿಷಯದಲ್ಲಿ ಆಶೆಯಿಲ್ಲದ್ದಾಗಿರಲಿ. ಏಕೆಂದರೆ ಫಲಕಾಮನೆಯಿಂದ ಕೂಡಿರುವ ಧರ್ಮಾಚರಣೆಯಿಂದ ಈ ಸಂಸಾರವು, ಎಂದರೆ ಕರ್ತೃತ್ವ, ಭೋಕ್ತೃತ್ವ, ಜನನ, ಮರಣ, ಸುಖದುಃಖಗಳ ಅನುಭವ, ಇವುಗಳ ಸುತ್ತಿನಲ್ಲಿ ಬಳಸುತ್ತಿರುತ್ತಾ ಬಿಡುಗಡೆ ಇಲ್ಲದಿರುವಿಕೆಯು, ತಪ್ಪದೆ ಸಂಕಟಪಡಬೇಕಾಗುತ್ತದೆ; ಎಂದು ತಾತ್ಪರ್ಯವು. ಆದುದರಿಂದ ಓ ನಿಷ್ಕಾಮಧರ್ಮ ತತ್ವವೇ, ನನ್ನನ್ನು ಈ ಸಂಸಾರ ಸಾಗರದಿಂದ ದಾಟಿಸಿ ಕಾಪಾಡು. ನಿಷ್ಕಾಮ ಧರ್ಮಾಚರಣೆಯಿಂದ ಚಿತ್ತ ಶುದ್ಧಿಯೂ, ವಿವೇಕ ವೈರಾಗ್ಯಗಳೂ, ಜ್ಞಾನಪ್ರಾಪ್ತಿಯೂ, ಕ್ರಮವಾಗಿ ಉಂಟಾಗಲು, ನಿತ್ಯಾನಂದರೂಪವಾದ ಮೋಕ್ಷಪ್ರಾಪ್ತಿಯಾಗುವಂತೆ ಮಾಡು. ಎಂದು, ಆಸ್ತಿಕನಾದ ಸಾಧಕನು ಆಶಿಸುತ್ತಾ ಧರ್ಮವನ್ನು ಆಚರಿಸುತ್ತಿರಲಿ.

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನಲವತ್ತನೆಯ ಅಧ್ಯಾಯವು

( ನಲವತ್ತನೆಯ ಅಧ್ಯಾಯದಲ್ಲಿ ಕಲಿಯುಗಧರ್ಮ, ಮತ್ತೆ ಕೃತಯುಗ ಆರಂಭವಾಗುವ ಬಗೆಯೂ, ಕಲ್ಪ, ಮನ್ವಂತರಗಳ ವಿವರಣೆಯೂ, ಇವನ್ನು ವರ್ಣಿಸಲಾಗುವುದು. )

ಕಲೌ ಪ್ರಮಾದ ತೋ ರೋಗಃ ಸತತಂ ಕ್ಷ್ನು ದ್ಭಯಾನಿ ಚ ।
ಅನಾವೃಷ್ಟಿ ಭಯಂ ಘೋರಂ ದೇಶಾನಾಂ ಚ ವಿಪರ್ಯಯಃ ॥ ೨ ॥
ನ ಪ್ರಾಮಾಣ್ಯಂ ಶ್ರುತೇರಸ್ತಿ ನೃಣಾಂ ಚಾಧಮ ಸೇವನಂ ।
ಅಧಾರ್ಮಿಕಾ ಸ್ತ್ವನಾಚಾರಾ ಮಹಾ ಕೋಪಾಲ್ಪಚೇತಸಃ ॥ ೩ ॥
ಅನೃತಂ ಬ್ರುವತೇ ಲುಬ್ಧಾ ಸ್ತಿಷ್ಯೇ ಜಾತಾಶ್ಚ ದುಷ್ಪ್ರಜಾಃ ।
ದುರಿಷ್ಟೈರ್ದುರಧೀತೈಶ್ಚ ದುರಾಚಾರೈ ರ್ದುರಾಗಮೈಃ ॥ ೪ ॥
ವಿಪ್ರಾಣಾಂ ಕರ್ಮದೋಷೇಣ ಪ್ರಜಾನಾಂ ಜಾಯತೇ ಭಯಂ ।
ನಾಧೀಯಂತೇ ತದಾ ವೇದಾ ನ್ನಯಜಂತೇ ದ್ವಿಜಾತಯಃ ॥ ೫ ॥

---

೧. ದೇವೇಂದ್ರನು ಹೇಳಿದನು: ಕಲಿಯುಗದಲ್ಲಿ ಮನುಷ್ಯರು ತಮೋಗುಣದಿಂದ ಇಂದ್ರಿಯ ಭೋಗಾಸಕ್ತರಾಗಿ ಮನಸ್ಸಿನ ವ್ಯಾಕುಲತೆಯಿಂದ ಮೋಸದಿಂದಲೂ, ಅಸೂಯೆಯಿಂದಲೂ, ಕೂಡಿದವರಾಗಿ ಧರ್ಮಮಾರ್ಗದಲ್ಲಿರುವ ತಪಸ್ವಿಗಳನ್ನು ಕೊಲ್ಲುವರು. ಅಥವಾ ಕೊಲ್ಲುವ ಯತ್ನವನ್ನು ಮಾಡುವರು.

೨–೪. ಕಲಿಯುಗದಲ್ಲಿ ಉದಾಸೀನತೆಯಿಂದ ಧರ್ಮಕಾರ್ಯಗಳನ್ನು ನಡೆಸುವುದರಿಂದ, ಕರ್ಮದಲ್ಲಿ ಲೋಪವಾಗಿ ಅದರ ಫಲದಿಂದ ಪ್ರಜೆಗಳಿಗೆ ಯಾವಾಗಲೂ ರೋಗವೂ, ಹಸಿವಿನ ಬಾಧೆಯೂ, ಮಳೆಯು ಕಾಲ ಕಾಲಕ್ಕೆ ಬರದೇ ಹೋಗುವುದರಿಂದ ಭಯವೂ, ದೇಶಗಳ ರಾಜ್ಯಭಾರದಲ್ಲಿ ಬದಲಾವಣೆಗಳೂ, ನಡೆಯುವುವು. ವೇದಕ್ಕೆ ಪ್ರಾಮಾಣ್ಯವಿರುವುದಿಲ್ಲ. ಜನರೆಲ್ಲರೂ ಅಧರ್ಮವನ್ನು ಮಾಡುವುದರಲ್ಲಿ ಆಸಕ್ತರಾಗುವರು. ಸದಾಚಾರವನ್ನು ಬಿಟ್ಟು ದುರಾಚರಣೆಗಳನ್ನು ನಡೆಸುತ್ತ ಹೆಚ್ಚು ಕೋಪ ಉಳ್ಳವರಾಗಿ ಶರೀರದಲ್ಲಿ ಬಲವು ಕಡಮೆಯಾದವರಾಗಿ ಇರುವರು. ಅತ್ಯಾಸೆಯಿಂದ ಕೂಡಿ ಸುಳ್ಳನ್ನು ಹೇಳುವರು. ದುರ್ಗುಣಗಳಿಂದ ಕೂಡಿದ ಮಕ್ಕಳೇ ಹುಟ್ಟುವರು. ಅವರ ಅಪೇಕ್ಷೆಯೂ ದುಷ್ಟವಾಗಿರುವುದು. ಅವರ ವಿದ್ಯಾಭ್ಯಾಸವೂ, ಆಚಾರವೂ, ಶಾಸ್ತ್ರಗಳೂ, ನಡತೆಗಳೂ, ದುಷ್ಟವಾದುವುಗಳಾಗಿರುವುವು.

೫–೬. ಬ್ರಾಹ್ಮಣರು ಮಾಡುವ ಕರ್ಮಗಳಲ್ಲಿ ದೋಷವುಂಟಾಗುವುದರಿಂದ ಪ್ರಜೆಗಳಿಗೆಲ್ಲರಿಗೂ ಭಯವು ಉಂಟಾಗುವುದು. ಆ ಕಲಿಯುಗ

ಉತ್ಸೀದಂತಿ ನರಾಶ್ಚೈವ ಕ್ಷತ್ರಿಯಾಶ್ಚ ವಿಶಃ ಕ್ರಮಾತ್ ।
ಶೂದ್ರಾಣಾಂ ಮಂತ್ರಯೋಗೇನ ಸಂಬಂಧೋ ಬ್ರಾಹ್ಮಣೈಃಸಹ ॥
ಭವತೀಹ ಕಲೌ ತಸ್ಮಿನ್ ಶಯನಾಶನ ಭೋಜನೈಃ ।
ರಾಜಾನಃ ಶೂದ್ರ ಭೂಯಿಷ್ಠಾ ಬ್ರಾಹ್ಮಣಾನ್ ಬಾಧಯಂತಿ ತೇ ॥
ಭ್ರೂಣಹತ್ಯಾ ವೀರಹತ್ಯಾ ಪ್ರಜಾಯಂತೇ ಪ್ರಜಾಸು ವೈ ।
ಶೂದ್ರಾಶ್ಚ ಬ್ರಾಹ್ಮಣಾಚಾರಾಃ ಶೂದ್ರಾಚಾರಾಶ್ಚ ಬ್ರಾಹ್ಮಣಾಃ ॥
ರಾಜವೃತ್ತಿ ಸ್ಥಿತಾ ಶ್ಚೋರಾಃ ಚೌರಾ ಚಾರಾಶ್ಚ ಪಾರ್ಥಿವಾಃ ।
ಏಕಪತ್ನ್ಯೋ ನ ಶಿಷ್ಯಂತಿ ವರ್ಧಿಷ್ಯಂತ್ಯ ಭಿ ಸಾರಿಕಾಃ ॥ ೯ ॥
ವರ್ಣಾಶ್ರಮ ಪ್ರತಿಷ್ಠಾ ನೋ ಜಾಯತೇ ನೃಷು ಸರ್ವತಃ ।
ತದಾ ಸ್ವಲ್ಪ ಫಲಾ ಭೂಮಿಃ ಕ್ವಚಿಚ್ಚಾಪಿ ಮಹಾಫಲಾ ॥೧೦॥

---

ದಲ್ಲಿ ಬ್ರಾಹ್ಮಣರಿಗೆ ವೇದವನ್ನು ಓದುವುದರಲ್ಲಿ ಆಸಕ್ತಿಯಿಲ್ಲದೇ ಹೋಗುವುದು. ದೇವರಪೂಜೆ, ಪಂಚಮಹಾಯಜ್ಞ ಇವುಗಳನ್ನು ಮಾಡುವುದಿಲ್ಲ. ಇದರಿಂದ ಕ್ರಮವಾಗಿ ಕ್ಷತ್ರಿಯರೂ, ವೈಶ್ಯರೂ, ನಾಶವಾಗುವರು. ಶೂದ್ರರು ಮಂತ್ರಶಾಸ್ತ್ರಾದಿಗಳನ್ನು ಅಭ್ಯಾಸಮಾಡಿ ಬ್ರಾಹ್ಮಣ ವರ್ಣದವರೊಂದಿಗೆ ಮಲಗುವುದು, ಕೂಡುವುದು, ಭೋಜನಮಾಡುವುದು, ಮೊದಲಾದ ಸಂಬಂಧಗಳನ್ನು ಬೆಳೆಸುವರು.

೭–೯. ಶೂದ್ರ ವರ್ಣದವರೇ ವಿಶೇಷವಾಗಿ ರಾಜರಾಗಿ, ಅವರು ಬ್ರಾಹ್ಮಣರನ್ನು ಬಾಧಿಸುವರು. ಪ್ರಜೆಗಳಲ್ಲಿ ವ್ಯಭಿಚಾರಗಳು ಹೆಚ್ಚುವುದರಿಂದ ಬಾಲಕರ ಕೊಲೆಯೂ, ಶೂರರ ಕೊಲೆಯೂ, ಹೆಚ್ಚುವುದು. ಶೂದ್ರರು ಬ್ರಾಹ್ಮಣರ ಆಚಾರಗಳನ್ನೂ, ಬ್ರಾಹ್ಮಣರು ಶೂದ್ರರ ಆಚಾರಗಳನ್ನೂ ನಡೆಸುವರು. ಕಳ್ಳರು ರಾಜನ ಸೇವಕರಾಗುವರು, ದೊಡ್ಡ ಅಧಿಕಾರಿಗಳಾಗುವರು. ರಾಜರು ಪ್ರಜೆಗಳ ಧನವನ್ನು ಅಪಹರಿಸಿ ಕಳ್ಳರಾಗುವರು. ಪತಿವ್ರತಾ ಸ್ತ್ರೀಯರು ಉಳಿಯುವುದಿಲ್ಲ. ವ್ಯಭಿಚಾರಿಗಳು ಹೆಚ್ಚುವರು.

೧೦. ಕಲಿಯುಗದಲ್ಲಿ ಸಕಲ ಮಾನವರೂ ತಂತಮ್ಮ ವರ್ಣಾಶ್ರಮ ಧರ್ಮಗಳನ್ನು ಕ್ರಮವಾಗಿ ನಡೆಸದೇ ಇರುವುದರಿಂದ ಭೂಮಿಯಲ್ಲಿ ಬೆಳೆಯು ಕಡಮೆಯಾಗುವುದು. ಕೆಲವೆಡೆಗಳಲ್ಲಿ ಮಾತ್ರ ಎಂದರೆ ಮಹಾಪುರುಷರು ವಾಸವಾಗಿರುವ ಸುತ್ತಮುತ್ತಣ ಪ್ರದೇಶಗಳಲ್ಲಿ ಹೆಚ್ಚು ಬೆಳೆಯು ಬೆಳೆವುದು.

ಅರಕ್ಷಿತಾರೋ ಹರ್ತಾರಃ ಪಾರ್ಥಿವಾಶ್ಚ ಶಿಲಾಶನ ।
ಶೂದ್ರಾ ವೈ ಜ್ಞಾನಿನಃ ಸರ್ವೇ ಬ್ರಾಹ್ಮಣೈ ರಭಿವಂದಿತಾಃ ॥೧೧॥
ಅಕ್ಷತ್ರಿಯಾ ಶ್ಚ ರಾಜಾನೋ ವಿಪ್ರಾಃ ಶೂದ್ರೋಪಜೀವಿನಃ ।
ಆಸನಸ್ಥಾ ದ್ವಿಜಾನ್ ದೃಷ್ಟ್ವಾ ನ ಚಲಂತ್ಯಲ್ಪಬುದ್ಧಯಃ ॥೧೨॥
ತಾಡಯಂತಿ ದ್ವಿಜೇಂದ್ರಾಂಶ್ಚ ಶೂದ್ರಾವೈ ಸ್ವಲ್ಪಬುದ್ಧಯಃ ।
ಆಸ್ಯೇ ನಿಧಾಯ ವೈ ಹಸ್ತಂ ಕರ್ಣಂ ಶೂದ್ರಸ್ಯ ವೈ ದ್ವಿಜಾಃ ॥೧೩॥
ನೀಚಸ್ಯೇವ ತದಾ ವಾಕ್ಯಂ ವದಂತಿ ವಿನಯೇನ ತಂ ।
ಉಚ್ಚಾಸನಸ್ಥಾನ್ ಶೂದ್ರಾಂಶ್ಚ ದ್ವಿಜಮಧ್ಯೇ ದ್ವಿಜರ್ಷಭ ॥೧೪॥
ಜ್ಞಾತ್ವಾ ನ ಹಿಂಸತೇ ರಾಜಾ ಕಲೌ ಕಾಲವಶೇನ ತು ।
ಪುಷ್ಪೈಶ್ಚ ವಾಸಿತೈಶ್ಚೈವ ತಥಾಽನ್ಯೈರ್ಮಂಗಲ್ಯೈಃ ಶುಭೈಃ ॥೧೫॥

---

೧೧–೧೨. ಎಲೈ ಶಿಲಾದಮುನಿಯೇ, ಕಲಿಯುಗದಲ್ಲಿ ರಾಜರು ಪ್ರಜೆಗಳನ್ನು ದುಃಖದಿಂದ ಕಾಪಾಡುವ ಪ್ರಯತ್ನದಲ್ಲಿರುವುದಿಲ್ಲ. ಅವರು ಧನವನ್ನಪಹರಿಸುವ ಯತ್ನದಲ್ಲಿರುವರು. ಶೂದ್ರರು ಜ್ಞಾನಿಗಳಾಗಿ ಬ್ರಾಹ್ಮಣರ ನಮಸ್ಕಾರಗಳನ್ನು ಸ್ವೀಕರಿಸುವರಾಗಿರುವರು. ರಾಜರಲ್ಲಿ ಕ್ಷತ್ರಿಯರ ಶಕ್ತಿಯು ಇರುವುದಿಲ್ಲ. ಬ್ರಾಹ್ಮಣರು ಶೂದ್ರರ ಸೇವೆಯನ್ನು ಮಾಡಿ ಜೀವಿಸುವರು. ಆ ಶೂದ್ರರು ಪೀಠದ ಮೇಲೆ ಕುಳಿತು ಯೋಗ್ಯನಾದ ಬ್ರಾಹ್ಮಣನು ಬಂದರೂ ಅವನಿಗೆ ಮರ್ಯಾದೆ ಮಾಡದೇ ಬುದ್ಧಿಹೀನರಾಗಿ ಪೀಠವನ್ನು ಬಿಟ್ಟು ಚಲಿಸದೇ ಕುಳಿತಿರುವರು. ಮತ್ತು ಬ್ರಾಹ್ಮಣ ಶ್ರೇಷ್ಠರನ್ನು ದಂಡನೆ ಮಾಡುವರು.

೧೩–೧೪. ಬ್ರಾಹ್ಮಣರು ಕೈಯಿಂದ ಬಾಯನ್ನು ಮುಚ್ಚಿಕೊಂಡು ಕಿವಿಗೊಟ್ಟು ಶೂದ್ರನು ಹೇಳುವುದನ್ನು ಕೇಳುತ್ತ ನೀಚನಂತೆ ವಿನಯದಿಂದ ಅವನೊಡನೆ ಮಾತನಾಡುವರು. ಎಲೈ ಬ್ರಾಹ್ಮಣ ಶ್ರೇಷ್ಠನಾದ ಶಿಲಾದಮುನಿಯೇ, ಕಲಿಯುಗದಲ್ಲಿ ರಾಜನೂ ಕೂಡ ಕಾಲಕ್ಕೆ ಅಧೀನನಾಗಿ ಬ್ರಾಹ್ಮಣರ ನಡುವೆ ಎತ್ತರವಾದ ಪೀಠದಲ್ಲಿ ಕುಳಿತಿರುವ ಶೂದ್ರನನ್ನು ಕಂಡರೂ ಅವನನ್ನು ದಂಡಿಸುವುದಿಲ್ಲ.

೧೫–೧೬. ಜ್ಞಾನವೂ, ಪುಣ್ಯವೂ, ಬಲವೂ, ಇಲ್ಲದ ಜನರು ಸುವಾಸನೆಯಾದ ಹೂಗಳಿಂದಲೂ, ಇತರ ಶುಭಕರವಾದ ಗಂಧಾಲಂಕಾರ

ಶೂದ್ರಾನಭ್ಯರ್ಚಯಂತ್ಯಲ್ಪ ಶ್ರುತಭಾಗ್ಯ ಬಲಾನ್ವಿತಾಃ ।
ನ ಪ್ರೇಕ್ಷಂತೇ ಗರ್ವಿತಾಶ್ಚ ಶೂದ್ರಾ ದ್ವಿಜವರಾನ್ ದ್ವಿಜ ॥೧೬॥
ಸೇವಾವಸರಮಾಲೋಕ್ಯ ದ್ವಾರೇ ತಿಷ್ಠಂತಿ ವೈ ದ್ವಿಜಾಃ ।
ವಾಹನಸ್ಥಾನ್ ಸಮಾವೃತ್ಯ ಶೂದ್ರಾನ್ ಶೂದ್ರೋಪಜೀವಿನಃ ॥೧೭॥
ಸೇವಂತೇ ಬ್ರಾಹ್ಮಣಾಸ್ತತ್ರ ಸ್ತುವಂತಿ ಸ್ತುತಿಭಿಃ ಕಲೌ ।
ತಪೋಯಜ್ಞಫಲಾನಾಂ ಚ ವಿಕ್ರೇತಾರೋ ದ್ವಿಜೋತ್ತಮಾಃ ॥೧೮॥
ಯತಯಶ್ಚ ಭವಿಷ್ಯಂತಿ ಬಹವೋಽಸ್ಮಿನ್ ಕಲೌ ಯುಗೇ ।
ಪುರುಷಾಲ್ಪಂ ಬಹುಸ್ತ್ರೀಕಂ ಯುಗಾಂತೇ ಸಮುಪಸ್ಥಿತೇ ॥೧೯॥
ನಿಂದಂತಿ ವೇದ ವಿದ್ಯಾಂ ಚ ದ್ವಿಜಾಃ ಕರ್ಮಾಣಿ ವೈ ಕಲೌ ।
ಕಲೌ ದೇವೋ ಮಹಾದೇವಃ ಶಂಕರೋ ನೀಲಲೋಹಿತಃ ॥೨೦॥

---

ಗಳಿಂದಲೂ, ಶೂದ್ರರನ್ನು ಪೂಜಿಸುವರು. ಶೂದ್ರರು ಗರ್ವದಿಂದ ಕೂಡಿದವರಾಗಿ ಬ್ರಾಹ್ಮಣ ಶ್ರೇಷ್ಠರನ್ನು ನೋಡುವುದೇ ಇಲ್ಲ.

೧೭–೧೮. ಶೂದ್ರನನ್ನೇ ಆಶ್ರಯಿಸಿ ಜೀವಿಸುತ್ತಿರುವ ಬ್ರಾಹ್ಮಣರು ಸೇವೆಯ ಕಾಲವನ್ನು ತಿಳಿದು ಆ ಶೂದ್ರನ ಮನೆಯ ಬಾಗಿಲಿನಲ್ಲಿ ನಿಂತಿರುವರು. ವಾಹನದಲ್ಲಿ ಕುಳಿತು ಮನೆಗೆ ಬಂದ ಅವರನ್ನು ಸುತ್ತಿಕೊಂಡು ಸೇವಿಸಿ ಸ್ತೋತ್ರಮಾಡುವರು. ಕಲಿಯುಗದಲ್ಲಿ ಬ್ರಾಹ್ಮಣ ಶ್ರೇಷ್ಠರು ತಾವು ಮಾಡಿದ ತಪಸ್ಸು, ಮತ್ತು ಯಜ್ಞಗಳ ಫಲವನ್ನು ಮಾರಿಬಿಡುವರು.

೧೯. ಈ ಕಲಿಯುಗದಲ್ಲಿ ಸನ್ಯಾಸಿಗಳು ಅನೇಕರಿರುವರು. ಎಲ್ಲರೂ ವೇಷಧಾರಿಗಳು. ಕಲಿಯುಗವು ಕೊನೆಯಾಗುತ್ತಿರಲು ಪುರುಷರ ಸಂಖ್ಯೆಯು ಕಡಿಮೆಯಾಗಿ ಸ್ತ್ರೀಯರ ಸಂಖ್ಯೆಯು ಹೆಚ್ಚುವುದು. ಆ ಕಾಲದಲ್ಲಿ ಬ್ರಾಹ್ಮಣರು ವೇದವಿದ್ಯೆಯನ್ನೂ ಕರ್ಮಗಳನ್ನೂ ನಿಂದಿಸುವರು.

೨೦–೨೧. ಕಲಿಯುಗದಲ್ಲಿ ನೀಲಲೋಹಿತನೆಂದು ಪ್ರಸಿದ್ಧನಾದ ಶಿವನು ಸಕಲರಿಗೂ ದೇವನಾಗಿರುವನು. ಧರ್ಮವನ್ನು ನೆಲೆಗೊಳಿಸುವುದಕ್ಕಾಗಿ ಈಗ ಕಾಶೀ ಮುಂತಾದ ಕ್ಷೇತ್ರಗಳಲ್ಲಿ ಕಾಣುವಂತೆ ಭಿನ್ನಭಿನ್ನವಾದ ಲಿಂಗಸ್ವರೂಪನಾಗಿ ಪ್ರಕಾಶಿಸುತ್ತಿರುವನು. ಯಾವ ಮಾರ್ಗದಿಂದಲಾಗಲೀ ಬ್ರಾಹ್ಮಣರು ಆ ಲಿಂಗಪೂಜೆಯನ್ನು ಮಾಡಿದರೆ ಅವರು

ಪ್ರಕಾಶತೇ ಪ್ರತಿಷ್ಠಾರ್ಥಂ ಧರ್ಮಸ್ಯ ವಿಕೃತಾಕೃತಿಃ ।
ಏತಂ ವಿಪ್ರಾ ನಿಷೇವಂತೇ ಯೇನ ಕೇನಾಪಿ ಶಂಕರಂ ॥೨೦॥

ಕಲಿದೋಷಾನ್ವಿನಿರ್ಜಿತ್ಯ ಪ್ರಯಾಂತಿ ಪರಮಂ ಪದಂ ।
ಶ್ವಾಪದ ಪ್ರಬಲತ್ವಂಚ ಗವಾಂ ಚೈವ ಪರಿಕ್ಷಯಃ ॥೨೨॥

ಸಾಧೂನಾಂ ವಿನಿವೃತ್ತಿಶ್ಚ ವೇದ್ಯಾ ತಸ್ಮಿನ್ಯುಗಕ್ಷಯೇ ।
ತದಾ ಸೂಕ್ಷ್ಮೋ ಮಹೋದರ್ಕೋ ದುರ್ಲಭೋ ದಾನಮೂಲವಾನ್ ॥೨೩॥

ಚಾತುರಾಶ್ರಮ ಶೈಥಿಲ್ಯೇ ಧರ್ಮಃ ಪ್ರತಿಚಲಿಷ್ಯತಿ ।
ಅರಕ್ಷಿತಾರೋ ಹರ್ತಾರೋ ಬಲಿಭಾಗಸ್ಯ ಪಾರ್ಥಿವಾಃ ॥೨೪॥

ಯುಗಾಂತೇಷು ಭವಿಷ್ಯಂತಿ ಸ್ವರಕ್ಷಣ ಪರಾಯಣಾಃ ।
ಅಟ್ಟಶೂಲಾ ಜನಪದಾಃ ಶಿವಶೂಲಾ ಶ್ಚತುಷ್ಪಥಾಃ ॥೨೫॥

---

ಕಲಿಯುಗ ಸಂಬಂಧವಾದ ದೋಷಗಳಿಂದ ಸಂಭವಿಸಿದ ಪಾಪಗಳನ್ನು ಕಳೆದುಕೊಂಡು ಪರಮಪದವನ್ನು ಹೊಂದುವರು.

೨೨–೨೩. ಕಲಿಯುದ ಕೊನೆಯಲ್ಲಿ ಕಾಡುಗಳಲ್ಲಿ ಕ್ರೂರಮೃಗಗಳು ಹೆಚ್ಚಿ ಗೋವುಗಳು ನಾಶವಾಗುವುವು. ಸಜ್ಜನರು ಇರುವುದಿಲ್ಲ. ಆ ಕಾಲದಲ್ಲಿ ದಾನವೇ ಕಾರಣವಾದ ಸೂಕ್ಷ್ಮವಾದ ಸಂಪತ್ತು ಜನರಿಗೆ ದುರ್ಲಭವಾಗುವುದು.

೨೪. ನಾಲ್ಕು ಆಶ್ರಮದ ಧರ್ಮವೂ ಬಲಹೀನವಾಗುತ್ತಿರಲು ದೇಶಧರ್ಮವು ನಾಶವಾಗುವುದು. ರಾಜರು ಕಂದಾಯವನ್ನು ಮಾತ್ರ ತೆಗೆದುಕೊಂಡು ದೇಶರಕ್ಷಣೆಯನ್ನು ಬಿಡುವರು.

೨೫. ಕಲಿಯುಗದ ಕೊನೆಯಲ್ಲಿ ಜನರು ತಂತಮ್ಮ ರಕ್ಷಣೆಯನ್ನು ತಾವುತಾವು ಮಾಡಿಕೊಳ್ಳುವುದರಲ್ಲಿ ಆಸಕ್ತರಾಗುವರು. ದುರ್ಬಲರಾದವರ ರಕ್ಷಣೆಯ ಗಮನವೇ ಇರುವುದಿಲ್ಲ. ದೇಶದಲ್ಲಿ ಎಲ್ಲೆಲ್ಲಿಯೂ ಅನ್ನವನ್ನು ಮಾರುವರು. ಅಥವಾ ಕನ್ಯಾವಿಕ್ರಯಮಾಡುವರು. ಬ್ರಾಹ್ಮಣರು ವೇದಶಾಸ್ತ್ರಗಳನ್ನು ಮಾರುವರು. ಅಥವಾ ನಾಲ್ಕು ದಾರಿಗಳು ಕೂಡುವ ಸ್ಥಳದಲ್ಲಿಯೇ ವ್ಯಭಿಚಾರಾದಿಗಳ ವ್ಯಾಪಾರವು ನೆಡೆವುದು. ಸ್ತ್ರೀಯರು ತಮ್ಮ ದೇಹವಿಕ್ರಯವನ್ನು ಮಾಡುವರು, (ರಹಸ್ಯಾಂಗಗಳ ವಿಕ್ರಯವನ್ನೂ ಮಾಡುವರು.)

ಪ್ರಮುದಾಃ ಕೇಶ ಶೂಲಿನ್ಯೋ ಭವಿಷ್ಯಂತಿ ಕಲೌ ಯುಗೇ ।
ಚಿತ್ರವರ್ಷೀ ತದಾ ದೇವೋ ಯದಾ ಪ್ರಾಹು ರ್ಯುಗಕ್ಷಯಂ ॥
ಸರ್ವೇ ವಣಿಗ್ಜನಾಶ್ಚಾಪಿ ಭವಿಷ್ಯಂತ್ಯಧಮೇ ಯುಗೇ ।
ಕುಶೀಲಚರ್ಯಾಃ ಪಾಖಂಡೈಃ ವೃಥಾರೂಪೈಃ ಸಮಾವೃತಾಃ ॥೨೭॥
ಬಹುಯಾಜನಕೋ ಲೋಕೋ ಭವಿಷ್ಯತಿ ಪರಸ್ಪರಂ ।
ನಾವ್ಯಾಹೃತ ಕ್ರೂರವಾಕ್ಯೋ ನಾರ್ಜವೀ ನಾ ನಸೂಯಕಃ ॥೨೮॥
ನ ಕೃತೇ ಪ್ರತಿಕರ್ತಾ ಚ ಯುಗಕ್ಷೀಣೇ ಭವಿಷ್ಯತಿ ।
ನಿಂದಕಾಶ್ಚೈವ ಪತಿತಾ ಯುಗಾಂತಸ್ಯ ಚ ಲಕ್ಷಣಂ ॥೨೯॥
ನೃಪಶೂನ್ಯಾ ವಸುಮತೀ ನ ಚ ಧಾನ್ಯ ಧನಾವೃತಾ ।
ಮಂಡಲಾನಿ ಭವಿಷ್ಯಂತಿ ದೇಶೇಷು ನಗರೇಷು ಚ ॥೩೦॥

---

೨೬–೨೭. ದೇವೇಂದ್ರನು ಕಾಲಕಾಲಕ್ಕೆ ಸರಿಯಾಗಿ ಮಳೆಯನ್ನು ಸುರಿಸದೇ ಅಪರೂಪವಾಗಿ ಸುವೃಷ್ಟಿಯನ್ನುಂಟುಮಾಡುವ ಕಾಲವೇ ಯುಗದ ಕೊನೆಯೆಂದು ತಿಳಿಯಬೇಕು. ಆ ಯುಗದಲ್ಲಿ ಎಲ್ಲರೂ ವ್ಯಾಪಾರ ಕಾರ್ಯದಲ್ಲಿ ಪ್ರವೃತ್ತರಾಗಿರುವರು, ಕೆಟ್ಟ ನಡತೆಯುವರು, ವೈದಿಕಮಾರ್ಗ ವನ್ನು ಬಿಟ್ಟವರೂ ಡಾಂಭಿಕರೂ ಆಗಿರುವರು.

೨೮–೨೯. ಕಲಿಯುಗದ ಕೊನೆಯಲ್ಲಿ ಯೋಗ್ಯತೆಯಿಲ್ಲದಿದ್ದರೂ ಯಜ್ಞವನ್ನು ಮಾಡಿಸುವವರು ಅನೇಕರಾಗುವರು. ಪರಸ್ಪರ ಜಗಳ ವಾಡಿ ಕ್ರೂರವಾದ ಮಾತನ್ನಾಡದವರು ಸಿಕ್ಕುವುದೇಯಿಲ್ಲ. ಸರಳಸ್ವಭಾ ವದವರೂ, ಹೊಟ್ಟೇಕಿಚ್ಚಿಲ್ಲದವರೂ, ಉಪಕಾರಕ್ಕೆ ಪ್ರತ್ಯುಪಕಾರ ಮಾಡ ತಕ್ಕವರೂ, ಯಾರೂ ದೊರೆಯುವುದಿಲ್ಲ. ಎಲ್ಲರೂ ನಿಂದೆ ಮಾಡತಕ್ಕ ವರೂ, ಪಾಪಿಗಳೂ ಆಗಿರುವರು. ಇದೇ ಯುಗದ ಕೊನೆ ಎಂಬುದರ ಗುರುತಾಗಿರುವುದು.

೩೦–೩೧. ಭೂಮಿಯಲ್ಲಿ ರಾಜರಿಲ್ಲದೇ ಹೋಗುವರು. ಧನಧಾನ್ಯ ಗಳು ನಾಶವಾಗುವುವು. ದೇಶಗಳೂ, ನಗರಗಳೂ, ಜನಶೂನ್ಯವಾಗು

ಅಲ್ಪೋದಕಾ ಚಾಲ್ಪಫಲಾ ಭವಿಷ್ಯತಿ ವಸುಂಧರಾ ।
ಗೋಪ್ತಾರಶ್ಚಾಪ್ಯಗೋಪ್ತಾರಃ ಸಂಭವಿಷ್ಯಂತ್ಯಶಾಸನಾಃ ॥೩೧॥
ಹರ್ತಾರಃ ಪರವಿತ್ತಾನಾಂ ಪರದಾರ ಪ್ರಧರ್ಷಕಾಃ ।
ಕಾಮಾತ್ಮಾನೋ ದುರಾತ್ಮಾನೋ ಹ್ಯಧಮಾಃ ಸಾಹಸಪ್ರಿಯಾಃ ॥
ಪ್ರಣಷ್ಟಚೇಷ್ಟನಾಃ ಪುಂಸೋ ಮುಕ್ತ ಕೇಶಾಶ್ಚ ಶೂಲಿನಃ ।
ಜನಾಃ ಷೋಡಶ ವರ್ಷಾಶ್ಚ ಪ್ರಜಾಯಂತೇ ಯುಗಕ್ಷಯೇ ॥೩೩॥
ಶುಕ್ಲದಂತಾಜಿನಾಕ್ಷಾಶ್ಚ ಮುಂಡಾಃ ಕಾಷಾಯ ವಾಸಸಃ ।
ಶೂದ್ರಾ ಧರ್ಮಂ ಚರಿಷ್ಯಂತಿ ಯುಗಾಂತೇ ಸಮುಪಸ್ಥಿತೇ ॥೩೪॥
ಸಸ್ಯಚೌರಾ ಭವಿಷ್ಯಂತಿ ದೃಢಚೈಲಾಭಿಲಾಷಿಣಃ ।
ಚೌರಾ ಶ್ಚೋರ ಸ್ವಹರ್ತಾರೋ ಹರ್ತುರ್ಹರ್ತಾ ತಥಾ ಪರಃ ॥೩೫॥

---

ವುವು. ಭೂಮಿಯಲ್ಲಿ ನೀರೂ, ಫಲಗಳೂ, ಅಲ್ಪವಾಗುವುವು. ನಿರ್ಬಂಧ ವಿಲ್ಲದುದರಿಂದ ರಕ್ಷಕರೂ ಕೂಡ ತಮ್ಮ ರಕ್ಷಣಕಾರ್ಯವನ್ನು ಮಾಡುವುದಿಲ್ಲ.

೩೨. ಪರರ ಹಣವನ್ನು ದೋಚಿಕೊಳ್ಳುವರು, ಪರಸ್ತ್ರೀಯರನ್ನು ಕೆಡಿಸುವರು, ಕಾಮದಿಂದ ಕೂಡಿದ ಮನಸ್ಸುಳ್ಳವರಾಗಿ ದುಷ್ಟರಾಗಿ, ನೀಚರಾಗಿ ಅಸಾಧ್ಯವಾದ ಅಪಾಯಕರವಾದ ಕೆಲಸಗಳನ್ನು ಮಾಡುವರು.

೩೩. ಕಲಿಯುಗದ ಕೊನೆಯಲ್ಲಿ ಜನರು ಪುರುಷನ ಶಕ್ತಿಯನ್ನು ಕಳೆದುಕೊಂಡು ನಾಚಿಕೆಯಿಲ್ಲದವರಾಗಿ ರೋಗಿಗಳಾಗಿ ಹದಿನಾರು ವಯಸ್ಸಿಗೇ ಮರಣವನ್ನು ಹೊಂದುವರು. ಇಂಥವರೇ ಆಗ ಹುಟ್ಟುವರು.

೩೪. ಕಲಿಯುಗದ ಕೊನೆಯು ಬರುತ್ತಿರಲಾಗಿ ಶೂದ್ರರು ಸನ್ಯಾಸಿಗಳಾಗಿ ಕಾಷಾಯ (ಕಾವಿ) ವಸ್ತ್ರಗಳನ್ನು ಧರಿಸಿ ಬಿಳಿಯ ರುದ್ರಾಕ್ಷಿಗಳನ್ನೂ ಕೃಷ್ಣಾಜಿನವನ್ನೂ ಧರಿಸಿ ಧರ್ಮವನ್ನು ದಂಭಕ್ಕೆ ಆಚರಿಸುವರು.

೩೫. ಕಲಿಯುಗದಲ್ಲಿ ಮಾತಿಗೆ ತಪ್ಪುವರು ವಿಶೇಷವಾಗಿರುತ್ತಾರೆ. ಕಳ್ಳರು ಕಳ್ಳರ ಒಡವೆಯನ್ನೇ ಕದಿಯುತ್ತಾರೆ.

ಯೋಗ್ಯಕರ್ಮಣ್ಯುಪರತೇ ಲೋಕೇ ನಿಷ್ಕ್ರಿಯತಾಂ ಗತೇ ।
ಕೀಟ ಮೂಷಕ ಸರ್ಪಾಶ್ಚ ಧರ್ಷಯಿಷ್ಯಂತಿ ಮಾನವಾನ್ ॥೩೬॥
ಸುಭಿಕ್ಷಂ ಕ್ಷೇಮ ಮಾರೋಗ್ಯಂ ಸಾಮರ್ಥ್ಯಂ ದುರ್ಬಲಂ ತದಾ ।
ಕೌಶಿಕೀಂ ಪ್ರತಿಪತ್ಸ್ಯಂತೇ ದೇಶಾನ್ ಕ್ಷುದ್ಭಯ ಪೀಡಿತಾಃ ॥೩೭॥
ದುಃಖೇನಾಭಿ ಪ್ಲುತಾನಾಂ ಚ ಪರಮಾಯುಃ ಶತಂ ತದಾ ।
ದೃಶ್ಯಂತೇ ನ ಚ ದೃಶ್ಯಂತೇ ವೇದಾಃ ಕಲಿಯುಗೇಽಖಿಲಾಃ ॥೩೮॥
ಉತ್ಸೀದಂತಿ ತದಾ ಯಜ್ಞಾಃ ಕೇವಲಾ ಧರ್ಮ ಪೀಡಿತಾಃ ।
ಕಾಷಾಯಿಣೋಽಪ್ಯನಿರ್ಗ್ರಂಥಾಃ ಕಾಪಾಲೀ ಬಹುಲಾಸ್ತ್ವಿಹ॥೩೯॥
ವೇದ ವಿಕ್ರಯಿಣಶ್ಚಾನ್ಯೇ ತೀರ್ಥ ವಿಕ್ರಯಿಣಃ ಪರೇ ।
ವರ್ಣಾಶ್ರಮಾಣಾಂ ಯೇ ಚಾನ್ಯೇ ಪಾಖಂಡಾಃ ಪರಿಪಂಥಿನಃ ॥೪೦॥

---

೩೬–೩೭. ಯೋಗ್ಯವಾದ ಕರ್ಮಗಳು ನಾಶವಾಗಿ ಲೋಕವೆಲ್ಲವೂ ಕರ್ಮ ಹೀನವಾಗಲು ಹುಳುಗಳೂ, ಇಲಿಗಳೂ, ಹಾವುಗಳೂ, ಮನುಷ್ಯರನ್ನು ಹೆದರಿಸುವುವು. ಸುಭಿಕ್ಷವೂ, ಸುಖವೂ, ಆರೋಗ್ಯವೂ, ಶಕ್ತಿಯೂ ಆಗ ದುರ್ಲಭವಾಗುವುದು. ಹಸಿವಿನ ಭಯದಿಂದ ಪೀಡಿತರಾದ ಜನರು ಆಗ ಕೌಶಿಕೀನದಿಯು ಹರಿಯುತ್ತಿರುವ ಜಾಗಕ್ಕೆ ಹೋಗುವರು.

೩೮. ಆಗ ದುಖವನ್ನು ಅನುಭವಿಸುತ್ತಿರುವ ಜನರಿಗೆ ಸಂಪೂರ್ಣವಾಗಿ ನೂರು ವರ್ಷ ಆಯುಃ ಪ್ರಮಾಣವಿರುವುದು. ಆ ಕಲಿಯುಗದಲ್ಲಿ ಸಮಸ್ತ ದೇವತೆಗಳೂ ಕಂಡು ಕಾಣದವರಾಗಿರುವವರು.

೩೯. ಆಗ ಅಧರ್ಮವು ಹೆಚ್ಚಿ ಅದರಿಂದ ಯಜ್ಞಕರ್ಮಗಳು ನಾಶವಾಗುವುವು. ಕಾವೀ ಬಟ್ಟೆಯನ್ನು ಧರಿಸಿದವರೂ, ಮೂರ್ಖರಾದ ಕಾಪಾಲಿಕರೂ ಬಹಳವಾಗಿರುವರು.

೪೦. ಕೆಲವರು ವೇದಪಾರಾಯಣ ಮಾಡಿದ ಫಲವನ್ನೂ, ಕೆಲವರು ತೀರ್ಥಯಾತ್ರೆಯನ್ನು ಮಾಡಿದ ಫಲವನ್ನೂ, ಮತ್ತೆ ಕೆಲವರು ವರ್ಣಾಶ್ರಮ ಧರ್ಮವನ್ನು ನಡೆಸಿದ ಫಲವನ್ನೂ ಮಾರುವರು. ಮತ್ತೆ ಕೆಲವರು ವೇದ ವಿಧಿಯಲ್ಲಿ ನಂಬಿಕೆ ಇಲ್ಲದವರಾಗಿ ವೇದ ವಿಹಿತ ಕರ್ಮಗಳಿಗೆ ವಿಘ್ನವನ್ನುಂಟುಮಾಡುವರು.

ಉತ್ಪದ್ಯಂತೇ ತದಾ ತೇ ವೈ ಸಂಪ್ರಾಪ್ತೇ ತು ಕಲೌ ಯುಗೇ ।
ಅಧೀಯಂತೇ ತದಾ ವೇದಾನ್ ಶೂದ್ರಾ ಧರ್ಮಾರ್ಥ ಕೋವಿದಾಃ ॥
ಯಜಂತೇ ಚಾಶ್ವಮೇಧೇನ ರಾಜಾನಃ ಶೂದ್ರಯೋನಯಃ ।
ಸ್ತ್ರೀ ಬಾಲ ಗೋವಧಂ ಕೃತ್ವಾ ಹತ್ವಾ ಚೈವ ಪರಸ್ಪರಂ ॥೪೨॥
ಉಪದ್ರವಾಂಸ್ತದಾsನ್ಯೋsನ್ಯಂ ಸಾಧಯಂತಿ ತದಾ ಪ್ರಜಾಃ ।
ದುಃಖಪ್ರಭೂತ ಮಲ್ಪಾಯು ರ್ದೇಹೋತ್ಸಾದಃ ಸರೋಗತಾ ॥೪೩॥
ಅಧರ್ಮಾಭಿನಿವೇಶಿತ್ವಾ ತ್ತಮೋವೃತ್ತಂ ಕಲೌ ಸ್ಮೃತಂ ।
ಪ್ರಜಾಸು ಬ್ರಹ್ಮಹತ್ಯಾದಿ ತದಾ ವೈ ಸಂಪ್ರವರ್ತತೇ ॥೪೪॥
ತಸ್ಮಾದಾಯುರ್ಬಲಂರೂಪಂ ಕಲಿಂ ಪ್ರಾಪ್ಯ ಪ್ರಹೀಯತೇ ।
ತದಾ ತ್ವಲ್ಪೇನ ಕಾಲೇನ ಸಿದ್ಧಿಂ ಗಚ್ಛಂತಿ ಮಾನವಾಃ ॥೪೫॥

---

೪೧. ಕಲಿಯುಗದಲ್ಲಿ ಇಂತಹ ಜನಗಳೇ ಹೆಚ್ಚಾಗಿ ಹುಟ್ಟುವರು. ಆಗ ಶೂದ್ರರು ಧರ್ಮಕಾರ್ಯ ಮಾಡುವುದರಲ್ಲಿಯೂ, ಹಣದ ಸಂಪಾದನೆಯಲ್ಲಿಯೂ, ಆಸಕ್ತರಾಗಿ ವೇದಗಳನ್ನು ಅಭ್ಯಾಸ ಮಾಡುವರು.

೪೨. ಶೂದ್ರವಂಶದಲ್ಲಿ ಹುಟ್ಟಿದ ರಾಜರುಗಳು ಅಶ್ವಮೇಧ ಯಜ್ಞವನ್ನು ಮಾಡುವರು. ಆಗ ಪ್ರಜೆಗಳು ಸ್ತ್ರೀಯರನ್ನೂ, ಬಾಲಕರನ್ನೂ, ಗೋವುಗಳನ್ನೂ, ಕೊಲ್ಲುವುದಲ್ಲದೇ ವೈರದಿಂದ ಒಬ್ಬರಿಗೊಬ್ಬರು ಹೊಡೆದಾಡಿ ಲೋಕಕ್ಕೆ ತೊಂದರೆಯನ್ನುಂಟು ಮಾಡುವರು.

೪೩–೪೪. ಕಲಿಯುಗದಲ್ಲಿ ಜನರಿಗೆ ದುಃಖವು ಹೆಚ್ಚು. ಆಯುಸ್ಸು ಸ್ವಲ್ಪ. ಶರೀರವು ರೋಗದಿಂದ ಕೂಡಿರುವುದು. ಮತ್ತು ಕೃಶವಾಗುತ್ತಿರುವುದು. ಅಧರ್ಮಾಸಕ್ತಿಯಿಂದ ತಮೋಗುಣದ ನಡತೆಯು ಹೆಚ್ಚಾಗಿರುವುದು. ಆಗ ಪ್ರಜೆಗಳಿಗೆ ಬ್ರಹ್ಮಹತ್ಯಾದಿ ಪಾಪಗಳು ಫಲಕೊಡಲು ಸಿದ್ಧವಾಗಿರುವುವು. ಆ ಕಾರಣದಿಂದ ಆಯುಸ್ಸು, ಬಲ, ರೂಪ ಇವುಗಳೆಲ್ಲವೂ ಕ್ಷೀಣವಾಗುತ್ತಿರುವುವು.

೪೫–೪೬. ಆದರೂ ಕಲಿಯುಗದಲ್ಲಿ ಯಾರು ಶ್ರುತಿ ಸ್ಮೃತಿಗಳಲ್ಲಿ ಹೇಳಿದ ಧರ್ಮವನ್ನು ವಿರೋಧವಿಲ್ಲದಂತೆ ನಡೆಸಿಕೊಂಡು ಬರುವರೋ

ಧನ್ಯಾ ಧರ್ಮಂ ಚರಿಷ್ಯಂತಿ ಯುಗಾಂತೇ ದ್ವಿಜಸತ್ತಮಾಃ ।
ಶ್ರುತಿ ಸ್ಮೃತ್ಯುದಿತಂ ಧರ್ಮಂ ಯೇ ಚರಂತ್ಯನಸೂಯಕಾಃ ॥೪೬॥
ತ್ರೇತಾಯಾಂ ವಾರ್ಷಿಕೋ ಧರ್ಮೋ ದ್ವಾಪರೇ ಮಾಸಿಕಃ ಸ್ಮೃತಃ।
ಯಥಾ ಕ್ಲೇಶಂ ಚರನ್ ಪ್ರಾಜ್ಞಃ ತದಹ್ನಾ ಪ್ರಾಪ್ನುತೇ ಕಲೌ ॥೪೭॥
ಏಷಾ ಕಲಿಯುಗಾವಸ್ಥಾ ಸಂಧ್ಯಾಂ ಶಂ ತು ನಿಭೋಧ ಮೇ ।
ಯುಗೇ ಯುಗೇಚ ಹೀಯಂತೇತ್ರೀಂಸ್ತ್ರೀನ್ ಪಾದಾಂಸ್ತುಸಿದ್ಧಯಃ
ಯುಗಸ್ವಭಾವಾಃ ಸಂಧ್ಯಾಸ್ತು ತಿಷ್ಠಂತೀಹ ತು ಪಾದಶಃ ।
ಸಂಧ್ಯಾಸ್ವಭಾವಾಃ ಸಾಂಶೇಷು ಪಾದಶಸ್ತೇ ಪ್ರತಿಷ್ಠಿತಾಃ ॥೪೯॥

---

ಅವರು ಅಲ್ಪಕಾಲದಲ್ಲಿಯೇ ತಪ್ಪದೆ ಅದರ ಫಲವನ್ನು ಪಡೆಯುವರು. ಯುಗದ ಕೊನೆಯಲ್ಲಿ ಧರ್ಮವನ್ನಾಚರಿಸುವ ಬ್ರಾಹ್ಮಣ ಶ್ರೇಷ್ಠರೇ ಪುಣ್ಯವಂತರು.

೪೭. ತ್ರೇತಾಯುಗದಲ್ಲಿ ಒಂದು ವರ್ಷ ಕಷ್ಟವನ್ನು ಸಹಿಸಿ ಮಾಡುವ ಧರ್ಮದ ಫಲವು ದ್ವಾಪರದಲ್ಲಿ ಒಂದು ತಿಂಗಳಲ್ಲಿ ದೊರೆಯುವುದು. ಕಲಿಯುಗದಲ್ಲಿ ಅದು ಒಂದು ದಿನದಲ್ಲಿಯೇ ಫಲಕೊಡುವುದು. ವಿಷ್ಣುಪುರಾಣದಲ್ಲಿಯೂ, "ಯತ್ಕೃತೇ ದಶಭಿರ್ವರ್ಷೈಃ ತ್ರೇತಾಯಾಂ ಹಾಯನೇನ ತತ್ । ದ್ವಾಪರೇ ತಚ್ಚ ಮಾಸೇನ ಅಹೋರಾತ್ರೇಣ ತತ್ಕಲೌ। ತಪಸೋ ಬ್ರಹ್ಮಚರ್ಯಸ್ಯ ಜಪಾದೇಶ್ಚ ಫಲಂದ್ವಿಜಾಃ । ಪ್ರಾಪ್ನೋತಿ ಪುರುಷಸ್ತೇನ ಕಲಿಃ ಸಾಧ್ವಿತಿಭಾಷಿತಂ॥" ಎಂದು ಹೇಳಿರುವುದು.

೪೮. ಇದುವರೆಗೆ ಹೇಳಿದುದೇ ಕಲಿಯುಗ ಸ್ವರೂಪವು. ಇನ್ನು ಸಂಧಿಕಾಲಸ್ವರೂಪವನ್ನು ಹೇಳುವೆನು, ಕೇಳು. ಪ್ರತಿಯೊಂದು ಯುಗದಲ್ಲಿಯೂ ಸಿದ್ಧಿಗಳು ಮುಕ್ಕಾಲು ಭಾಗದಷ್ಟು ಕಡಿಮೆಯಾಗುವುವು. ಎಂದರೆ ಕೃತಯುಗದಲ್ಲಿ ಪೂರ್ಣವಾದ ಸಿದ್ಧಿಯಿದ್ದರೆ ತ್ರೇತಾಯುಗದಲ್ಲಿ ಕಾಲುಭಾಗವಿರುವುದು. ದ್ವಾಪರದಲ್ಲಿ ತ್ರೇತಾಯುಗದ ಸಿದ್ಧಿಯ ಮುಕ್ಕಾಲು ಭಾಗವು ಕಡಿಮೆಯಾಗುವುದು. ಇದರಂತೆಯೇ ಕಲಿಯುಗದಲ್ಲಿ ದ್ವಾಪರ ಯುಗದ ಸಿದ್ಧಿಯ ಮುಕ್ಕಾಲುಭಾಗವು ಕಡಿಮೆಯಾಗುವುದು.

೪೯. ಯುಗಧರ್ಮದಲ್ಲಿ ಕಾಲುಭಾಗವು ಕಡಿಮೆಯಾಗಿ ಸಂಧಿಕಾಲದಲ್ಲಿ ನಡೆಯುವುದು. ಸಂಧಿಕಾಲದ ಧರ್ಮದ ಕಾಲುಭಾಗವು ಕಡಿಮೆಯಾಗಿ ಸಂಧ್ಯಂಶದಲ್ಲಿ ನಡೆಯುವುದು.

ಏವಂ ಸಂಧ್ಯಾಂಶಕೇ ಕಾಲೇ ಸಂಪ್ರಾಪ್ತೇ ತು ಯುಗಾಂತಿಕೇ ।
ತೇಷಾಂ ಶಾಸ್ತಾ ಹ್ಯಸಾಧೂನಾಂ ಭೂತಾನಾಂ ನಿಧನೋತ್ಥಿತಃ॥೫೦॥

ಗೋತ್ರೇಽಸ್ಮಿನ್ ವೈ ಚಂದ್ರಮಸೋ ನಾಮ್ನಾ ಪ್ರಮಿತಿರುಚ್ಯತೇ ।
ಮಾನವಸ್ಯ ತು ಸೋಽಂಶೇನ ಪೂರ್ವಂ ಸ್ವಾಯಂ ಭುವೇಽಂತರೇ ॥

ಸಮಾಃ ಸಮಿಂಶತಿಃ ಪೂರ್ಣಾ ಪರ್ಯಟನ್ವೈ ವಸುಂಧರಾಂ ।
ಅನುಕರ್ಷನ್ ಸ ವೈ ಸೇನಾಂ ಸವಾಜಿರಥಕುಂಜರಾಂ ॥೫೨॥

ಪ್ರಗೃಹೀತಾಯುಧೈರ್ವಿಪ್ರೈಃ ಶತಶೋಽಥ ಸಹಸ್ರಶಃ ।
ಸ ತದಾ ತೈಃ ಪರಿವೃತೋ ಮ್ಲೇಚ್ಛಾನ್ಹಂತಿ ಸಹಸ್ರಶಃ ॥೫೩॥

ಸ ಹತ್ವಾ ಸರ್ವಶಶ್ಚೈವ ರಾಜ್ಞಃಸ್ತಾನ್ ಶೂದ್ರಯೋನಿಜಾನ್ ।
ಪಾಖಂಡಾಂಸ್ತುತತಃ ಸರ್ವಾನ್ನಿಶ್ಶೇಷಂ ಕೃತವಾನ್ ಪ್ರಭುಃ॥೫೪॥

ನಾತ್ಯಂತಂ ಧಾರ್ಮಿಕಾ ಯೇ ಚ ತಾನ್‌ಸರ್ವಾನ್ ಹಂತ ಸರ್ವತಃ ।
ವರ್ಣವ್ಯತ್ಯಾಸ ಜಾತಾಶ್ಚ ಯೇ ಚ ತಾನನುಜೀವಿನಃ ॥೫೫॥

---

೫೦. ಹೀಗೆ ಯುಗದ ಕೊನೆಯಲ್ಲಿ ಸಂಧಿಕಾಲದ ಅಂಶವು ಪ್ರಾಪ್ತವಾದಾಗ, ಆಗ ಇದ್ದ ದುಷ್ಟರಾದ ಜನರನ್ನು ದಂಡಿಸುವುದಕ್ಕೂ, ಅವರನ್ನು ನಾಶಮಾಡುವುದಕ್ಕೂ, ವಿಷ್ಣುವು ಅವತಾರ ಮಾಡುವನು.

೫೧. ಹಿಂದೆ ಸ್ವಾಯಂಭುವ ಮನ್ವಂತರದಲ್ಲಿದ್ದ ಪ್ರಮಿತಿ ಎಂಬ ಹೆಸರಿನ ಮನುಪುತ್ರನ ಅಂಶದಿಂದ ಸೋಮಶರ್ಮನೆಂಬ ಬ್ರಾಹ್ಮಣನ ಗೋತ್ರದಲ್ಲಿ ವಿಷ್ಣುವು ಅವತರಿಸುವನು.

೫೨–೫೩. ಆ ಕಲ್ಕಿ ಅವತಾರವನ್ನು ಮಾಡಿದ ವಿಷ್ಣುವು ಇಪ್ಪತ್ತು ವರ್ಷಗಳ ವರೆಗೆ ಭೂಮಿಯಲ್ಲೆಲ್ಲಾ ಸಂಚರಿಸಿ ಚತುರಂಗ ಸೇನೆಗಳನ್ನು ಕೂಡಿಸಿ, ಆಯುಧವನ್ನು ಧರಿಸಿದ ಬ್ರಾಹ್ಮಣರಿಂದ ಕೂಡಿ ಅನೇಕ ಮ್ಲೇಚ್ಛರನ್ನು ಕೊಲ್ಲುವನು.

೫೪–೫೫. ಆ ಕಲ್ಕಿಯು ಶೂದ್ರವಂಶದಲ್ಲಿ ಹುಟ್ಟಿದ ರಾಜರನ್ನೆಲ್ಲರನ್ನೂ ಕೊಂದು ವೇದನಿಂದಕರಾದ ಪಾಷಂಡಿಗಳನ್ನೆಲ್ಲರನ್ನೂ ನಾಶಮಾಡುವನು. ಎಲ್ಲೆಡೆಯಲ್ಲಿಯೂ ವಿಶೇಷವಾಗಿ ಅಧರ್ಮ ಮಾರ್ಗದಲ್ಲಿರುವವರನ್ನೂ, ವರ್ಣವ್ಯತ್ಯಾಸದಿಂದ ಹುಟ್ಟಿದವರನ್ನೂ, ಅವರನ್ನು ಅನುಸರಿಸಿದವರನ್ನೂ ನಾಶಮಾಡುವನು.

ಪ್ರವೃತ್ತ ಚಕ್ರೋ ಬಲವಾನ್ ಮ್ಲೇಚ್ಛಾನಾಮಂತಕೃತ್ಸ ತು ।
ಅಧೃಷ್ಯಃ ಸರ್ವಭೂತಾನಾಂ ಚಚಾರಾಥ ವಸುಂಧರಾಂ ॥೫೬॥

ಮಾನವಸ್ಯ ತು ಸೋಽಂಶೇನ ದೇವಸ್ಯ ಹ ವಿಜಜ್ಞಿವಾನ್ ।
ಪೂರ್ವಜನ್ಮನಿ ವಿಷ್ಣೋಸ್ತು ಪ್ರಮಿತಿರ್ನಾಮ ವೀರ್ಯವಾನ್ ॥೫೭॥

ಗೋತ್ರತೋ ವೈ ಚಂದ್ರಮಸಃ ಪೂರ್ಣೇ ಕಲಿಯುಗೇ ಪ್ರಭುಃ ।
ದ್ವಾತ್ರಿಂಶೇಽಭ್ಯುತ್ಥಿತೇ ವರ್ಷೇ ಪ್ರಕ್ರಾಂತೋ ವಿಂಶತಿಃ ಸಮಾಃ॥೫೮॥

ವಿನಿಘ್ನನ್ ಸರ್ವಭೂತಾನಿ ಶತಶೋಽಥ ಸಹಸ್ರಶಃ ।
ಕೃತ್ವಾ ಬೀಜಾವಶೇಷಾಂ ತು ಪೃಥಿವೀಂ ಕ್ರೂರಕರ್ಮಣಃ ॥೫೯॥

ಪರಸ್ಪರ ನಿಮಿತ್ತೇನ ಕೋಪೇನಾಕಸ್ಮಿಕೇನ ತು ।
ಸ ಸಾಧಯಿತ್ವಾ ವೃಷಲಾನ್ ಪ್ರಾಯಶಸ್ತಾನ ಧಾರ್ಮಿಕಾನ್ ॥೬೦॥

ಗಂಗಾ ಯಮುನಯೋರ್ಮಧ್ಯೇ ಸ್ಥಿತಿಂ ಪ್ರಾಪ್ತಃ ಸಹಾನುಗಃ ।
ತತೋ ವ್ಯತೀತೇ ಕಾಲೇ ತು ಸಾಮಾತ್ಯಃ ಸಹ ಸೈನಿಕಃ ॥೬೧॥

---

೫೬. ಆ ಕಲ್ಕಿಯು ಬಲಶಾಲಿಯಾಗಿ ಆ ಕಾಲದಲ್ಲಿದ್ದ ಯಾವ ಮನುಜರಿಗೂ ಜಯಿಸಲಸಾಧ್ಯನಾಗಿ ತನ್ನ ಆಜ್ಞೆಯನ್ನು ನಡೆಸುತ್ತ ಮ್ಲೇಚ್ಛರನ್ನು ನಾಶಮಾಡುತ್ತ ಭೂಮಿಯಲ್ಲಿ ಸಂಚರಿಸುವನು.

೫೭–೬೦. ಪೂರ್ವಜನ್ಮದಲ್ಲಿ ಸ್ವಾಯಂಭುವ ಮನು ಪುತ್ರನಾದ ಪ್ರಮಿತಿ ಎಂಬ ಶೂರನು ಈ ಜನ್ಮದಲ್ಲಿ ವಿಷ್ಣುವಿನ ಅವತಾರಕ್ಕಾಗಿ ಕಲಿಯುಗದಲ್ಲಿ ಸೋಮಶರ್ಮನೆಂಬ ಬ್ರಾಹ್ಮಣನ ವಂಶದಲ್ಲಿ ಹುಟ್ಟಿದನು. ಇಪ್ಪತ್ತು ವರ್ಷಗಳವರೆಗೆ ಭೂಮಿಯಲ್ಲೆಲ್ಲ ಸಂಚರಿಸಿ, ಮ್ಲೇಚ್ಛರನ್ನೂ ಕ್ರೂರಕರ್ಮಿಗಳಾದ ಜನರನ್ನೂ ಕೊಂದು, ಶೂದ್ರ ರಾಜರುಗಳನ್ನು ಆಕಸ್ಮಿಕವಾಗಿ ಉಂಟಾದ ಕೋಪದಿಂದ ಅವರವರಲ್ಲಿಯೇ ವಿರೋಧವು ಹುಟ್ಟಿ ಅಧರ್ಮದಿಂದ ಹೊಡೆದಾಡುತ್ತಿದ್ದವರನ್ನೆಲ್ಲರನ್ನೂ ಜಯಿಸಿ ತನ್ನ ಮೂವತ್ತೆರಡನೆಯ ವಯಸ್ಸಿನಲ್ಲಿ ತನ್ನ ಪರಿವಾರದೊಡನೆ ಗಂಗಾ ಯಮುನಾ ನದಿಗಳ ಮಧ್ಯ ಪ್ರದೇಶದಲ್ಲಿ ವಾಸಮಾಡುವನು.

೬೧–೬೩. ಆಮೇಲೆ ಕೆಲವುಕಾಲ ಕಳೆದಮೇಲೆ ಕಲ್ಕಿಯು ತನ್ನ ಮಂತ್ರಿಗಳೊಡನೆಯೂ ಸೈನಿಕರೊಡನೆಯೂ ಕೂಡಿ ಸಕಲ ದುಷ್ಟರಾಜರು

ಉತ್ಸಾದ್ಯ ಪಾರ್ಥಿವಾಸ್ ಸರ್ವಾನ್ ಮ್ಲೇಚ್ಛಾಂಶ್ಚೈವ ಸಹಸ್ರಶಃ ।
ತತ್ರಸಂಧ್ಯಾಂಶಕೇ ಕಾಲೇ ಸಂಪ್ರಾಪ್ತೇ ತು ಯುಗಾಂತಿಕೇ ॥೬೨॥

ಸ್ಥಿತಾಸ್ವಲ್ಪಾವಶಿಷ್ಟಾಸು ಪ್ರಜಾಸ್ವಿಹ ಕ್ವಚಿತ್ಕ್ವಚಿತ್ ।
ಅಪ್ರಗ್ರಹಾಸ್ತತಸ್ತಾ ವೈ ಲೋಭಾವಿಷ್ಟಾಸ್ತು ಕೃತ್ಸ್ನಶಃ ॥೬೩॥

ಉಪಹಿಂಸಂತಿ ಚಾನ್ಯೋನ್ಯಂ ಪ್ರಣಿಪತ್ಯ ಪರಸ್ಪರಂ ।
ಅರಾಜಕೇ ಯುಗವಶಾತ್ಸಂಶಯೇ ಸಮುಪಸ್ಥಿತೇ ॥೬೪॥

ಪ್ರಜಾಸ್ತಾ ವೈ ತತಃ ಸರ್ವಾಃ ಪರಸ್ಪರ ಭಯಾರ್ದಿತಾಃ ।
ವ್ಯಾಕುಲಾಶ್ಚ ಪರಿಭ್ರಾಂತಾ ಸ್ತ್ಯಕ್ತ್ವಾ ದಾರಾನ್ ಗೃಹಾಣಿ ಚ ॥೬೫॥

ಸ್ವಾನ್ಪ್ರಾಣಾನನಪೇಕ್ಷಂತೋ ನಿಷ್ಕಾರುಣ್ಯಾಃ ಸುದುಃಖಿತಾಃ ।
ನಷ್ಟೇ ಶ್ರೌತೇ ಸ್ಮಾರ್ತಧರ್ಮೇ ಪರಸ್ಪರ ಹತಾಸ್ತದಾ ॥೬೬॥

ನಿರ್ಮರ್ಯಾದಾ ನಿರಾಕ್ರಾಂತಾ ನಿಃಸ್ನೇಹಾ ನಿರಪತ್ರಪಾಃ ।
ನಷ್ಟೇ ಧರ್ಮೇ ಪ್ರತಿಹತಾಃ ಹ್ರಸ್ವಕಾಃ ಪಂಚ ವಿಂಶಕಾಃ ॥೬೭॥

---

ಗಳನ್ನೂ, ಮ್ಲೇಚ್ಛರನ್ನೂ, ನಾಶಮಾಡಿ ಬಿಡುವನು. ಯುಗದ ಕೊನೆಯಲ್ಲಿ ಸಂಧ್ಯಂಶವು ಪ್ರಾಪ್ತವಾದಾಗ ಅಲ್ಲಲ್ಲಿ ಪ್ರಜೆಗಳು ಅಲ್ಪಸ್ವಲ್ಪವಾಗಿ ಉಳಿದುಕೊಂಡಿರುವರು. ಅವರಿಗೆ ಜೀವನಕ್ಕೆ ಬೇಕಾದ ಪದಾರ್ಥಗಳು ಸಿಕ್ಕದಿರಲು ಅತ್ಯಾಸೆಯಿಂದ ಕೂಡಿದವರಾಗಿ ಎಲ್ಲರೂ ಒಬ್ಬರನ್ನೊಬ್ಬರು ಹಿಂಸಿಸುವರು.

೬೪–೬೫. ಯುಗಧರ್ಮದಿಂದ ದೇಶದಲ್ಲಿ ರಾಜರಿಲ್ಲದೇ ಹೋಗಲು ಎಲ್ಲರೂ ಸಂದೇಹಗ್ರಸ್ತರಾಗಿ ಒಬ್ಬರಿಂದೊಬ್ಬರು ಭಯಪಡುತ್ತ ದುಖಿಃತರಾಗಿ ಭ್ರಾಂತಿಯಿಂದ ಮನೆಯನ್ನೂ ಹೆಂಡಿತಿ ಮಕ್ಕಳನ್ನೂ ಬಿಟ್ಟು ತಮ್ಮ ಪ್ರಾಣರಕ್ಷಣೆಯ ವಿಷಯದಲ್ಲಿಯೂ ಗಮನವಿಡದೆ ಕರುಣ ವಿಲ್ಲದವರಾಗಿ ಅತ್ಯಂತ ದುಃಖಪಡುವರು.

೬೬–೬೮. ಶ್ರೌತಸ್ಮಾರ್ತ ಧರ್ಮಗಳು ನಾಶವಾಗಲು ಜನರೆಲ್ಲರೂ ಒಂದು ಕಟ್ಟಿಲ್ಲದವರಾಗಿ ಪರಸ್ಪರ ಸಹಾಯವನ್ನು ಬಿಟ್ಟು ಪ್ರೀತಿಯಿಲ್ಲದವರಾಗಿಯೂ, ನಾಚಿಕೆಯಿಲ್ಲದವರಾಗಿಯೂ, ಇರುವರು. ಧರ್ಮನಾಶವಾಗಲು ಭ್ರಾಂತಚಿತ್ತರಾಗಿ, ಕುಳ್ಳರಾಗಿ ಇಪ್ಪತ್ತೈದು ವರ್ಷ ಆಯುಃ

ಹಿತ್ವಾ ಪುತ್ರಾಂಶ್ಚ ದಾರಾಂಶ್ಚ ವಿವಾದ ವ್ಯಾಕುಲೇಂದ್ರಿಯಾಃ ।
ಅನಾವೃಷ್ಟಿ ಹತಾಶ್ಚೈವ ವಾರ್ತಾಮುತ್ಸೃಜ್ಯ ದೂರತಃ ॥೬೮॥
ಪ್ರತ್ಯಂತಾ ನುಪಸೇವಂತೇ ಹಿತ್ವಾ ಜನಪದಾನ್ ಸ್ವಕಾನ್ ।
ಸರಿತ್ಸಾಗರ ಕೂಪಾಂಸ್ತೇ ಸೇವಂತೇ ಪರ್ವತಾಂಸ್ತಥಾ ॥೬೯॥
ಮಧು ಮಾಂಸೈ ರ್ಮೂಲ ಫಲೈರ್ವರ್ತಯಂತಿ ಸುದುಃಖಿತಾಃ ।
ಚೀರಪತ್ರಾಜಿನಧರಾ ನಿಷ್ಕ್ರಿಯಾ ನಿಷ್ಪರಿಗ್ರಹಾಃ ॥೭೦॥
ವರ್ಣಾಶ್ರಮ ಪರಿಭ್ರಷ್ಟಾಃ ಸಂಕಟಂ ಘೋರಮಾಸ್ಥಿತಾಃ ।
ಏವಂ ಕಷ್ಟ ಮನುಪ್ರಾಪ್ತಾ ಅಲ್ಪಶೇಷಾಃ ಪ್ರಜಾಸ್ತದಾ ॥೭೧॥
ರಾಜವ್ಯಾಧಿ ಕ್ಷುಧಾವಿಷ್ಟಾ ದುಃಖಾನ್ನಿರ್ವೇದಮಾನಸಾಃ ।
ವಿಚಾರಣಾ ತು ನಿರ್ವೇದಾ ತ್ಸಾಮ್ಯಾವಸ್ಥಾವಿಚಾರಣಾ ॥೭೨॥

---

ಪ್ರಮಾಣ ಉಳ್ಳವರಾಗಿ ಹೆಂಡಿತಿ ಮಕ್ಕಳುಗಳನ್ನು ಬಿಟ್ಟು ಅವರೊಡನೆ ಜಗಳವಾಡುತ್ತ ಮಳೆಯಿಲ್ಲದ ದುಃಖದಿಂದ ಅವರೊಡನೆ ಮಾತನ್ನೂ ಬಿಟ್ಟು ದೂರದೇಶಗಳಿಗೆ ಹೋಗುವರು. ಕೆಲವರು ಸ್ವದೇಶವನ್ನು ಬಿಟ್ಟು ಮ್ಲೇಚ್ಛ ದೇಶಗಳಿಗೆ ಹೋಗಿ ವಾಸಮಾಡುವರು.

೬೯–೭೦. ಕೆಲವರು ನದಿ, ಸಮುದ್ರ, ಬಾವಿ, ಪರ್ವತ ಪ್ರದೇಶಗಳು, ಇವುಗಳನ್ನು ಆಶ್ರಯಿಸಿ ಮದ್ಯ, ಮಾಂಸ, ಗೆಡ್ಡೆಗೆಣಸುಗಳಿಂದ ದುಃಖದಿಂದ ಜೀವನವನ್ನು ನೆಡೆಸುವರು. ಮರದ ತೊಗಟೆಯನ್ನೂ ಎಲೆಗಳನ್ನೂ ಚರ್ಮವನ್ನೂ ವಸ್ತ್ರವಾಗಿ ಧರಿಸಿ ಯಾವಕೆಲಸವನ್ನೂ ಮಾಡದೆ ಬಂಧುಗಳು ಯಾರೂ ಇಲ್ಲದೆ ವರ್ಣಾಶ್ರಮಾಚಾರಗಳಿಲ್ಲದೆ ಭಯಂಕರವಾದ ದುಃಖವನ್ನು ಹೊಂದುವರು.

೭೧–೭೨. ಈ ರೀತಿಯಲ್ಲಿ ಕಷ್ಟವನ್ನು ಹೊಂದಿದ ಪ್ರಜೆಗಳು ಸ್ವಲ್ಪವಾಗಿ ಉಳಿಯುವರು. ಅವರೂ ಕೂಡ ಮುಪ್ಪು, ರೋಗ, ಹಸಿವು ಇವುಗಳಿಂದ ಕೂಡಿದವರಾಗಿ ದುಃಖದಿಂದ ಕೂಡಿದ ಮನಸ್ಸುಳ್ಳವರಾಗಿರುವರು. ಆ ದುಃಖದಿಂದ ಅವರಿಗೆ ಯುಕ್ತಾ ಯುಕ್ತ ವಿಮರ್ಶೆ ಮಾಡಬೇಕೆಂಬ ಬುದ್ಧಿಯು ಹುಟ್ಟುವುದು. ಪ್ರಜೆಗಳೆಲ್ಲರೂ ಸಮಾನರೆಂಬ ಬುದ್ಧಿಯು ಅವರಿಗೆ ವಿಚಾರದಿಂದ ಉತ್ಪನ್ನವಾಗುವುದು. ಆ ಬಳಿಕ

ಸಾಮ್ಯಾವಸ್ಥಾತ್ಮಕೋ ಬೋಧಃ ಸಂಬೋಧಾದ್ಧರ್ಮ ಶೀಲತಾ ।
ಅರೂಪ ಶಮಯುಕ್ತಾಸ್ತು ಕಲಿ ಶಿಷ್ಟಾ ಹಿ ವೈ ಸ್ವಯಂ ॥೭೩॥
ಅಹೋರಾತ್ರಾತ್ತದಾ ತಾಸಾಂ ಯುಗಂ ತು ಪರಿವರ್ತತೇ ।
ಚಿತ್ತಸಂಮೋಹನಂ ಕೃತ್ವಾ ತಾಸಾಂ ವೈ ಸುಪ್ತ ಮತ್ತವತ್ ॥೭೪॥
ಭಾವಿನೋಽರ್ಥಸ್ಯ ಚ ಬಲಾತ್ತತಃ ಕೃತ ಮವರ್ತತ ।
ಪ್ರವೃತ್ತೇ ತು ತತಸ್ತಸ್ಮಿನ್ ಪುನಃ ಕೃತಯುಗೇ ತು ವೈ ॥೭೫॥
ಉತ್ಪನ್ನಾಃ ಕಲಿಶಿಷ್ಟಾಸ್ತು ಪ್ರಜಾಃ ಕಾರ್ತಯುಗಾಸ್ತದಾ ।
ತಿಷ್ಠಂತಿ ಚೇಹ ಯೇ ಸಿದ್ಧಾ ಅದೃಷ್ಟಾ ವಿಚರಂತಿ ಚ ॥೭೬॥

---

ಧರ್ಮಾಸಕ್ತಿಯುಂಟಾಗುವುದು. ಒಟ್ಟಿನಲ್ಲಿ ಆ ಕಲಿಯುಗದ ಕೊನೆಯಲ್ಲಿ ಉಳಿದ ಪ್ರಜೆಗಳು ಶರೀರದಲ್ಲಿ ಶಕ್ತಿಹೀನರಾದುದರಿಂದ ಶಾಂತವಾದ ಮನಸ್ಸುಳ್ಳವರಾಗುವರು.

೭೪. ಆ ಬಳಿಕ ಜನರಿಗೆ ಒಂದು ದಿನದೊಳಗೆ ಯುಗವು ವ್ಯತ್ಯಾಸವಾಗುವುದು. ಮೂರ್ಛೆಗೊಂಡವರು ಎದ್ದಂತೆಯೂ, ಮಲಗಿನಿದ್ರಿಸುತ್ತಿದ್ದವರು ಎದ್ದಂತೆಯೂ, ಮುಂದಿನ ಕಾರ್ಯಗೌರವದಿಂದ ಕೃತಯುಗವು ಪ್ರಾರಂಭವಾಗವುದು.

೭೫. ಕಲಿಯುಗವು ಕಳೆದು ಮತ್ತೆ ಕೃತಯುಗವು ಪ್ರಾರಂಭವಾಗುತ್ತಲೂ ಕಲಿಯುಗದಲ್ಲಿ ಉಳಿದ ಪ್ರಜೆಗಳೇ ಕೃತಯುಗದ ಪ್ರಜೆಗಳಾಗಿ ಹುಟ್ಟುವರು.

೭೬–೭೭. ಈ ಸಂದರ್ಭದಲ್ಲಿ ಸಪ್ತಸಿದ್ಧರು ಯಾರಿಗೂ ಕಾಣದವರಾಗಿ ಸಂಚರಿಸುತ್ತಿರುವರು. ಅವರು ಸಪ್ತರ್ಷಿಗಳೊಡನೆ ಕೂಡಿ ಕೃತಯುಗ ಧರ್ಮ ಸ್ಥಾಪನೆಗಾಗಿ ಸಿದ್ಧರಾಗಿರುವರು. ಮಂತ್ರಜ್ಞ, ಮಂತ್ರವಿತ್ಪ್ರಾಜ್ಞ, ಮಂತ್ರರಾಟ್, ಸಿದ್ಧಪೂಜಿತ, ಸಿದ್ಧವತ್, ಪರಮಸಿದ್ಧ, ಸರ್ವಸಿದ್ಧಿಪ್ರದ, ಇವರೇ ಸಪ್ತಸಿದ್ಧರು. ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಸಿಷ್ಠ ಇವರೇ ಸಪ್ತ ಋಷಿಗಳು.

ಸಪ್ತಸಪ್ತರ್ಷಿಭಿ ಶ್ಚೈವ ತತ್ರ ತೇ ತು ವ್ಯವಸ್ಥಿತಾಃ ।
ಬ್ರಹ್ಮಕ್ಷತ್ರ ವಿಶಃ ಶೂದ್ರಾ ಬೀಜಾರ್ಥಂ ಯೇ ಸ್ಮೃತಾ ಇಹ॥೭೭॥
ಕಲಿಜೈಃ ಸಹ ತೇ ಸರ್ವೇ ನಿರ್ವಿಶೇಷಾ ಸ್ತದಾಽಭವನ್ ।
ತೇಷಾಂ ಸಪ್ತರ್ಷಯೋ ಧರ್ಮಂ ಕಥಯಂತೀತರೇಽ ಪಿಚ ॥೭೮॥
ವರ್ಣಾಶ್ರಮಾಚಾರಯುತಂ ಶ್ರೌತಂ ಸ್ಮಾರ್ತಂ ದ್ವಿಧಾ ತು ಯಂ ।
ತತಸ್ತೇಷು ಕ್ರಿಯಾವತ್ಸು ವರ್ಧಂತೇ ವೈ ಪ್ರಜಾಃ ಕೃತೇ ॥೭೯॥
ಶ್ರೌತಸ್ಮಾರ್ತ ಕೃತಾನಾಂ ಚ ಧರ್ಮೇ ಸಪ್ತರ್ಷಿದರ್ಶಿತೇ ।
ಕೇಚಿದ್ಧರ್ಮ ವ್ಯವಸ್ಥಾರ್ಥಂ ತಿಷ್ಠಂತೀಹ ಯುಗಕ್ಷಯೇ ॥೮೦॥
ಮನ್ವಂತರಾಧಿ ಕಾರೇಷು ತಿಷ್ಠಂತಿ ಮುನಯಸ್ತು ವೈ ।
ಯಥಾ ದಾವಪ್ರದಗ್ಧೇಷು ತೃಣೇಷ್ವಿಹ ತತಃ ಕ್ಷಿತೌ ॥೮೧॥
ವನಾನಾಂ ಪ್ರಥಮಂ ವೃಷ್ಟ್ಯಾ ತೇಷಾಂ ಮೂಲೇಷು ಸಂಭವಃ ।
ತಥಾ ಕಾರ್ತಯುಗಾನಾಂ ತು ಕಲಿಜೇಷ್ವಿಹ ಸಂಭವಃ ॥೮೨॥

---

ಕಲಿಯುಗದ ಕೊನೆಯಲ್ಲಿ ಬ್ರಹ್ಮ, ಕ್ಷತ್ರ, ವೈಶ್ಯ, ಶೂದ್ರವರ್ಣಗಳಿಗೆ ಬೀಜರೂಪದಿಂದ ಉಳಿದವರು ಸಮಾನ ಧರ್ಮದಿಂದ ಕೂಡಿದವರಾಗಿದ್ದರು.

೭೮–೭೯. ಅವರಿಗೆ ಸಪ್ತರ್ಷಿಗಳೂ, ಸಿದ್ಧರೂ, ವರ್ಣಾಶ್ರಮಾಚಾರಗಳನ್ನೂ, ಶೌತ್ರ ಸ್ಮಾರ್ತ ಧರ್ಮಗಳನ್ನೂ ಹೇಳುವರು. ಆ ಬಳಿಕ ಅವರು ಧರ್ಮಾನುಸಾರವಾಗಿ ಕರ್ಮಗಳನ್ನು ಮಾಡಲು ಕೃತಯುಗದಲ್ಲಿ ಪ್ರಜಾವೃದ್ಧಿಯುಂಟಾಗುವುದು.

೮೦–೮೨. ಸಪ್ತಋುಷಿಗಳು ತೋರಿಸಿದ ಶ್ರೌತ ಸ್ಮಾರ್ತ ಧರ್ಮಗಳಲ್ಲಿ ಧರ್ಮವ್ಯವಸ್ಥೆಗೋಸ್ಕರವಾಗಿ ಮನ್ವಂತರಾಧಿಕಾರದಲ್ಲಿರುವ ಕೆಲವರು ಮುನಿಗಳು ಕಲಿಯುಗದ ಕೊನೆಯಲ್ಲಿ ಇರುವರು. ಕಾಡುಕಿಚ್ಚಿನಿಂದ ಸುಟ್ಟುಹೋದ ಹುಲ್ಲು ಕಾಡಿನಲ್ಲಿ ಮೊದಲು ಮಳೆಬಂದೊಡನೆಯೇ ಹೇಗೆ ಚಿಗುರುವುದೋ ಹಾಗೆಯೇ ಕಲಿಯುಗದಲ್ಲಿ ಬೀಜರೂಪದಲ್ಲಿ ಉಳಿದ ಪ್ರಜೆಗಳಿಂದಲೇ ಕೃತಯುಗದ ಪ್ರಜೆಗಳುಂಟಾಗುವರು.

**ಏವಂ ಯುಗಾದ್ಯುಗಸ್ಯೇಹ ಸಂತಾನಂ ತು ಪರಸ್ಪರಂ ।**
**ವರ್ತತೇ ಹ್ಯ ವ್ಯವಚ್ಛೇದಾ ದ್ಯಾವನ್ಮನ್ವಂತರಕ್ಷಯಃ ॥೮೩॥**
**ಸುಖಮಾಯುರ್ಬಲಂ ರೂಪಂ ಧರ್ಮೋಽರ್ಥಃ ಕಾಮ ಏವಚ ।**
**ಯುಗೇಷ್ವೇತಾನಿ ಹೀಯಂತೇ ತ್ರೀಂ ಸ್ತ್ರೀನ್ ಪಾದಾನ್ ಕ್ರಮೇಣತು।**
**ಸಸಂಧ್ಯಾಂಶೇಷು ಹೀಯಂತೇ ಯುಗಾನಾಂ ಧರ್ಮಸಿದ್ಧಯಃ ।**
**ಇತ್ಯೇಷಾ ಪ್ರತಿಸಿದ್ಧಿರ್ವೈ ಕೀರ್ತಿತೈಷಾ ಕ್ರಮೇಣ ತು ॥೮೫॥**
**ಚತುರ್ಯುಗಾನಾಂ ಸರ್ವೇಷಾ ಮನೇನೈವ ತು ಸಾಧನಂ ।**
**ಏಷಾ ಚತುರ್ಯುಗಾವೃತ್ತಿ ರಾಸಹಸ್ರಾದ್ಗುಣೀ ಕೃತಾ ॥೮೬॥**
**ಬ್ರಹ್ಮಣಸ್ತದಹಃ ಪ್ರೋಕ್ತಂ ರಾತ್ರಿಶ್ಚೈತಾವತೀ ಸ್ಮೃತಾ ।**
**ಅನಾರ್ಜವಂ ಜಡೀಭಾವೋ ಭೂತಾನಾಮಾ ಯುಗಕ್ಷಯಾತ್॥೮೭॥**

---

೮೩. ಹೀಗೆಯೇ ಒಂದು ಯುಗದಿಂದ ಮತ್ತೊಂದು ಯುಗಕ್ಕೆ ಸಂಬಂಧವು ಬಿಡದೇ ಇದ್ದೇ ಇರುವುದು. ಒಂದು ಮನ್ವಂತರವು ಕಳೆಯು ವವರೆಗೂ ಈ ಸಂಬಂಧವು ತಪ್ಪುವುದಿಲ್ಲ.

೮೪. ಸುಖ, ಆಯುಸ್ಸು, ಬಲ, ರೂಪ, ಧರ್ಮ, ಅರ್ಥ, ಕಾಮ, ಇವುಗಳು ಒಂದು ಯುಗಕ್ಕಿಂತ ಮತ್ತೊಂದು ಯುಗದಲ್ಲಿ ಕ್ರಮವಾಗಿ ಮುಕ್ಕಾಲುಭಾಗ ಶಕ್ತಿ ಹೀನವಾಗುತ್ತ ಬರುವುದು.

೮೫. ಸಂಧ್ಯಾಂಶಗಳಲ್ಲಿ ಯುಗಧರ್ಮಸಿದ್ಧಿಗಳು ನಾಶವಾಗುವುವು. ಪ್ರತಿಯುಗ ಸಂಧ್ಯಾಂಶಗಳಲ್ಲಿಯೂ ಈ ಕ್ರಮವಿರುವುದು. ಇದು ಪುರಾಣ ಪ್ರಸಿದ್ಧವಾದುದಾಗಿರುವುದು.

೮೬. ಈ ಕ್ರಮದಲ್ಲಿಯೇ ಚತುರ್ಯುಗಗಳು ಆವೃತ್ತಿಯಾಗುತ್ತಾ ಒಂದುಸಾವಿರ ಚತುರ್ಯುಗಗಳು ಕಳೆದರೆ ಸೃಷ್ಟಿಕರ್ತನಾದ ಬ್ರಹ್ಮನಿಗೆ ಆ ಕಾಲವು ಒಂದು ಹಗಲಾಗುವುದು. ರಾತ್ರಿಯೂ ಇದೇ ಪ್ರಮಾಣ ವುಳ್ಳದ್ದು.

೮೭. ಸರಳತೆಯಿಲ್ಲದಿರುವುದು, ಆಲಸ್ಯ, ಈ ಗುಣಗಳು ಪ್ರಾಣಿಗ ಳಿಗೆ ಯುಗಗಳು ಕಳೆಯುತ್ತ ಕಳೆಯುತ್ತ ಹೆಚ್ಚುತ್ತಿರುವುದು. ಸಮಸ್ತ ಯುಗಗಳಿಗೂ ಇದೇ ಲಕ್ಷಣವಿರುವುದು.

ಏತದೇವ ತು ಸರ್ವೇಷಾಂ ಯುಗಾನಾಂ ಲಕ್ಷಣಂ ಸ್ಮೃತಂ ।
ಏಷಾಂ ಚತುರ್ಯುಗಾಣಾಂ ಚ ಗುಣಿತಾ ಹ್ಯೇಕ ಸಪ್ತತಿಃ ॥೮೮॥
ಕ್ರಮೇಣ ಪರಿವೃತ್ತಾ ತು ಮನೋರಂತರ ಮುಚ್ಯತೇ ।
ಚತುರ್ಯುಗೇ ಯಥೈಕಸ್ಮಿನ್ ಭವತೀಹ ಯದಾ ತು ಯತ್॥೮೯॥
ತಥಾ ಚಾನ್ಯೇಷು ಭವತಿ ಪುನಸ್ತದ್ವೈಯಥಾ ಕ್ರಮಂ ।
ಸರ್ಗೇ ಸರ್ಗೇ ಯಥಾ ಭೇದಾ ಉತ್ಪದ್ಯಂತೇ ತಥೈವ ತು ॥೯೦॥
ಪಂಚವಿಂಶತ್ಪರಿಮಿತಾ ನ ನ್ಯೂನಾ ನಾಧಿಕಾಸ್ತಥಾ ।
ತಥಾ ಕಲ್ಪಾ ಯುಗೈಃ ಸಾರ್ಧಂ ಭವಂತಿ ಸಹಲಕ್ಷಣೈಃ ॥೯೧॥
ಮನ್ವಂತರಾಣಾಂ ಸರ್ವೇಷಾಮೇತದೇವ ತು ಲಕ್ಷಣಂ ॥೯೨॥
ಯಥಾ ಯುಗಾನಾಂ ಪರಿವರ್ತನಾನಿ ।
ಚಿರಪ್ರವೃತ್ತಾನಿ ಯುಗಸ್ವಭಾವಾತ್ ॥
ತಥಾ ತು ಸಂತಿಷ್ಠತಿ ಜೀವಲೋಕಃ ।
ಕ್ಷಯೋದಯಾಭ್ಯಾಂ ಪರಿವರ್ತಮಾನಃ ॥೯೩॥

---

೮೮–೯೦. ಇಂತಹ ಚತುರ್ಯುಗಗಳು ಎಪ್ಪತ್ತೊಂದು ಆದರೆ ಒಂದು ಮನ್ವಂತರವಾಗುವುದು. ಒಂದು ಚತುರ್ಯುಗದಲ್ಲಿ ಯಾವಧರ್ಮಗಳು ನಡೆಯುವುವೋ ಮತ್ತೊಂದು ಚತುರ್ಯುಗದಲ್ಲಿಯೂ ಅದರಂತೆ ಧರ್ಮಗಳು ನಡೆಯುವುವು. ಇದರಂತೆ ಪ್ರತಿಯೊಂದು ಬ್ರಹ್ಮಸೃಷ್ಟಿಯಲ್ಲಿಯೂ ಇರುವ ಭೇದಗಳು ಹಿಂದಿನ ಸೃಷ್ಟಿಯನ್ನು ಅನುಸರಿಸಿ ಇರುವುವು.

೯೧–೯೨. ಬ್ರಹ್ಮ ಸೃಷ್ಟಿಯು ಇಪ್ಪತ್ತೈದು ತತ್ವಗಳಿಂದ ಕೂಡಿರುವುದು. ಅವಕ್ಕೆ ಹೆಚ್ಚೂ ಇಲ್ಲ ಕಡಮೆಯೂ ಇಲ್ಲ. ಹೀಗೆಯೇ ಯುಗಗಳಿಂದ ಕೂಡಿ ಕಲ್ಪಗಳು ಅವುಗಳ ಲಕ್ಷಣಗಳಿಗನುಸಾರವಾಗಿ ನಡೆವುವು. ಸಕಲ ಮನ್ವಂತರಗಳಿಗೂ, ಇದೇ ಲಕ್ಷಣಗಳೆಂದು ತಿಳಿಯತಕ್ಕದ್ದು.

೯೩. ಯುಗಗಳ ಸ್ವಭಾವದಿಂದ ಹೇಗೆ ಯುಗಗಳ ಆವೃತ್ತಿಯಾಗುತ್ತಿರುವಿಕೆಯು ಬಹಳ ಕಾಲದಿಂದ ಬಂದಿರುವುದೋ, ಹಾಗೆಯೇ ಜನರುಗಳೂ ವೃದ್ಧಿಕ್ಷಯಗಳಿಂದ ಕೂಡಿದವರುಗಳಾಗಿ ಆವೃತ್ತಿಯಾಗುತ್ತಿರುವರು. ಅಂದರೆ ಜನ್ಮವನ್ನೆತ್ತುತ್ತಿರುವರು.

ಇತ್ಯೇತಲ್ಲಕ್ಷಣಂ ಪ್ರೋಕ್ತಂ ಯುಗಾನಾಂ ವೈ ಸಮಾಸತಃ ।
ಅತೀತಾನಾಗತಾನಾಂ ಹಿ ಸರ್ವಮನ್ವಂತರೇಷು ವೈ ॥೯೪॥
ಮನ್ವಂತರೇಣ ಚೈಕೇನ ಸರ್ವಾಣ್ಯೇವಾಂತರಾಣಿ ಚ ।
ವ್ಯಾಖ್ಯಾತಾನಿ ನ ಸಂದೇಹಃ ಕಲ್ಪಃ ಕಲ್ಪೇನ ಚೈವಹಿ ॥೯೫॥
ಅನಾಗತೇಷು ತದ್ವಚ್ಚ ತರ್ಕಃ ಕಾರ್ಯೋ ವಿಜಾನತಾ ।
ಮನ್ವಂತರೇಷು ಸರ್ವೇಷು ಅತೀತಾನಾಗತೇಷ್ವಿಹ ॥೯೬॥
ತುಲ್ಯಾಭಿ ಮಾನಿನಃ ಸರ್ವೇ ನಾಮ ರೂಪೈರ್ಭವಂತ್ಯುತ ।
ದೇವಾ ಹ್ಯಷ್ಟ ವಿಧಾ ಯೇ ಚ ಯೇ ಚ ಮನ್ವಂತರೇಶ್ವರಾಃ ॥೯೭॥
ಋಷಯೋ ಮನವಶ್ಚೈವ ಸರ್ವೇ ತುಲ್ಯ ಪ್ರಯೋಜನಾಃ ।
ಏವಮ್ ವರ್ಣಾಶ್ರಮಾಣಾಂ ತು ಪ್ರವಿಭಾಗೋ ಯುಗೇ ಯುಗೇ ॥

---

೯೪. ಈ ರೀತಿಯಲ್ಲಿ ಕಳೆದು ಹೋದ ಮತ್ತು ಮುಂದೆಬರುವ ಯುಗಗಳ ಲಕ್ಷಣಗಳನ್ನು ಸಕಲ ಮನ್ವಂತರಗಳಲ್ಲಿಯೂ ಹೇಳಿದಂತೆ ಆಯಿತು.

೯೫. ಒಂದು ಮನ್ವಂತರದ ಲಕ್ಷಣವನ್ನು ಹೇಳಿದರೆ ಸಕಲ ಮನ್ವಂತರಗಳ ಲಕ್ಷಣಗಳನ್ನೂ ಹೇಳಿದಂತೆ ಆಗುವುದು. ಒಂದು ಕಲ್ಪದ ಲಕ್ಷಣವನ್ನು ಹೇಳಿದರೆ ಸಕಲ ಕಲ್ಪಗಳ ಲಕ್ಷಣಗಳನ್ನೂ ಹೇಳಿದಂತೆ ಯಾಗುವುದು.

೯೬. ಕಳೆದ ಒಂದು ಮನ್ವಂತರದ ಲಕ್ಷಣವನ್ನು ತಿಳಿದವನು ವಿಚಾರಮಾಡಿ ಮುಂದೆ ಬರುವ ಮನ್ವಂತರವೂ ಇದೇ ಲಕ್ಷಣ ವುಳ್ಳದ್ದೆಂದು ಊಹಿಸಿ ತಿಳಿದುಕೊಳ್ಳಬೇಕು.

೯೭-೯೮. ಸಕಲ ಮನ್ವಂತರಗಳಲ್ಲಿಯೂ ಎಂಟು ಬಗೆಯ ದೇವತೆಗಳೂ, ಮನ್ವಂತರಾಧಿಪತಿಗಳೂ, ಋಷಿಗಳೂ, ಮನುಗಳೂ, ನಾಮ ರೂಪ ಕಾರ್ಯಗಳಿಂದ ಸಮಾನರಾಗಿರುವರು. ಹೀಗೆಯೇ ವರ್ಣಾಶ್ರಮ ವಿಭಾಗಗಳೂ ಪ್ರತಿಯುಗದಲ್ಲಿಯೂ ಸಮಾನವಾದುವಾಗಿರುವುವು.

ಯುಗ ಸ್ವಭಾವಶ್ಚ ತಥಾ ವಿಧತ್ತೇ ವೈ ತದಾ ಪ್ರಭುಃ ।
ವರ್ಣಾಶ್ರಮ ವಿಭಾಗಾಶ್ಚ ಯುಗಾನಿ ಯುಗ ಸಿದ್ಧಯಃ ॥೯೯॥
ಯುಗಾನಾಂ ಪರಿಮಾಣಂ ತೇ ಕಥಿತಂ ಹಿ ಪ್ರಸಂಗತಃ ।
ವದಾಮಿ ದೇವೀ ಪುತ್ರತ್ವಂ ಪದ್ಮಯೋನೇಃ ಸಮಾಸತಃ ॥೧೦೦॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಚತುರ್ಯುಗ ಪರಿಮಾಣಂ
ನಾಮ ಚತ್ವಾರಿಂಶೋಽಧ್ಯಾಯಃ

---

೯೯-೧೦೦. ಮಹೇಶ್ವರನು ಯುಗ ಸ್ವಭಾವಗಳನ್ನೂ ವರ್ಣಾಶ್ರಮ ವಿಭಾಗಗಳನ್ನೂ, ಯುಗಗಳನ್ನೂ, ಯುಗಸಿದ್ಧಿಗಳನ್ನೂ, ಈರೀತಿಯಲ್ಲಿ ನಿರ್ಮಿಸಿರುವನು. ಯುಗ ಪ್ರಮಾಣಗಳನ್ನು ಸಂಗ್ರಹವಾಗಿ ನಿನಗೆ ಹೇಳಿರುವೆನು. ಇನ್ನು ಮುಂದೆ ಬ್ರಹ್ಮನು ದಾಕ್ಷಾಯಣೀ ದೇವಿಯ ಪುತ್ರನಾದ ಬಗೆಯನ್ನು ಸಂಗ್ರಹವಾಗಿ ಹೇಳುವೆನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಕಲಿಯುಗಧರ್ಮ ವಿಶೇಷಗಳನ್ನು
ವರ್ಣಿಸಿರುವ ನಲವತ್ತನೆಯ ಅಧ್ಯಾಯವು ಮುಗಿದುದು.



ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ

ಏಕಚತ್ವಾರಿಂಶೋऽಧ್ಯಾಯಃ

ಏಕಚತ್ವಾರಿಂಶಕೇ ತು ಪುತ್ರತಾ ಪರಮೇಷ್ಠಿನಃ ।
ದೇವ್ಯಾಃ ಪರಸ್ಪರಾಜ್ಜನ್ಮ ತ್ರಿಮೂರ್ತೀನಾಂ ಚ ವರ್ಣ್ಯತೇ ॥

॥ ಇಂದ್ರ ಉವಾಚ ॥

ಪುನಃ ಸಸರ್ಜ ಭಗವಾನ್ ಪ್ರಭ್ರಷ್ಟಾಃ ಪೂರ್ವವತ್ಪ್ರಜಾಃ ।
ಸಹಸ್ರಯುಗಪರ್ಯಂತೇ ಪ್ರಜಾತೇ ತು ಪಿತಾಮಹಃ ॥ ೧ ॥

ಏವಂ ಪರಾರ್ಧೇ ವಿಪ್ರೇಂದ್ರ ದ್ವಿಗುಣೇ ತು ತಥಾಗತೇ ।
ತದಾ ಧರಾಂಭಸಿ ವ್ಯಾಪ್ತಾ ಹ್ಯಾಪೋ ವಹ್ನೌ ಸಮೀರಣೇ ॥ ೨ ॥

ವಹ್ನಿಃ ಸಮೀರಣ ಶ್ಚೈವ ವ್ಯೋಮ್ನಿ ತನ್ಮಾತ್ರಸಂಯುತಃ ।
ಇಂದ್ರಿಯಾಣಿ ದಶೈಕಂ ಚ ತನ್ಮಾತ್ರಾಣಿ ದ್ವಿಜೋತ್ತಮ ॥ ೩ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನಲವತ್ತೊಂದನೆಯ ಅಧ್ಯಾಯವು.

(ನಲವತ್ತೊಂದನೆಯ ಅಧ್ಯಾಯದಲ್ಲಿ ಬ್ರಹ್ಮನು ದಾಕ್ಷಾಯಣೀ ದೇವಿಯ ಪುತ್ರನಾದ ಬಗೆಯೂ ತ್ರಿಮೂರ್ತಿಗಳಲ್ಲಿ ಒಬ್ಬರಿಂದ ಮತ್ತೊಬ್ಬರು ಹುಟ್ಟಿದ ಬಗೆಯೂ ಇದನ್ನು ವರ್ಣಿಸಲಾಗುವುದು.)

೧. ದೇವೇಂದ್ರನು ಶಿಲಾದಮುನಿಗೆ ಹೇಳಿದನು: ಬ್ರಹ್ಮನು ಸಾವಿರ ಚತುರ್ಯುಗರೂಪವಾದ ತನ್ನ ರಾತ್ರಿಯು ಕಳೆಯಲು ನಾಶವಾಗಿ ಅಡಗಿದ್ದ ಪ್ರಜೆಗಳನ್ನು ಪ್ರಾತಃಕಾಲದಲ್ಲಿ ಮತ್ತೆ ಸೃಷ್ಟಿಮಾಡಿದನು.

೨-೪. ಹೀಗೆ ಎರಡು ಪರಾರ್ಧವರ್ಷಗಳು ಕಳೆಯುತ್ತಲು ಭೂಮಿಯು ನೀರಿನಲ್ಲಿಯೂ, ನೀರು ಅಗ್ನಿಯಲ್ಲಿಯೂ, ಅಗ್ನಿಯು ವಾಯುವಿನಲ್ಲಿಯೂ, ವಾಯುವು ಆಕಾಶದಲ್ಲಿಯೂ, ತಂತಮ್ಮ ತನ್ಮಾತ್ರರೂಪವಾಗಿ ವಿಲೀನವಾಗುವುವು. ಏಕಾದಶೇಂದ್ರಿಯಗಳೂ, ಪಂಚತನ್ಮಾತ್ರಗಳೂ

ಅಹಂಕಾರ ಮನುಪ್ರಾಪ್ಯ ಪ್ರಲೀನಾಸ್ತತ್ಕ್ಷಣಾದಹೋ ।
ಅಭಿಮಾನಸ್ತದಾ ತತ್ರ ಮಹಾಂತಂ ವ್ಯಾಪ್ಯ ವೈ ಕ್ಷಣಾತ್ ॥ ೪ ॥
ಮಹಾನಪಿ ತಥಾಽವ್ಯಕ್ತಂ ಪ್ರಾಪ್ಯ ಲೀನೋ ಭವೇದ್ದ್ವಿಜ ।
ಅವ್ಯಕ್ತಂ ಸ್ವಗುಣೈಃ ಸಾರ್ಧಂ ಪ್ರಲೀನಮಭವದ್ಭವೇ ॥ ೫ ॥
ತತಃ ಸೃಷ್ಟಿರಭೂತ್ತಸ್ಮಾತ್ಪೂರ್ವವತ್ಪುರುಷಾಚ್ಛಿವಾತ್ ।
ಅಥ ಸೃಷ್ಟಾಸ್ತದಾ ತಸ್ಯ ಮನಸಾ ತೇನ ಮಾನಸಾಃ ॥ ೬ ॥
ನ ವ್ಯವರ್ಧಂತ ಲೋಕೇಽಸ್ಮಿನ್ಪ್ರಜಾಃ ಕಮಲಯೋನಿನಾ ।
ವೃದ್ಧ್ಯರ್ಥಂ ಭಗವಾನ್ ಬ್ರಹ್ಮಾ ಪುತ್ರೈರ್ವೈ ಮಾನಸೈಃ ಸಹ ॥ ೭ ॥
ದುಶ್ಚರಂ ವಿಚಚಾರೇಶಂ ಸಮುದ್ದಿಶ್ಯ ತಪಃ ಸ್ವಯಂ ।
ತುಷ್ಟಸ್ತು ತಪಸಾ ತಸ್ಯ ಭವೋ ಜ್ಞಾತ್ವಾ ಸಮಾಂ ಛಿತಂ ॥ ೮ ॥

---

ಅಹಂಕಾರ ತತ್ವದಲ್ಲಿ ಲೀನವಾಗುವುವು. ಅಹಂಕಾರ ತತ್ವವು ಮಹತ್ತತ್ವದಲ್ಲಿ ವಿಲೀನವಾಗುವುದು.

೫. ಮಹತ್ತತ್ವವು ಅವ್ಯಕ್ತವೆಂಬ ಪ್ರಕೃತಿಯಲ್ಲಿ ಲೀನವಾಗುವುದು. ಪ್ರಕೃತಿಯು ತನ್ನ ಸತ್ವರಜಸ್ತಮೋಗುಣಗಳಿಂದ ಕೂಡಿ ಪುರುಷನಾದ ಶಿವನಲ್ಲಿ ಲೀನವಾಗುವುದು. ಇದೇ ಮಹಾಪ್ರಳಯವು.

೬. ಆ ಮೇಲೆ ಆ ಪುರುಷರೂಪನಾದ ಶಿವನಿಂದ ಮತ್ತೆ ಮೊದಲಿನಂತೆ ಸೃಷ್ಟಿಯಾಯಿತು. ಆ ಬಳಿಕ ಆ ಬ್ರಹ್ಮನ ಮನಸ್ಸಿನಿಂದ ಸೃಷ್ಟಿಸಲ್ಪಟ್ಟವರು ಮಾನಸ ಪುತ್ರರಾದರು.

೭. ಆ ಕಮಲೋದ್ಭವನಾದ ಬ್ರಹ್ಮನಿಂದ ಸೃಷ್ಟರಾದ ಮಾನಸ ಪುತ್ರರಿಂದ ಈ ಲೋಕದಲ್ಲಿ ಪ್ರಜೆಗಳ ಅಭಿವೃದ್ಧಿಯುಂಟಾಗಲಿಲ್ಲ. ಆಗ ಆ ಮಹಾತ್ಮನಾದ ಬ್ರಹ್ಮನು ಪ್ರಜಾವೃದ್ಧಿಗೋಸ್ಕರವಾಗಿ ತನ್ನ ಮಾನಸ ಪುತ್ರರೊಡನೆ ಈಶ್ವರನನ್ನು ಕುರಿತು ಕ್ರೂರವಾದ ತಪಸ್ಸುಮಾಡಿದನು.

೮-೯. ಶಿವನು ಅವನ ತಪಸ್ಸಿಗೆ ಮೆಚ್ಚಿ ಅವನ ಇಷ್ಟಾರ್ಥವನ್ನು ತಿಳಿದು ಬ್ರಹ್ಮನೆಂಬ ಹೆಸರಿನ ಪುರುಷನಾದ ಅವನ ಹಣೆಯ ಮಧ್ಯಭಾಗವನ್ನು ಭೇದಿಸಿಕೊಂಡು ಪುತ್ರಸ್ನೇಹವೆಂದು ಹೇಳುತ್ತಾ ಸ್ತ್ರೀಪುರುಷರೂಪ

ಲಲಾಟಂ ಮಧ್ಯಂ ನಿರ್ಭಿದ್ಯ ಬ್ರಹ್ಮಣಃ ಪುರುಷಸ್ಯ ತು ।
ಪುತ್ರಸ್ನೇಹಮಿತಿ ಪ್ರೋಚ್ಯ ಸ್ತ್ರೀ ಪುಂರೂಪೋಽಭವತ್ತದಾ ॥ ೯ ॥

ತಸ್ಯ ಪುತ್ರೋ ಮಹಾದೇವೋ ಹ್ಯರ್ಧನಾರೀಶ್ವರೋಽಭವತ್ ।
ದದಾಹ ಭಗವಾನ್ ಸರ್ವಂ ಬ್ರಹ್ಮಾಣಂ ಚ ಜಗದ್ಗುರುಂ ॥೧೦॥

ಅಥಾರ್ಧಮಾತ್ರಾಂ ಕಲ್ಯಾಣೀ ಮಾತ್ಮನಃ ಪರಮೇಶ್ವರೀಂ ।
ಬುಭುಜೇ ಯೋಗಮಾರ್ಗೇಣ ವೃದ್ಧ್ಯರ್ಥಂ ಜಗತಾಂ ಶಿವಃ ॥೧೧॥

ತಸ್ಯಾಂ ಹರಿಂ ಚ ಬ್ರಹ್ಮಾಣಂ ಸಸರ್ಜ ಪರಮೇಶ್ವರಃ ।
ವಿಶ್ವೇಶ್ವರಸ್ತು ವಿಶ್ವಾತ್ಮಾ ಚಾಸ್ತ್ರಂ ಪಾಶುಪತಂ ತಥಾ ॥೧೨॥

ತಸ್ಮಾದ್ಬ್ರಹ್ಮಾಮಹಾದೇವ್ಯಾ ಶ್ಚಾಂ ಶಜಶ್ಚ ಹರಿಸ್ತಥಾ ।
ಅಂಡಜಃ ಪದ್ಮಜ ಶ್ಚೈವ ಭವಾಂಗ ಭವ ಏವ ಚ ॥೧೩॥

ಏತತ್ತೇ ಕಥಿತಂ ಸರ್ವಂ ಇತಿಹಾಸಂ ಪುರಾತನಂ ।
ಪರಾರ್ಧಂ ಬ್ರಹ್ಮಣೋ ಯಾವತ್ ತಾವದ್ಭೂತಿಃ ಸಮಾಸತಃ ॥೧೪॥

---

ದಿಂದ ವ್ಯಕ್ತನಾದನು. ಹೀಗೆ ಮಹಾದೇವನು ಅರ್ಧನಾರೀಶ್ವರನಾಗಿ ಬ್ರಹ್ಮನ ಮಗನಾದನು.

೧೦–೧೧. ಆಮೇಲೆ ಮಹಾತ್ಮನಾದ ಶಿವನು ಲೋಕಕ್ಕೆಲ್ಲಕ್ಕೂ ದೊಡ್ಡವನಾದ ಬ್ರಹ್ಮನೊಡನೆ ಸಮಸ್ತವನ್ನೂ ಸುಟ್ಟುಬಿಟ್ಟನು. ತರುವಾಯ ತನ್ನ ಶರೀರದ ಅರ್ಧಶರೀರವುಳ್ಳ ಮಂಗಳಸ್ವರೂಪಳಾದ ದೇವಿಯನ್ನು ಯೋಗಮಾರ್ಗದಿಂದ ಪ್ರಪಂಚದ ಅಭಿವೃದ್ಧಿಗಾಗಿ ಅನುಭವಿಸಿದನು.

೧೨–೧೩. ಪರಮೇಶ್ವರನು ತನ್ನ ಅರ್ಧಶರೀರಳಾದ ದೇವಿಯಲ್ಲಿ ಹರಿಯನ್ನೂ, ಬ್ರಹ್ಮನನ್ನೂ, ಪಾಶುಪತವೆಂಬ ಅಸ್ತ್ರವನ್ನೂ ಸೃಷ್ಟಿಸಿದನು. ಆದುದರಿಂದ ಹರಿಯೂ, ಬ್ರಹ್ಮನೂ, ಮಹಾದೇವಿಯ ಅಂಶದಿಂದ ಹುಟ್ಟಿದವರು. ಹೀಗೆ ಬ್ರಹ್ಮನೂ, ಅಂಡಜನೂ, ಪದ್ಮಜನೂ, ಶಿವನ ಅಂಗದಲ್ಲಿ ಹುಟ್ಟಿದವರಾಗಿ ಇರುವರು.

೧೪. ಈ ರೀತಿಯಲ್ಲಿ ಪರಾರ್ಧಕಾಲ ಪರ್ಯಂತವಾಗಿ ಜೀವಿಸಿರುವ ಬ್ರಹ್ಮನ ವಿಭೂತಿರೂಪವಾದ ಪುರಾತನವಾದ ಇತಿಹಾಸ ವಿವರವನ್ನು ಸಂಗ್ರಹವಾಗಿ ನಿನಗೆ ಹೇಳಿರುವೆನು.

**ವೈರಾಗ್ಯಂ ಬ್ರಹ್ಮಣೋ ವಕ್ಷ್ಯೇ ತಮೋದ್ಭೂತಂ ಸಮಾಸತಃ ।**
**ನಾರಾಯಣೋಽಪಿ ಭಗವಾನ್ ದ್ವಿಧಾ ಕೃತ್ವಾಽಽತ್ಮನಸ್ತನುಂ ॥೧೫॥**
**ಸಸರ್ಜ ಸಕಲಂ ತಸ್ಮಾತ್ತಾಸಂಗಾ ದೇವ ಚರಾಚರಂ ।**
**ತತೋ ಬ್ರಹ್ಮಾಣ ಮಸೃಜ ದ್ಬ್ರಹ್ಮಾ ರುದ್ರಂ ಪಿತಾಮಹಃ ॥೧೬॥**
**ಮುನೇ ಕಲ್ಪಾಂತರೇ ರುದ್ರೋ ಹರಿಂ ಬ್ರಹ್ಮಾಣ ಮೀಶ್ವರಂ ।**
**ತತೋ ಬ್ರಹ್ಮಾಣಮಸೃಜನ್ಮುನೇ ಕಲ್ಪಾಂತರೇ ಹರಿಃ ॥೧೭॥**
**ನಾರಾಯಣಂ ಪುನರ್ಬ್ರಹ್ಮಾ ಬ್ರಹ್ಮಾಣಂ ಚ ಪುನರ್ಭವಃ ।**
**ತದಾ ವಿಚಾರ್ಯ ವೈ ಬ್ರಹ್ಮಾ ದುಃಖಂ ಸಂಸಾರ ಇತ್ಯಜಃ ॥೧೮॥**
**ಸರ್ಗಂ ವಿಸೃಜ್ಯ ಚಾತ್ಮಾನ ಮಾತ್ಮನ್ಯೇವ ನಿಯೋಜ್ಯ ಚ ।**
**ಸಂಹೃತ್ಯ ಪ್ರಾಣಸಂಚಾರಂ ಪಾಷಾಣ ಇವ ನಿಶ್ಚಲಃ ॥೧೯॥**

---

೧೫. ತಮೋಗುಣದಿಂದ ಬ್ರಹ್ಮನಿಗೆ ಉಂಟಾದ ವೈರಾಗ್ಯದ ವಿಷಯವನ್ನು ಮುಂದೆ ಹೇಳುವೆನು. ಈಗ ಬಹ್ಮಾವಿಷ್ಣು, ರುದ್ರರ ಪರಸ್ಪರ ಸೃಷ್ಟಿಯನ್ನು ಹೇಳುವೆನು. ನಾರಾಯಣನು ತನ್ನ ಶರೀರವನ್ನು ಸ್ತ್ರೀ ಪುರುಷರೂಪವಾಗಿ ಮಾಡಿಕೊಂಡು ಸಮಸ್ತ ಚರಾಚರ ಪ್ರಪಂಚವನ್ನೂ ಸೃಷ್ಟಿಸಿದನು.

೧೬-೧೭. ಆ ಮೇಲೆ ಬ್ರಹ್ಮನನ್ನು ಸೃಷ್ಟಿಸಿದನು. ಪಿತಾಮಹನಾದ ಬ್ರಹ್ಮನು ರುದ್ರನನ್ನು ಸೃಷ್ಟಿಸಿದನು. ಎಲೈ ಶಿಲಾದ ಮುನಿಯೇ, ಮತ್ತೊಂದು ಕಲ್ಪದಲ್ಲಿ ರುದ್ರನು ಹರಿಯನ್ನೂ ಬ್ರಹ್ಮನನ್ನೂ ಸೃಷ್ಟಿಸಿದನು. ಇನ್ನೊಂದು ಕಲ್ಪದಲ್ಲಿ ಹರಿಯು ಈಶ್ವರನನ್ನೂ ಬ್ರಹ್ಮನನ್ನೂ ಸೃಷ್ಟಿಸಿದನು. ಮತ್ತೆ ಬ್ರಹ್ಮನು ನಾರಾಯಣನನ್ನು ಸೃಷ್ಟಿಸಿದನು. ಶಿವನು ಬ್ರಹ್ಮನನ್ನು ಸೃಷ್ಟಿಸಿದನು.

೧೮-೧೯. ಲಯಕಾಲವು ಪ್ರಾಪ್ತವಾಗುತ್ತಲೂ ಬ್ರಹ್ಮನು ಜನನ ಮರಣ ರೂಪವಾದ ಈ ಸಂಸಾರವು ದುಃಖದಾಯಕವಾದುದೆಂದು ವಿಚಾರ ಮಾಡಿ ತಿಳಿದು ಸೃಷ್ಟಿಕಾರ್ಯವನ್ನು ಬಿಟ್ಟು ತನ್ನ ಮನಸ್ಸನ್ನು ಆತ್ಮನಲ್ಲಿ ಸೇರಿಸಿ ಪ್ರಾಣವಾಯುವಿನ ಸಂಚಾರವನ್ನು ತಡೆದು ಕಲ್ಲಿನಂತೆ ಚಲಿಸದೇ ಇದ್ದನು.

ದಶವರ್ಷ ಸಹಸ್ರಾಣಿ ಸಮಾಧಿಸ್ಥೋಽ ಭವತ್ಪ್ರಭುಃ ।
ಅಧೋಮುಖಂ ತು ಯತ್ಪದ್ಮಂ ಹೃದಿ ಸಂಸ್ಥಂ ಸುಶೋಭನಂ ॥೨೦॥
ಪೂರಿತಂ ಪೂರಕೇಣೈವ ಪ್ರಬುದ್ಧಂ ಚಾ ಭವತ್ತದಾ ।
ತದೂರ್ಧ್ವವಕ್ತ್ರಮಭವತ್ಕುಂಭಕೇನ ನಿರೋಧಿತಂ ॥೨೧॥
ತತ್ಪದ್ಮಕರ್ಣಿಕಾಮಧ್ಯೇ ಸ್ಥಾಪಯಾಮಾಸ ಚೇಶ್ವರಂ ।
ತದೋಮಿತಿ ಶಿವಂ ದೇವ ಮರ್ಧಮಾತ್ರಾಪರಂ ಪರಂ ॥೨೨॥
ಮೃಣಾಳತಂತುಭಾಗೈಕ ಶತಭಾಗೇ ವ್ಯವಸ್ಥಿತಂ ।
ಯಮೀ ಯಮ ವಿಶುದ್ಧಾತ್ಮಾ ನಿಯಮ್ಯೈವಂ ಹೃದೀಶ್ವರಂ ॥೨೩॥
ಯಮಪುಷ್ಪಾದಿಭಿಃ ಪೂಜ್ಯಂ ಯಾಜ್ಯೋ ಹ್ಯ ಯಜದವ್ಯಯಂ ।
ತಸ್ಯ ಹೃತ್ಕಮಲ ಸ್ಥಸ್ಯ ನಿಯೋಗಾ ಚ್ಚಾಂಶಜೋ ವಿಭುಃ ॥೨೪॥

---

೨೦–೨೧. ಆ ಬ್ರಹ್ಮನು ಹತ್ತುಸಾವಿರ ವರ್ಷಗಳವರೆಗೆ ಸಮಾಧಿ ಸ್ಥಿತಿಯಲ್ಲಿದ್ದನು. ಅವನ ಹೃದಯ ಕಮಲವು ಮೊದಲು ಕೆಳಮುಖ ವಾಗಿದ್ದಿತು. ಪೂರಕ ಪ್ರಾಣಾಯಾಮದಿಂದ ವಾಯುವನ್ನು ಗ್ರಹಿಸು ತ್ತಲೂ ಆ ಕಮಲವು ಅರಳಿತು. ಕುಂಭಕ ಪ್ರಾಣಾಯಾಮದಿಂದುಂಟಾದ ವಾಯುನಿರೋಧದಿಂದ ಆ ಕಮಲವು ಮೇಲ್ಮುಖವಾಯಿತು.

೨೨. ಆ ಪದ್ಮದ ಕರ್ಣಿಕೆಯ ನಡುವೆ ಓಂಕಾರ ಶಬ್ದ ಸಂಬಂಧ ವಾದ ಅರ್ಧಮಾತ್ರಾ ರೂಪವಾದ ನಾದಪ್ರತಿಪಾದ್ಯನಾದ ಶಿವನನ್ನು ಸ್ಥಾಪಿಸಿದನು.

೨೩–೨೪. ಶಿವನು ಕಮಲದೆಳೆಯ ನೂರು ಭಾಗದಲ್ಲಿ ಒಂದು ಭಾಗ ದಷ್ಟು ಸೂಕ್ಷ್ಮವಾಗಿದ್ದನು. "ನೀವಾರಶೂಕವತ್ತನ್ವೀ ಪೀತಾ ಭಾಸ್ವ ತ್ಯಣೂಪಮಾ । ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ" ಎಂದು ಶ್ರುತಿಯಿರುವುದು. ಯಮವೆಂಬ ಯೋಗಾಂಗದಿಂದ ಪರಿಶುದ್ಧ ವಾದ ಮನಸ್ಸುಳ್ಳ ಬ್ರಹ್ಮನು ತನ್ನ ಹೃದಯಕಮಲದಲ್ಲಿ ಈ ರೀತಿಯಲ್ಲಿ ಈಶ್ವರನನ್ನು ಧ್ಯಾನಿಸುತ್ತಾ ಯಮವೆಂಬ ಯೋಗರೂಪವಾದ ಹೂಗಳಿಂದ ಪೂಜ್ಯನಾದ ಶಿವನನ್ನು ಧ್ಯಾನಿಸಿ ಪೂಜಿಸಿದನು. ಅವನ ಹೃದಯ ಕಮಲ ದಲ್ಲಿದ್ದ ಶಿವನ ಆಜ್ಞೆಯಿಂದ ರುದ್ರನು ಶಿವನ ಒಂದಂಶದಿಂದ ಜನಿಸಿದನು.

ಲಲಾಟಮಧ್ಯಂ ನಿರ್ಭಿದ್ಯ ಪ್ರಾದುರಾಸೀತ್ಸ್ಮಿತಾನುಹಾತ್ ।
ಲೋಹಿತೋಽಭೂತ್ಸ್ವಯಂ ನೀಲಃ ಶಿವಸ್ಯ ಹೃದಯೋದ್ಭವಃ ॥೨೫॥
ವಹ್ನೇಶ್ಚೈವ ತು ಸಂಯೋಗಾತ್ಪ್ರಕೃತ್ಯಾ ಪುರುಷಃ ಪ್ರಭುಃ ।
ನೀಲಶ್ಚ ಲೋಹಿತಶ್ಚೈವ ಯುತಃ ಕಾಲಾಕೃತಿಃ ಪುಮಾನ್ ॥೨೬॥
ನೀಲಲೋಹಿತ ಇತ್ಯುಕ್ತ ಸ್ತೇನ ದೇವೇನ ವೈ ಪ್ರಭುಃ ।
ಬ್ರಹ್ಮಣಾ ಭಗವಾನ್ಕಾಲಃ ಪ್ರೀತಾತ್ಮಾ ಚಾ ಭವದ್ವಿಭುಃ ॥೨೭॥
ಸುಪ್ರೀತಮನಸಂ ದೇವಂ ತುಷ್ಟಾವ ಚ ಪಿತಾಮಹಃ ।
ನಾಮಾಷ್ಟಕೇನ ವಿಶ್ವಾತ್ಮಾ ವಿಶ್ವಾತ್ಮಾನಂ ಮಹಾಮುನೇ ॥೨೮॥

॥ ಪಿತಾಮಹ ಉವಾಚ ॥

ನಮಸ್ತೇ ಭಗವನ್‌ರುದ್ರ ಭಾಸ್ಕರಾಮಿತ ತೇಜಸೇ ।
ನಮೋಭವಾಯ ದೇವಾಯ ರಸಾಯಾಂಬುಮಯಾಯ ತೇ॥೨೯॥
ಶರ್ವಾಯ ಕ್ಷಿತಿರೂಪಾಯ ಸದಾ ಸುರಭಿಣೇ ನಮಃ ।
ಈಶಾಯ ವಾಯವೇ ತುಭ್ಯಂ ಸಂಸ್ಪರ್ಶಾಯ ನಮೋನಮಃ ॥೩೦॥

---

೨೫–೨೬. ರುದ್ರನು ಬ್ರಹ್ಮನ ಹಣೆಯನ್ನು ಭೇದಿಸಿಕೊಂಡು ವ್ಯಕ್ತನಾದನು. ಶಿವನ ಅಂಶನಾದ ಆ ರುದ್ರನು ಸ್ವಭಾವವಾಗಿ ನೀಲವರ್ಣದಿಂದ ಕೂಡಿದವನು. ಅಗ್ನಿಯ ಸಂಬಂಧದಿಂದ ಲೋಹಿತನೂ, ಕಾಲಸ್ವರೂಪನಾದುದರಿಂದ ಇವನನ್ನು ನೀಲಲೋಹಿತನೆಂದು ಕರೆವರು.

೨೭. ಬ್ರಹ್ಮನೂ ಆ ರುದ್ರನನ್ನು ನೀಲಲೋಹಿತನೆಂದು ಕರೆದನು. ಆ ರುದ್ರನು ಸಂತೋಷಹೊಂದಿದನು. ಆ ರುದ್ರನು ಮಹಾಮಹಿಮನೂ, ಕಾಲಸ್ವರೂಪನೂ ಆಗಿರುವನು.

೨೮. ಆ ಬ್ರಹ್ಮನು ಸಂತೋಷಗೊಂಡ ಆ ದೇವನನ್ನು ಪ್ರಪಂಚಸ್ವರೂಪನಾದವನೆಂದು ಎಂಟು ನಾಮಗಳಿಂದ ಸ್ತೋತ್ರಮಾಡಿದನು.

೨೯–೩೦. ಸೂರ್ಯರೂಪನಾದ ರುದ್ರನೆಂಬ ಹೆಸರುಳ್ಳ ನಿನಗೆ ನಮಸ್ಕಾರವು. ಸುಗಂಧವಾದ ಭೂರೂಪವಾದ ಶರ್ವನೆಂಬ ನಿನಗೆ ನಮಸ್ಕಾರವು. ರಸರೂಪನಾದ ಭವನೆಂಬ ದೇವನಾದ ನಿನಗೆ ನಮಸ್ಕಾರವು. ಸ್ಪರ್ಶಗುಣವುಳ್ಳ ವಾಯುಸ್ವರೂಪನಾದ ಈಶಾನನೆಂಬ ನಿನಗೆ ನಮಸ್ಕಾರವು.

ಪಶೂನಾಂ ಪತಯೇ ಚೈವ ಪಾವಕಾಯಾತಿತೇಜಸೇ ।
ಭೀಮಾಯ ವ್ಯೋಮರೂಪಾಯ ಶಬ್ದಮಾತ್ರಾಯ ತೇನಮಃ ॥

ಮಹಾದೇವಾಯ ಸೋಮಾಯ ಅಮೃತಾಯ ನಮೋಽಸ್ತುತೇ ।
ಉಗ್ರಾಯ ಯಜಮಾನಾಯ ನಮಸ್ತೇ ಕರ್ಮಯೋಗಿನೇ ॥೩೨॥

ಯಃಪಠೇಚ್ಛೃಣುಯಾದ್ವಾಽಪಿ ಪೈತಾಮಹಮಿಮಂ ಸ್ತವಂ ।
ರುದ್ರಾಯ ಕಥಿತಂ ವಿಪ್ರಾನ್ ಶ್ರಾವಯೇದ್ವಾ ಸಮಾಹಿತಃ ॥೩೩॥

ಅಷ್ಟಮೂರ್ತೇಸ್ತು ಸಾಯುಜ್ಯಂ ವರ್ಷಾದೇಕಾದವಾಪ್ನುಯಾತ್ ।
ಏವಂ ಸ್ತುತ್ವಾ ಮಹಾದೇವ ಮನ್ವೈಕ್ಷತ ಪಿತಾಮಹಃ ॥೩೪॥

ತದಾಽಷ್ಟಧಾ ಮಹಾದೇವಃ ಸಮಾತಿಷ್ಠತ್ಸಮಂತತಃ ।
ತದಾ ಪ್ರಕಾಶತೇ ಭಾನುಃ ಕೃಷ್ಣವರ್ತ್ಮಾ ನಿಶಾಕರಃ ॥೩೫॥

ಕ್ಷಿತಿರ್ವಾಯುಃ ಪುಮಾನಂಭಃ ಸುಷಿರಂ ಸರ್ವಗಂ ತಥಾ ।
ತದಾ ಪ್ರಭೃತಿ ತಂ ಪ್ರಾಹು ರಷ್ಟಮೂರ್ತಿರಿತೀಶ್ವರಂ ॥೩೬॥

---

೩೧–೩೨. ವಿಶೇಷವಾದ ತೇಜಸ್ಸುಳ್ಳ ಅಗ್ನಿಸ್ವರೂಪನಾದ ಪಶುಪತಿ ಯೆಂಬ ನಿನಗೆ ನಮಸ್ಕಾರವು. ಶಬ್ದಗುಣವುಳ್ಳ ಆಕಾಶರೂಪನಾದ ಭೀಮನೆಂಬ ಹೆಸರುಳ್ಳ ನಿನಗೆ ನಮಸ್ಕಾರವು. ಅಮೃತ ಕಿರಣವುಳ್ಳ ಚಂದ್ರಸ್ವರೂಪನಾದ ಮಹಾದೇವನೆಂಬ ನಿನಗೆ ನಮಸ್ಕಾರವು. ಕರ್ಮ ಫಲವನ್ನು ಅನುಭವಿಸುವ ಜೀವಸ್ವರೂಪನಾದ ಯಾಜಮಾನನಾದ ಉಗ್ರ ನೆಂಬ ಹೆಸರುಳ್ಳ ನಿನಗೆ ನಮಸ್ಕಾರವು.

೩೩. ಬ್ರಹ್ಮನು ರುದ್ರನನ್ನು ಕುರಿತು ಹೇಳಿದ ಈ ಸ್ತೋತ್ರವನ್ನು ಯಾರು ಹೇಳುವರೋ, ಕೇಳುವರೋ, ಭಕ್ತಿಯಿಂದ ಬ್ರಾಹ್ಮಣರಿಗೆ ಕೇಳಿ ಸುವರೋ ಅವರು ಒಂದು ವರ್ಷದೊಳಗಾಗಿ ಅಷ್ಟಮೂರ್ತಿಸ್ವರೂಪನಾದ ಶಿವನ ಸಾಯುಜ್ಯವನ್ನು ಪಡೆಯುವರು.

೩೪–೩೬. ಬ್ರಹ್ಮನು ಮಹಾದೇವನನ್ನು ಹೀಗೆ ಸ್ತೋತ್ರಮಾಡಿ ನೋಡಿದನು. ಆಗ ಮಹಾದೇವನು ಆ ಬ್ರಹ್ಮನ ಸುತ್ತಲೂ ಎಂಟು ಬಗೆಯಾಗಿ ಕಾಣಿಸಿಕೊಂಡನು. ಆ ಸಮಯದಲ್ಲಿ ಸೂರ್ಯನೂ, ಅಗ್ನಿಯೂ ಚಂದ್ರನೂ ಪ್ರಕಾಶಿಸಿದರು. ಭೂಮಿ, ವಾಯು, ನೀರು, ಆಕಾಶ, ಪುರುಷ

ಅಷ್ಟಮೂರ್ತೇಃ ಪ್ರಸಾದೇನ ವಿರಂಚಿಶ್ಚಾಸೃಜತ್ಪುನಃ ।
ಸೃಷ್ಟ್ವೈತದಖಿಲಂ ಬ್ರಹ್ಮಾ ಪುನಃ ಕಲ್ಪಾಂತರೇ ಪ್ರಭುಃ ॥೩೭॥
ಸಹಸ್ರಯುಗಪರ್ಯಂತಂ ಸಂಸುಪ್ತೇ ಚ ಚರಾಚರೇ ।
ಪ್ರಜಾಃ ಸ್ರಷ್ಟುಮನಾಸ್ತೇಪೇ ತತ ಉಗ್ರಂ ತಪೋ ಮಹತ್ ॥೩೮॥
ತಸ್ಯೈವಂ ತಪ್ಯಮಾನಸ್ಯ ನ ಕಿಂಚಿತ್ಸಮವರ್ತತ ।
ತತೋ ದೀರ್ಘೇಣ ಕಾಲೇನ ದುಃಖಾತ್ಕ್ರೋಧೋ ವ್ಯಜಾಯತ ॥
ಕ್ರೋಧಾವಿಷ್ಟಸ್ಯ ನೇತ್ರಾಭ್ಯಾಂ ಪ್ರಾಪತನ್ನಶ್ರುಬಿಂದವಃ ।
ತತಸ್ತೇಭ್ಯೋಽಶ್ರುಬಿಂದುಭ್ಯೋ ಭೂತಾಃ ಪ್ರೇತಾಸ್ತದಾಽಭವನ್ ॥
ಸರ್ವಾಂಸ್ತಾನಗ್ರಜಾನ್ ದೃಷ್ಟ್ವಾ ಭೂತಪ್ರೇತ ನಿಶಾಚರಾನ್ ।
ಅನಿಂದತ ತದಾ ದೇವೋ ಬ್ರಹ್ಮಾತ್ಮಾನ ಮಜೋ ವಿಭುಃ ॥೪೧॥

---

(ಯಾಜಮಾನ) ಇವರು ಕಾಣಿಸಿಕೊಂಡರು. ಅದು ಮೊದಲುಗೊಂಡು ಈಶ್ವರನನ್ನು ಅಷ್ಟಮೂರ್ತಿ ಎಂಬುದಾಗಿ ಹೇಳುವರು.

೩೭–೩೮. ಬ್ರಹ್ಮನು ಅಷ್ಟಮೂರ್ತಿಯಾದ ಪರಮೇಶ್ವರನ ಅನುಗ್ರಹದಿಂದ ಮತ್ತೆ ಸೃಷ್ಟಿಯನ್ನು ಮಾಡಿದನು. ಮತ್ತೊಂದು ಕಲ್ಪದಲ್ಲಿ ಸಾವಿರ ಚತುರ್ಯುಗಗಳವರೆಗೆ ಚರಾಚರ ಪ್ರಪಂಚವು ನಿದ್ರಾರೂಪದಿಂದ ವಿಲೀನವಾಗಿರಲು ಕಲ್ಪದಆದಿಯಲ್ಲಿ ಮತ್ತೆ ಪ್ರಜೆಗಳನ್ನು ಸೃಷ್ಟಿಸಬೇಕೆಂಬ ಮನಸ್ಸಿನಿಂದ ಕಷ್ಟವಾದದೊಡ್ಡ ತಪಸ್ಸನ್ನು ಮಾಡಿದನು.

೩೯–೪೦. ಹೀಗೆ ತಪಸ್ಸುಮಾಡುತ್ತಿದ್ದ ಬ್ರಹ್ಮನಿಗೆ ಯಾವ ಪ್ರಯೋಜನವೂ ಉಂಟಾಗಲಿಲ್ಲ. ಬಹಳಕಾಲವು ಕಳೆದುಹೋಯಿತು. ದುಃಖವುಂಟಾಯಿತು. ಆ ದುಃಖದಿಂದ ಕೋಪವೂ ಬಂದಿತು. ಕೋಪಗೊಂಡ ಆ ಬ್ರಹ್ಮನ ಕಣ್ಣುಗಳಿಂದ ಕಣ್ಣೀರಿನ ಹನಿಗಳು ಬಿದ್ದವು. ಆಗ ಆ ಕಣ್ಣೀರಿನ ಹನಿಗಳಿಂದ ಭೂತಗಳೂ, ಪ್ರೇತಗಳೂ ಹುಟ್ಟಿದುವು.

೪೧. ಬ್ರಹ್ಮನು ಮೊದಲು ಹುಟ್ಟಿದ ಆ ಭೂತಪ್ರೇತ ನಿಶಾಚರರನ್ನು ನೋಡಿ ಸರ್ವವ್ಯಾಪಿಯಾದ ಅವನು ತನ್ನನ್ನೇ ತಾನು ನಿಂದಿಸಿಕೊಂಡನು.

ಜಹೌ ಪ್ರಾಣಾಂಶ್ಚ ಭಗವಾನ್ ಕ್ರೋಧಾವಿಷ್ಟಃ ಪ್ರಜಾಪತಿಃ ।
ತತಃ ಪ್ರಾಣಮಯೋ ರುದ್ರಃ ಪ್ರಾದುರಾಸೀತ್ಪ್ರಭೋರ್ಮುಖಾತ್॥

ಅರ್ಧನಾರೀಶ್ವರೋ ಭೂತ್ವಾ ಬಾಲಾರ್ಕ ಸದೃಶ ದ್ಯುತಿಃ ।
ತದೈಕಾದಶಧಾಽಽತ್ಮಾನಂ ಪ್ರವಿಭಜ್ಯ ವ್ಯವಸ್ಥಿತಃ ॥೪೩॥

ಅರ್ಧೇನಾಂಶೇನ ಸರ್ವಾತ್ಮಾ ಸಸರ್ಜಾಸೌ ಶಿವಾ ಮುಮಾಂ ।
ಸಾ ಚಾಸೃಜತ್ತದಾ ಲಕ್ಷ್ಮೀಂ ದುರ್ಗಾಂ ಶ್ರೇಷ್ಠಾಂ ಸರಸ್ವತೀಂ॥೪೪॥

ವಾಮಾಂ ರೌದ್ರೀಂ ಮಹಾಮಾಯಾಂ ವೈಷ್ಣವೀಂ ವಾರಿಜೇಕ್ಷಣಾಂ।
ಕಲಾಂ ವಿಕರಿಣೀಂ ಚೈವ ಕಾಲೀಂ ಕಮಲವಾಸಿನೀಂ ॥೪೫॥

ಬಲವಿಕರಿಣೀಂ ದೇವೀಂ ಬಲಪ್ರಮಥಿನೀಂ ತಥಾ ।
ಸರ್ವಭೂತಸ್ಯದಮನೀಂ ಸಸೃಜೇ ಚ ಮನೋನ್ಮನೀಂ ॥೪೬॥

---

೪೨-೪೩. ಕೋಪಾವೇಶವನ್ನು ಹೊಂದಿದ ಬ್ರಹ್ಮನು ತನ್ನ ಪ್ರಾಣ ತ್ಯಾಗಮಾಡಿದನು. ಆ ಬಳಿಕ ಪ್ರಾಣಸ್ವರೂಪನಾದ ರುದ್ರನು ಬ್ರಹ್ಮನ ಮುಖದಲ್ಲಿ ಅರ್ಧನಾರೀಶ್ವರನಾಗಿ ಬಾಲಸೂರ್ಯನ ಕಾಂತಿಯಿಂದ ಕೂಡಿ ವ್ಯಕ್ತನಾದನು. ಆ ಮೇಲೆ ಆ ರುದ್ರನು ತನ್ನನ್ನು ಹನ್ನೊಂದು ಭಾಗ ವಾಗಿ ಮಾಡಿಕೊಂಡು ಏಕಾದಶ ರುದ್ರ ರೂಪದಿಂದ ಇದ್ದನು. '' ಅಜೈಕ ಪಾದಹಿರ್ಬುಧ್ನ್ಯಸ್ತ್ವಷ್ಟಾರುದ್ರಶ್ಚ ವೀರ್ಯವಾನ್ । ಹರಶ್ಚ ಬಹುರೂಪ ಶ್ಚತ್ರ್ಯಂಬಕಶ್ಚಾಪರಾಜಿತಃ । ವೃಷಾಕಪಿಶ್ಚ ಶಂಭುಶ್ಚ ಕಪರ್ದೀರೈವ ತಸ್ತಥಾ । ಏಕಾದಶೈತೇ ಕಥಿತಾಃ ರುದ್ರಾಸ್ತ್ರಿಭುವನೇಶ್ವರಾಃ ॥ ಎಂದು ವಿಷ್ಣುಪುರಾಣದಲ್ಲಿ ಹೇಳಿದೆ.

೪೪. ಸಕಲರಿಗೂ ಆತ್ಮಸ್ವರೂಪನಾದ ಶಿವನು ತನ್ನ ಅರ್ಧಾಂಶ ದಿಂದ ಮಂಗಳಕರಳಾದ ಉಮಾದೇವಿಯನ್ನು ಸೃಷ್ಟಿಸಿದನು. ಆ ಉಮಾ ದೇವಿಯು ಲಕ್ಷ್ಮಿಯನ್ನೂ, ದುರ್ಗೆಯನ್ನೂ, ಸರಸ್ವತಿಯನ್ನೂ, ಸೃಷ್ಟಿಸಿದಳು.

೪೫-೪೬. ಮತ್ತು ವಾಮಾ, ರೌದ್ರೀ, ಮಹಾಮಾಯಾ, ವೈಷ್ಣವೀ, ಕಲಾ, ವಿಕರಿಣೀ, ಕಾಲೀ, ಬಲವಿಕರಿಣೀ, ಬಲಪ್ರಮಥಿನೀ, ಸರ್ವ ಭೂತದಮನೀ, ಮನೋನ್ಮನೀ ಮುಂತಾದ ಅನೇಕ ಸ್ತ್ರೀಯರನ್ನು ಆ ಉಮಾದೇವಿಯು ಸೃಷ್ಟಿಸಿದಳು.

ತಥಾಽನ್ಯಾ ಬಹವಃ ಸೃಷ್ಟಾಸ್ತಯಾ ನಾರ್ಯಃ ಸಹಸ್ರಶಃ ।
ರುದ್ರೈಶ್ಚೈವ ಮಹಾದೇವಸ್ತಾಭಿಸ್ತ್ರಿಭುವನೇಶ್ವರಃ ॥೪೭॥

ಸರ್ವಾತ್ಮನಶ್ಚ ತಸ್ಯಾಗ್ರೇ ಹ್ಯತಿಷ್ಠತ್ಪರಮೇಶ್ವರಃ ।
ಮೃತಸ್ಯ ತಸ್ಯ ದೇವಸ್ಯ ಬ್ರಹ್ಮಣಃ ಪರಮೇಷ್ಠಿನಃ ॥೪೮॥

ಘೃಣೀ ದದೌ ಪುನಃ ಪ್ರಾಣಾನ್ ಬ್ರಹ್ಮಪುತ್ರೋ ಮಹೇಶ್ವರಃ ।
ಬ್ರಹ್ಮಣಃ ಪ್ರದದೌ ಪ್ರಾಣಾನಾತ್ಮಸ್ಥಾಂಸ್ತು ತದಾ ಪ್ರಭುಃ ॥೪೯॥

ಪ್ರಹೃಷ್ಟೋಽಭೂತ್ತತೋ ರುದ್ರಃ ಕಿಂಚಿತ್ಪ್ರತ್ಯಾಗತಾಸವಂ ।
ಅಭ್ಯಭಾಷತ ದೇವೇಶೋ ಬ್ರಹ್ಮಾಣಂ ಪರಮಂ ವಚಃ ॥೫೦॥

ಮಾಭೈರ್ದೇವ ಮಹಾಭಾಗ ವಿರಿಂಚ ಜಗತಾಂ ಗುರೋ ।
ಮಯೇಹ ಸ್ಥಾಪಿತಾಃ ಪ್ರಾಣಾಸ್ತಸ್ಮಾದುತ್ತಿಷ್ಠ ವೈ ಪ್ರಭೋ ॥೫೧॥

ಶ್ರುತ್ವಾ ವಚಸ್ತತಸ್ತಸ್ಯ ಸ್ವಪ್ನಭೂತಂ ಮನೋಗತಂ ।
ಪಿತಾಮಹಃ ಪ್ರಸನ್ನಾತ್ಮಾ ನೇತ್ರೈಃ ಫುಲ್ಲಾಂಬುಜಪ್ರಭೈಃ ॥೫೨॥

---

೪೭–೪೮. ಮೂರುಲೋಕಕ್ಕೂ ಒಡೆಯನಾದ ಮಹಾದೇವನು ಏಕಾದಶರುದ್ರರಿಂದಲೂ ಉಮಾದೇವಿಯು ಸೃಷ್ಟಿಸಿದ ಸ್ತ್ರೀಯರಿಂದಲೂ ಕೂಡಿ ಮರಣಹೊಂದಿದ ಆ ಬ್ರಹ್ಮನ ಸಮೀಪದಲ್ಲಿದ್ದನು.

೪೯–೫೦. ಆ ಬ್ರಹ್ಮನ ಪುತ್ರನಾದ ಮಹೇಶ್ವರನು ದಯೆಯುಳ್ಳವನಾಗಿ ಮರಣಹೊಂದಿದ ಬ್ರಹ್ಮನಿಗೆ ತನ್ನಲ್ಲಿದ್ದ ಪ್ರಾಣವಾಯುವನ್ನು ಕೊಟ್ಟನು. ಆಮೇಲೆ ಸ್ವಲ್ಪಮಟ್ಟಿಗೆ ಜ್ಞಾನವನ್ನು ಪಡೆದ ಬ್ರಹ್ಮನನ್ನು ನೋಡಿ ರುದ್ರನು ಸಂತೋಷಪಟ್ಟು ಆ ಬ್ರಹ್ಮನನ್ನು ಕುರಿತು ಹೀಗೆ ಮಾತನಾಡಿದನು.

೫೧. ಲೋಕಕ್ಕೆ ಗುರುವಾದ ಎಲೈ ಬ್ರಹ್ಮನೇ, ಮಹಾಮಹಿಮನಾದ ನೀನು ಹೆದರಬೇಡ. ನಾನು ಈಗ ನಿನ್ನ ಪ್ರಾಣವನ್ನು ನೆಲೆಗೊಳಿಸಿರುವೆನು. ಆದುದರಿಂದ ಏಳು.

೫೨. ಬ್ರಹ್ಮನು ಆ ಮಹೇಶ್ವರನ ಮಾತನ್ನು ಸ್ವಪ್ನದಲ್ಲಿ ಮಾತನಾಡಿದಂತೆ ಭಾವಿಸಿ ಪ್ರಾಣಶಕ್ತಿಯುಳ್ಳವನಾಗಿ ವಿಕಸಿತವಾದ ಕಮಲದಂತೆ ಕಾಂತಿಯುಳ್ಳ ಕಣ್ಣುಗಳಿಂದ ಆ ಮಹೇಶ್ವರನನ್ನು ನೋಡಿದನು.

ತತಃ ಪ್ರತ್ಯಾಗತಪ್ರಾಣಃ ಸಮುದ್ವೀಕ್ಷ್ಯ ಮಹೇಶ್ವರಂ ।
ಸ ಉದ್ವೀಕ್ಷ್ಯ ಚಿರಂಕಾಲಂ ಸ್ನಿಗ್ಧಗಂಭೀರಯಾ ಗಿರಾ ॥೫೩॥
ಉವಾಚ ಭಗವಾನ್ ಬ್ರಹ್ಮಾ ಸಮುತ್ಥಾಯ ಕೃತಾಂಜಲಿಃ ।
ಭೋಭೋ ವದ ಮಹಾಭಾಗ ಆನಂದಯಸಿ ಮೇ ಮನಃ ॥೫೪॥
ಕೋ ಭವಾನಷ್ಟಮೂರ್ತಿರ್ವೈ ಸ್ಥಿತ ಏಕಾದಶಾತ್ಮಕಃ ।

॥ ಇಂದ್ರ ಉವಾಚ ॥

ತಸ್ಯ ತದ್ವಚನಂ ಶ್ರುತ್ವಾ ವ್ಯಾಜಹಾರ ಮಹೇಶ್ವರಃ ॥೫೫॥
ಸ್ಪೃಶನ್ಕರಾಭ್ಯಾಂ ಬ್ರಹ್ಮಾಣಂ ಸುಖಾಭ್ಯಾಂ ಸ ಸುರಾರಿಹಾ ।

॥ ಶ್ರೀ ಶಂಕರ ಉವಾಚ ॥

ಮಾಂ ವಿದ್ಧಿ ಪರಮಾತ್ಮಾನ ಮೇನಾಂ ಮಾಯಾ ಮಜಾಮಿತಿ ॥೫೬॥
ಏತೇ ವೈ ಸಂಸ್ಥಿತಾ ರುದ್ರಾ ಸ್ತ್ವಾಂ ರಕ್ಷಿತು ಮಿಹಾಗತಾಃ ।

---

೫೩. ಬ್ರಹ್ಮನು ಬಹಳ ಕಾಲ ಶಿವನನ್ನು ನೋಡಿ ಎದ್ದು ಕೈಜೋಡಿಸಿಕೊಂಡು ಪ್ರೀತಿಯುಕ್ತವಾದ ಗೌರವವಾದ ರೀತಿಯಿಂದ ಮಾತನಾಡಿದನು.

೫೪. ಎಲೈ ಮಹಾಮಹಿಮಶಾಲಿಯಾದ ಮಹಾದೇವನೇ, ನೀನು ಅಷ್ಟಮೂರ್ತಿಸ್ವರೂಪನಾದ ಪರಮೇಶ್ವರನಲ್ಲವೇ? ಈಗ ಹನ್ನೊಂದು ಭಾಗವಾಗಿ ಏಕಾದಶರುದ್ರರೂಪದಿಂದ ಇದ್ದು ನನ್ನ ಮನಸ್ಸಿಗೆ ಸಂತೋಷವನ್ನುಂಟುಮಾಡುತ್ತಿರುವೆ. ನೀನು ಹೇಳಬೇಕಾದುದನ್ನು ಹೇಳು.

೫೫. ಆ ಬ್ರಹ್ಮನ ಮಾತನ್ನು ಕೇಳಿ ದೇವಶತ್ರುಗಳನ್ನು ನಾಶಮಾಡುವ ಮಹೇಶ್ವರನು ಕೈಗಳಿಂದ ಬ್ರಹ್ಮನನ್ನು ಮುಟ್ಟುತ್ತಾ ಸುಖವನ್ನುಂಟುಮಾಡಿ ಮಾತನಾಡಿದನು.

೫೬. ಶಂಕರನು ಹೇಳಿದನು: ಎಲೈ ಬ್ರಹ್ಮನೇ, ನಾನೇ ಪರಮಾತ್ಮನು. ಈ ದೇವಿಯೇ ಅಜಾ ಎಂಬ ಹೆಸರುಳ್ಳ ಮಾಯೆಯು. ಈ ಏಕಾದಶರುದ್ರರೇ ನಿನ್ನನ್ನು ರಕ್ಷಿಸುವುದಕ್ಕಾಗಿ ಇಲ್ಲಿಗೆ ಬಂದಿರುವರು. ಎಂದು ಹೇಳಿದನು.

ತತಃ ಪ್ರಣಮ್ಯ ತಂ ಬ್ರಹ್ಮಾ ದೇವದೇವ ಮುವಾಚ ಹ ॥೫೭॥
ಕೃತಾಂಜಲಿಪುಟೋ ಭೂತ್ವಾ ಹರ್ಷಗದ್ಗದಯಾ ಗಿರಾ ।
ಭಗವನ್ ದೇವದೇವೇಶ ದುಃಖೈ ರಾಕುಲಿತೋ ಹ್ಯಹಂ ॥೫೮॥
ಸಂಸಾರಾನ್ಮೋಕ್ತು ಮೀಶಾನ ಮಾಮಿಹಾರ್ಹಸಿ ಶಂಕರ ।
ತತಃ ಪ್ರಹಸ್ಯ ಭಗವಾ ನ್ಸಿತಾಪುಹಮು ಮಾಪತಿಃ ॥೫೯॥
ತಥಾ ರುದ್ರೈ ರ್ಜಗನ್ನಾಥಸ್ತಯಾ ಚಾಂತರ್ದಧೇ ವಿಭುಃ ।

॥ ಇಂದ್ರ ಉವಾಚ ॥

ತಸ್ಮಾಚ್ಛಿಲಾದ ಲೋಕೇಷು ದುರ್ಲಭೋ ವೈ ತ್ವಯೋನಿಜಃ ॥೬೦॥
ಮೃತ್ಯುಹೀನಃ ಪುಮಾನ್ ವಿದ್ಧಿ ಸಮೃತ್ಯುಃ ಪದ್ಮಜೋಽಪಿ ಸಃ ।

---

೫೭. ಆ ಮೇಲೆ ಶಿವನಿಗೆ ಬ್ರಹ್ಮನು ನಮಸ್ಕಾರಮಾಡಿ ಸಂತೋಷದಿಂದ ಗದ್ಗದಧ್ವನಿಯಿಂದ ಕೂಡಿ ಕೈಜೋಡಿಸಿಕೊಂಡು ಮಾತನಾಡಿದನು.

೫೮. ಷಡ್ಗುಣೈಶ್ವರ್ಯ ಸಂಪನ್ನನೂ, ದೇವದೇವನೂ ಆದ ಶಂಕರನೇ, ನಾನು ದುಃಖದಿಂದ ವ್ಯಾಕುಲಚಿತ್ತನಾಗಿರುವೆನು. ನನ್ನನ್ನು ಈ ಸಂಸಾರ ದುಃಖದಿಂದ ಬಿಡಿಸು. ಎಂದು ಹೇಳಿದನು.

೫೯. ಆ ಮೇಲೆ ಉಮಾಪತಿಯಾದ ಅರ್ಧನಾರೀಶ್ವರನು ಬ್ರಹ್ಮನನ್ನು ಹಾಸ್ಯಮಾಡಿ (ಮುಕ್ತನಾದ ಅವನು ಮುಕ್ತಿಯನ್ನು ಯಾಚಿಸುವುದು ಹಾಸ್ಯಾಸ್ಪದವೆಂದು ಭಾವವು.) ಸರ್ವವ್ಯಾಪಿಯಾದ ಆ ಪರಮೇಶ್ವರನು ಉಮಾದೇವಿಯೊಡನೆಯೂ, ಏಕಾದಶರುದ್ರರೊಡನೆಯೂ, ಅಂತರ್ಧಾನ ಹೊಂದಿದನು.

೬೦. ಇಂದ್ರನು ಹೇಳಿದನು: ಎಲೈ ಶಿಲಾದಮುನಿಯೇ, ಕೇಳು. ಈ ಕಾರಣಗಳಿಂದ ಲೋಕದಲ್ಲಿ ಅಯೋನಿಜನೂ, ಮೃತ್ಯುವಿಲ್ಲದವನೂ ಆದ ಮಗನು ದುರ್ಲಭನು. ಕಮಲದಲ್ಲಿ ಹುಟ್ಟಿದ ಬ್ರಹ್ಮನಿಗೂ ಕೂಡ ಮೃತ್ಯುವಿರುವಲ್ಲಿ ಉಳಿದವರವಿಷಯದಲ್ಲಿ ಹೇಳಬೇಕಾದುದೇನು?

ಕಿಂತು ದೇವೇಶ್ವರೋ ರುದ್ರಃ ಪ್ರಸೀದತಿ ಯದೀಶ್ವರಃ ॥೬೧॥
ನ ದುರ್ಲಭೋ ಮೃತ್ಯುಹೀನ ಸ್ತವ ಪುತ್ರೋ ಹ್ಯಯೋನಿಜಃ ।
ಮಯಾ ಚ ವಿಷ್ಣುನಾ ಚೈವ ಬ್ರಹ್ಮಣಾ ಚ ಮಹಾತ್ಮನಾ ॥೬೨॥
ಅಯೋನಿಜಂ ಮೃತ್ಯುಹೀನ ಮಸಮರ್ಥಂ ನಿವೇದಿತುಂ ।

॥ಶೈಲಾದಿರುವಾಚ ॥

ಏವಂ ವ್ಯಾಹೃತ್ಯ ವಿಪ್ರೇಂದ್ರ ಮನುಗೃಹ್ಯ ಚ ತಂ ಘೃಣೀ ॥೬೩॥
ದೇವೈರ್ವೃತೋ ಯಯೌ ದೇವಃ ಸಿತೇನೇಭೇನ ವೈ ಪ್ರಭುಃ ॥೬೪॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಇಂದ್ರವಾಕ್ಯಂ ನಾಮ
ಏಕಚತ್ವಾರಿಂಶೋಽಧ್ಯಾಯಃ

---

೬೧. ಆದರೆ ದೇವತೆಗಳಿಗೆಲ್ಲರಿಗೂ ಸ್ವಾಮಿಯಾದ ರುದ್ರನು ಪ್ರಸನ್ನನಾದರೆ ಮೃತ್ಯುವಿಲ್ಲದ ಅಯೋನಿಜನಾದ ಮಗನು ನಿನಗೆ ದುರ್ಲಭನಲ್ಲ.

೬೨. ನಾನಾಗಲೀ, ಬ್ರಹ್ಮನಾಗಲೀ, ವಿಷ್ಣುವಾಗಲೀ, ಮರಣವಿಲ್ಲದ ಅಯೋನಿಜನಾದ ಮಗನನ್ನು ಕೊಡುವುದರಲ್ಲಿ ಸಮರ್ಥರಾಗಿಲ್ಲ.

೬೩–೬೪. ನಂದಿಯು ಹೇಳಿದನು: ಆ ದಯಾಶಾಲಿಯಾದ ದೇವೇಂದ್ರನು ಶಿಲಾದಮುನಿಗೆ ಹೀಗೆಂದು ಹೇಳಿ ಅನುಗ್ರಹಮಾಡಿ ದೇವತೆಗಳಿಂದ ಕೂಡಿದವನಾಗಿ ಬಿಳಿಯ ಆನೆಯಾದ ಐರಾವತದ ಮೇಲೆ ಕುಳಿತು ತನ್ನ ಲೋಕಕ್ಕೆ ಹೋದನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಇಂದ್ರನ ವಿವರಣೆಯನ್ನು ತಿಳಿಸುವ
ನಲವತ್ತೊಂದನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ದ್ವಿಚತ್ವಾರಿಂಶೋಽಧ್ಯಾಯಃ

**ದ್ವಿಚತ್ವಾರಿಂಶದ ಧ್ಯಾಯೇ ತಪಃ ಪ್ರೀತಾನ್ಮಹೇಶ್ವರಾತ್ ।**
**ಶಿಲಾದಸ್ಯ ಸುತಪ್ರಾಪ್ತಿಃ ಸಂದ್ಯುತ್ಸಾಹಶ್ಚ ವರ್ಣ್ಯತೇ ॥**

**॥ ಸೂತ ಉವಾಚ ॥**

**ಗತೇ ಪುಣ್ಯೇ ಚ ವರದೇ ಸಹಸ್ರಾಕ್ಷೇ ಶಿಲಾಶನಃ ।**
**ಆರಾಧಯನ್ಮಹಾದೇವಂ ತಪಸಾಽತೋಷಯದ್ಭವಂ॥ ೧ ॥**

**ಅಥ ತಸ್ಯೈವ ಮುನಿ ಶಂ ತತ್ಪರಸ್ಯ ದ್ವಿಜಸ್ಯ ತು ।**
**ದಿವ್ಯಂ ವರ್ಷ ಸಹಸ್ರಂ ತು ಗತಂ ಕ್ಷಣ ಮಿವಾದ್ಭುತಂ ॥ ೨ ॥**

**ವಲ್ಮೀಕೇನಾವೃತಾಂಗಶ್ಚ ಲಕ್ಷ್ಯಃ ಕೀಟಗಣೈರ್ಮುನಿಃ ।**
**ವಜ್ರಸೂಚೀ ಮುಖೈಶ್ಚಾನ್ಯೈ ರಕ್ತ ಕೀಟೈಶ್ಚ ಸರ್ವತಃ ॥ ೩ ॥**

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನಲವತ್ತೆರಡನೆಯ ಅಧ್ಯಾಯವು.

(ನಲವತ್ತೆರಡನೆಯ ಅಧ್ಯಾಯದಲ್ಲಿ ತಪಸ್ಸಿನಿಂದ ಸಂತೋಷ ಹೊಂದಿದ ಮಹೇಶ್ವರನು ಶಿಲಾದಮುನಿಗೆ ಪುತ್ರನನ್ನು ಕೊಟ್ಟದ್ದೂ, ನಂದಿಯ ಉತ್ಸಾಹವೂ ಇವನ್ನು ವರ್ಣಿಸಲಾಗುವುದು.)

೧. ಪುಣ್ಯವಂತನಾದ ವರವನ್ನು ಕೊಡುವ ದೇವೇಂದ್ರನು ಹೊರಟು ಹೋಗುತ್ತಲೂ ಶಿಲಾದಮುನಿಯು ತಪಸ್ಸಿನಿಂದ ಶಿವನನ್ನು ಪೂಜಿಸಿ ಸಂತೋಷಪಡಿಸಿದನು.

೨-೪. ಯಾವಾಗಲೂ ಶಿವನನ್ನೇ ಧ್ಯಾನಮಾಡುತ್ತಿರುವ ಶಿಲಾದ ಮುನಿಗೆ ದೇವಮಾನದ ಒಂದುಸಾವಿರ ವರ್ಷಗಳು ಒಂದುಕ್ಷಣದಂತೆ ಕಳೆದುವು. ಆಶ್ಚರ್ಯದ ವಿಷಯವೇನೆಂದರೆ ? ಶಿಲಾದಮುನಿಯ ಅವಯವಗಳಿಗೆ ಹುತ್ತವು ಆವರಿಸಿತ್ತು. ವಜ್ರಸೂಜೀಹುಳುವೂ, ರಕ್ತಕೀಟವೆಂಬಹುಳುವೂ, ಅವನ ಶರೀರದ ಚರ್ಮ ರಕ್ತಮಾಂಸಗಳನ್ನು ತಿಂದು

ನಿರ್ಮಾಂಸ ರುಧಿರತ್ವಗ್ಸ್ನೈ ನಿರ್ಲೇಪಃ ಕುಡ್ಯವತ್ ಸ್ಥಿತಃ ।
ಅಸ್ಥಿ ಶೇಷೋಽಭವತ್ಪಶ್ಚಾತ್ತಮು ಮನ್ಯತ ಶಂಕರಃ ॥ ೪ ॥

ಯದಾ ಸ್ಪೃಷ್ಟೋ ಮುನಿಸ್ತೇನ ಕರೇಣ ಚ ಸ್ಮರಾರಿಣಾ ।
ತದೈವ ಮುನಿಶಾರ್ದೂಲಾ ಶ್ಚೋತ್ಸಸರ್ಜ ಕ್ಲಮಂ ದ್ವಿಜಃ ॥ ೫ ॥

ತಪತಸ್ತಸ್ಯ ತಪಸಾ ಪ್ರಭುಸ್ತುಷ್ಟೋಽಥ ಶಂಕರಃ ।
ತುಷ್ಟಸ್ತವೇತ್ಯಥೋವಾಚ ಸಗಣಶ್ಚೋಮಯಾ ಸಹ ॥ ೬ ॥

ತಪಸಾಽನೇನ ಕಿಂ ಕಾರ್ಯಂ ಭವತಸ್ತೇ ಮಹಾಮತೇ ।
ದದಾಮಿ ಪುತ್ರಂ ಸರ್ವಜ್ಞಂ ಸರ್ವಶಾಸ್ತ್ರಾರ್ಥ ಪಾರಗಂ ॥ ೭ ॥

ತತಃ ಪ್ರಣಮ್ಯ ದೇವೇಶಂ ಸ್ತುತ್ವೋವಾಚ ಶಿಲಾಶನಃ ।
ಹರ್ಷಗದ್ಗದಯಾ ವಾಚಾ ಸೋಮಂ ಸೋಮವಿಭೂಷಣಂ ॥ ೮ ॥

---

ಬಿಟ್ಟಿದ್ದುವು. ಆದರೂ ಮೂಳೆಗಳು ಮಾತ್ರ ಉಳಿದು ಗೋಡೆಯಂತೆ ಚಲಿಸದೇ ಯಾವದುಃಖವನ್ನೂ ಮನಸ್ಸಿಗೆ ತಂದುಕೊಳ್ಳದೆ ಆ ಮುನಿಯು ಇದ್ದನು! ಆಮೇಲೆ ಶಿವನು ಇವನನ್ನು ಗುರುತಿಸಿ ತಿಳಿದನು.

೫. ಮನ್ಮಥನ ಶತ್ರುವಾದ ಶಿವನು ಕೈಗಳಿಂದ ಮುಟ್ಟಿದೊಡನೆಯೇ ಆ ಶಿಲಾದಮುನಿಶ್ರೇಷ್ಠನು ತನ್ನ ಆಯಾಸವನ್ನೆಲ್ಲವನ್ನೂ ತ್ಯಜಿಸಿದನು.

೬–೭. ಆ ಶಿಲಾದಮುನಿಯ ತಪಸ್ಸಿಗೆ ಸಂತೋಷಪಟ್ಟ ಶಂಕರನು ಉಮಾದೇವಿಯೊಡನೆಯೂ, ತನ್ನ ಗಣಗಳೊಡನೆಯೂ ಬಂದು ನಿನ್ನ ತಪಸ್ಸಿಗೆ ಮೆಚ್ಚಿದೆನೆಂದು ಹೇಳಿದನು. ಮತ್ತು ಎಲೈಬುದ್ಧಿಶಾಲಿಯೇ, ಈ ತಪಸ್ಸಿನಿಂದ ನಿನಗೆ ಏನಾಗಬೇಕು? ನಿನಗೆ ಸಮಸ್ತ ಶಾಸ್ತ್ರಾರ್ಥಗಳನ್ನೂ ಸಂಪೂರ್ಣವಾಗಿ ತಿಳಿದ ಸರ್ವಜ್ಞನಾದ ಮಗನನ್ನು ಕೊಡುವೆನು ಎಂದು ಹೇಳಿದನು.

೮. ಆ ಬಳಿಕ ಶಿಲಾದಮುನಿಯು ದೇವದೇವನಾದ ಶಿವನಿಗೆ ನಮಸ್ಕಾರಮಾಡಿ ಉಮಾದೇವೀಸಹಿತನಾದ ಚಂದ್ರಶೇಖರನಾದ ಅವನನ್ನು ಕುರಿತು ಸಂತೋಷದಿಂದುಂಟಾದ ಗದ್ಗದಧ್ವನಿಯಿಂದ ಮಾತನಾಡಿದನು.

॥ ಶಿಲಾದ ಉವಾಚ ॥

ಭಗವನ್ ದೇವದೇವೇಶ ತ್ರಿಪುರಾರ್ದನ ಶಂಕರ ।
ಅಯೋನಿಜಂ ಮೃತ್ಯುಹೀನಂ ಪುತ್ರಮಿಚ್ಛಾಮಿ ಸತ್ತಮ ॥ ೯ ॥

॥ ಸೂತ ಉವಾಚ ॥

ಪೂರ್ವಮಾರಾಧಿತಃ ಪ್ರಾಹ ತಪಸಾ ಪರಮೇಶ್ವರಃ ।
ಶಿಲಾದಂ ಬ್ರಹ್ಮಣಾ ರುದ್ರಃ ಪ್ರೀತ್ಯಾ ಪರಮಯಾ ಪುನಃ ॥೧೦॥

॥ ಶ್ರೀ ದೇವದೇವ ಉವಾಚ ॥

ಪೂರ್ವಮಾರಾಧಿತೋ ವಿಪ್ರ ಬ್ರಹ್ಮಣಾಽಹಂ ತಪೋಧನ ।
ತಪಸಾ ಚಾವ ತಾರಾರ್ಥಂ ಮುನಿಭಿಶ್ಚ ಸುರೋತ್ತಮೈಃ ॥೧೧॥
ತವ ಪುತ್ರೋ ಭವಿಷ್ಯಾಮಿ ನಂದಿನಾಮ್ನಾ ತ್ವಯೋನಿಜಃ ।
ಪಿತಾ ಭವಿಷ್ಯಸಿ ಮಮ ಪಿತುರ್ವೈ ಜಗತಾಂ ಮುನೇ ॥೧೨॥

---

೯. ಶಿಲಾದನು ಶಿವನನ್ನು ಕುರಿತು, ಮಹಾಮಹಿಮನಾದ ದೇವ ಶ್ರೇಷ್ಠನೂ, ತ್ರಿಪುರನಾಶಕನೂ, ಆದ ಶಂಕರನೇ, ಅಯೋನಿಜನೂ, ಮೃತ್ಯು ಹೀನನೂ ಆದ ಪುತ್ರನನ್ನು ನನಗೆ ಕೊಡು. ಎಂದು ಹೇಳಿದನು.

೧೦. ಸೂತನು ಹೇಳಿದನು: ಹಿಂದೆಯೇ ಬ್ರಹ್ಮನಪೂಜೆಯನ್ನೂ ತಪಸ್ಸನ್ನೂ ಒಪ್ಪಿಕೊಂಡು ತುಷ್ಟನಾಗಿದ್ದ ಪರಮೇಶ್ವರನು ಪುನಃ ಶಿಲಾದಮುನಿಯನ್ನು ಕುರಿತು ಪ್ರೀತಿಯಿಂದ ಹೀಗೆ ಅನುಗ್ರಹಿಸಿದನು.

೧೧-೧೨. ಶ್ರೀದೇವದೇವನು ಹೇಳಿದನು: ಎಲೈ ಶಿಲಾದನೇ, ಹಿಂದೆ ಬ್ರಹ್ಮನೂ, ಮುನಿಗಳೂ, ದೇವತೆಗಳೂ ನನ್ನನ್ನು ತಪಸ್ಸಿನಿಂದ ಪೂಜಿಸಿರುವರು. ನಾನು ಅವತಾರಮಾಡಬೇಕೆಂದು ಅವರ ಇಷ್ಟವಿರುವುದು. ನಂದೀ ಎಂಬ ಹೆಸರಿನಿಂದ ಅಯೋನಿಜನಾಗಿ ನಾನು ನಿನ್ನ ಮಗನಾಗುವೆನು. ಲೋಕಕ್ಕೆಲ್ಲಕ್ಕೂ ತಂದೆಯಾದ ನನಗೆ ನೀನು ತಂದೆಯಾಗುವೆ !

೧೩. ಈ ರೀತಿಯಲ್ಲಿ ಹೇಳಿದಮೇಲೆ ನಮಸ್ಕಾರಮಾಡಿ ನಿಂತಿದ್ದ ಶಿಲಾದಮುನಿಯನ್ನು ನೋಡಿ ದಯಾಶಾಲಿಯಾದ ಉಮಾದೇವೀ ಸಹಿತ

ಏವಮುಕ್ತ್ವಾಮುನಿಂ ಪ್ರೇಕ್ಷ್ಯ ಪ್ರಣಿಪತ್ಯ ಸ್ಥಿತಂ ಘೃಣೀ ।
ಸೋಮಃ ಸೋಮೋಪಮಃ ಪ್ರೀತಸ್ತತ್ರೈವಾಂತರ ಧೀಯತ ॥೧೩॥

ಲಬ್ಧಪುತ್ರಃ ಪಿತಾ ರುದ್ರಾತ್ಪ್ರೀತೋ ಮಮ ಮಹಾಮುನೇ ।
ಯಜ್ಞಾಂಗಣಂ ಮಹತ್ಪ್ರಾಪ್ಯ ಯಜ್ಞಾರ್ಥಂ ಯಜ್ಞವಿತ್ತಮಃ ॥

ತದಂಗಣಾದಹಂ ಶಂಭೋಸ್ತನುಜಸ್ತಸ್ಯ ಚಾಜ್ಞಯಾ ।
ಸಂಜಾತಃ ಪೂರ್ವಮೇವಾಹಂ ಯುಗಾಂತಾಗ್ನಿ ಸಮಪ್ರಭಃ ॥೧೫॥

ವವರ್ಷುಸ್ತದಾ ಪುಷ್ಕರಾವರ್ತಕಾದ್ಯಾ ।
ಜಗುಃ ಖೇಚರಾಃ ಕಿನ್ನರಾಃ ಸಿದ್ಧಸಾಧ್ಯಾಃ ॥
ಶಿಲಾದಾತ್ಮಜತ್ವಂ ಗತೇ ಮಯ್ಯುಪೇಂದ್ರಃ ।
ಸಸರ್ಜಾಥ ವೃಷ್ಟಿಂ ಸುಪುಷ್ಪೌಘ ಮಿಶ್ರಾಂ ॥೧೬॥

ಮಾಂ ದೃಷ್ಟ್ವಾ ಕಾಲಸೂರ್ಯಾಭಂ ಜಟಾಮುಕುಟ ಧಾರಿಣಂ ।
ತ್ರ್ಯಕ್ಷಂ ಚತುರ್ಭುಜಂ ಬಾಲಂ ಶೂಲಟಂಕ ಗದಾಧರಂ ॥೧೭॥

---

ನಾದ ಚಂದ್ರನಂತೆ ಶಾಂತನಾದ ಶಿವನು ಸಂತೋಷಪಟ್ಟು ಅಲ್ಲಿಯೇ ಅಂತರ್ಧಾನನಾದನು.

೧೪–೧೫. ನನ್ನ ತಂದೆಯಾದ ಶಿಲಾದನು ಯಜ್ಞಮಾಡಬೇಕೆಂದು ಒಂದು ಯಜ್ಞಾಂಗಣವನ್ನು ನಿರ್ಮಿಸಿದನು. ನಾನು ಶಿವನ ಅಪ್ಪಣೆಯಿಂದ ಆ ಯಜ್ಞಾಂಗಣದಲ್ಲಿ ಹುಟ್ಟಿ ಪ್ರಳಯಾಗ್ನಿಸಮಾನವಾದ ಕಾಂತಿಯುಳ್ಳವನಾಗಿ ಆ ಶಿಲಾದಮುನಿಯ ಪುತ್ರನಾದೆನು. ಅದರಿಂದ ನನ್ನ ತಂದೆಯಾದ ಶಿಲಾದಮುನಿಯು ಸಂತೋಷ ಹೊಂದಿದನು.

೧೬. ನಾನು ಶಿಲಾದಮುನಿಯ ಮಗನಾಗಿ ಜನಿಸಿದಾಗ ಪುಷ್ಕರಾವರ್ತವೇ ಮುಂತಾದ ಮೇಘಗಳು ಮಳೆಯನ್ನು ಸುರಿಸಿದುವು. ಖೇಚರರೂ, ಕಿನ್ನರರೂ, ಸಿದ್ಧರೂ, ಸಾಧ್ಯರೂ, ಗಾನಮಾಡಿದರು. ಉಪೇಂದ್ರನಾದ ವಿಷ್ಣುವು ಹೂಗಳಿಂದ ಕೂಡಿದ ಒಳ್ಳೆಯ ಮಳೆಯನ್ನು ಸುರಿಸಿದನು.

೧೭–೧೮. ಪ್ರಳಯಕಾಲದ ಸೂರ್ಯನ ಸಮಾನವಾದ ಕಾಂತಿಯಿಂದ ಕೂಡಿ ಮೂರು ಕಣ್ಣುಗಳೂ, ನಾಲ್ಕುತೋಳುಗಳೂ, ಜಡೆಯು,

ವಜ್ರಿಣಂ ವಜ್ರದಂಷ್ಟ್ರಂ ಚ ವಜ್ರಿಣಾಽಽರಾಧಿತಂ ಶಿಶುಂ ।
ವಜ್ರಕುಂಡಲಿನಂ ಘೋರಂ ನೀರದೋಪಮನಿಸ್ವನಂ ॥೧೮॥

ಬ್ರಹ್ಮಾದ್ಯಾಸ್ತುಷ್ಟುವುಃ ಸರ್ವೇ ಸುರೇಂದ್ರಶ್ಚ ಮುನೀಶ್ವರಾಃ ।
ನೇದುಃ ಸಮಂತತಃ ಸರ್ವೇ ನನೃತು ಶ್ಚಾಪ್ಸರೋಗಣಾಃ ॥೧೯॥

ಋಷಯೋ ಮುನಿಶಾರ್ದೂಲ ಋಗ್ಯಜುಃ ಸಾಮಸಂಭವೈಃ ।
ಮಂತ್ರೈರ್ಮಾಹೇಶ್ವರೈಃ ಸ್ತುತ್ವಾ ಸಂಪ್ರಣೇ ಮುರ್ಮುದಾಽನ್ವಿತಾಃ॥

ಬ್ರಹ್ಮಾ ಹರಿಶ್ಚ ರುದ್ರಶ್ಚ ಶಕ್ರಃ ಸಾಕ್ಷಾಚ್ಛಿವಾಂಽಬಿಕಾ ।
ಜೀವಶ್ಚೇಂದು ರ್ಮಹಾತೇಜಾ ಭಾಸ್ಕರಃ ಪವನೋಽನಲಃ ॥೨೧॥

ಈಶಾನೋ ನಿಋತಿ ರ್ಯಕ್ಷೋ ಯಮೋ ವರುಣ ಏವಚ ।
ವಿಶ್ವೇದೇವಾಸ್ತಥಾ ರುದ್ರಾ ವಸವಶ್ಚ ಮಹಾಬಲಾಃ ॥೨೨॥

ಲಕ್ಷ್ಮೀಃ ಸಾಕ್ಷಾಚ್ಛಚೀ ಜ್ಯೇಷ್ಠಾ ದೇವೀ ಚೈವ ಸರಸ್ವತೀ ।
ಅದಿತಿಶ್ಚ ದಿತಿಶ್ಚೈವ ಶ್ರದ್ಧಾಲಜ್ಜಾ ಧೃತಿಸ್ತಥಾ ॥೨೩॥

---

ಕಿರೀಟ, ಶೂಲ, ಟಂಕ, ಗದೆ, ವಜ್ರ, ಈ ಆಯುಧಗಳೂ, ವಜ್ರದ ಕರ್ಣಾಭರಣ ಇವುಗಳನ್ನು ಧರಿಸಿ, ವಜ್ರದ ಕೋರೇಹಲ್ಲುಗಳುಳ್ಳವನಾಗಿ ಮೇಘಧ್ವನಿಗೆ ಸಮಾನವಾದ ಧ್ವನಿಯುಳ್ಳ ಬಾಲಕನಾದ ನನ್ನನ್ನು ನೋಡಿ ದೇವೇಂದ್ರನು ಪೂಜಿಸಿದನು. ಬ್ರಹ್ಮನೇ ಮೊದಲಾದ ದೇವತೆಗಳೂ ಮುನಿಶ್ರೇಷ್ಠರೂ, ಸ್ತೋತ್ರಮಾಡಿದರು. ಅಪ್ಸರಸ್ತ್ರೀಯರು ನರ್ತನ ಮಾಡಿದರು. ಪ್ರಪಂಚದಲ್ಲಿ ಎಲ್ಲರೂ ಜಯಧ್ವನಿ ಮಾಡಿದರು.

೨೦. ಎಲೈ ಮುನಿಶ್ರೇಷ್ಠನಾದ ಸನತ್ಕುಮಾರನೇ, ಅನೇಕ ಋಷಿಗಳು ಋಗ್ವೇದ, ಯಜುರ್ವೇದ, ಸಾಮವೇದಗಳಲ್ಲಿರುವ ಮಹೇಶ್ವರ ಸಂಬಂಧವಾದ ಮಂತ್ರಗಳಿಂದ ಸ್ತೋತ್ರಮಾಡಿ ಸಂತೋಷದಿಂದ ನಮಸ್ಕರಿಸಿದರು.

೨೧–೨೪. ಎಲೈ ಮುನಿಶ್ರೇಷ್ಠನೇ, ಬ್ರಹ್ಮ, ಹರಿ, ರುದ್ರರೆಂಬ ತ್ರಿಮೂರ್ತಿಗಳು, ದೇವೇಂದ್ರನೂ, ಉಮಾದೇವಿಯೂ, ಬೃಹಸ್ಪತಿ, ಚಂದ್ರ, ಸೂರ್ಯ, ವಾಯು, ಅಗ್ನಿ, ಈಶಾನ, ನಿಋತಿ, ಕುಬೇರ, ಯಮ, ವರುಣ, ವಿಶ್ವೇದೇವತೆಗಳು, ಏಕಾದಶ ರುದ್ರರು, ಅಷ್ಟವಸುಗಳು, ಲಕ್ಷ್ಮೀ, ಶಚೀ, ಜ್ಯೇಷ್ಠಾದೇವಿ, ಸರಸ್ವತೀ, ಅದಿತಿ, ದಿತಿ, ಶ್ರದ್ಧಾ,

ನಂದಾ ಭದ್ರಾ ಚ ಸುರಭೀ ಸುಶೀಲಾ ಸುಮನಾಸ್ತಥಾ ।
ವೃಷೇಂದ್ರಶ್ಚ ಮಹಾತೇಜಾ ಧರ್ಮೋಽರ್ಧರ್ಮಾತ್ಮಜಸ್ತಥಾ ॥೨೪॥
ಆವೃತ್ಯ ಮಾಂ ಸಮಾಲಿಂಗ್ಯ ತುಷ್ಟುವು ರ್ಮುನಿಸತ್ತಮ ।
ಶಿಲಾದೋಽಪಿ ಮುನಿರ್ದೃಷ್ಟ್ವಾ ಪಿತಾ ಮೇ ತಾದೃಶಂ ತದಾ ॥೨೫॥
ಪ್ರೀತ್ಯಾ ಪ್ರಣಮ್ಯ ಪುಣ್ಯಾತ್ಮಾ ತುಷ್ಟಾವೇಷ್ಟಪ್ರದಂ ಸುತಂ ।

॥ ಶಿಲಾದ ಉವಾಚ ॥

ಭಗವನ್ ದೇವದೇವೇಶ ತ್ರಿಯಂಬಕ ಮಹಾವ್ಯಯ ॥೨೬॥
ಪುತ್ರೋಽಸಿ ಜಗತಾಂ ಯಸ್ಮಾತ್ರಾತಾ ದುಃಖಾದ್ಧಿ ಕಿಂಪುನಃ ।
ರಕ್ಷಕೋ ಜಗತಾಂ ಯಸ್ಮಾತ್ ಪಿತಾ ಮೇ ಪುತ್ರ ಸರ್ವಗ ॥೨೭॥
ಅಯೋನಿಜ ನಮಸ್ತುಭ್ಯಂ ಜಗದ್ಯೋನೇ ಪಿತಾಮಹ ।
ಪಿತಾ ಪುತ್ರ ಮಹೇಶಾನ ಜಗತಾಂ ಚ ಜಗದ್ಗುರೋ ॥೨೮॥

---

ಲಜ್ಜಾ, ಧೃತಿ, ನಂದಾ, ಭದ್ರಾ, ಸುರಭಿ, ಸುಶೀಲಾ, ಸುಮನಾ, ಮುಂತಾದ ದೇವಿಯರೂ, ವೃಷಭದೇವ, ಧರ್ಮದೇವ, ಧರ್ಮಪುತ್ರ ಇವರೆಲ್ಲರೂ ನನ್ನ ಸುತ್ತಲೂ ಸುತ್ತಿಕೊಂಡು ನನ್ನನ್ನು ಆಲಿಂಗಿಸಿಕೊಂಡು ಸ್ತೋತ್ರ ಮಾಡಿದರು.

೨೫. ನನ್ನ ತಂದೆಯಾದ ಶಿಲಾದಮುನಿಯು ಈ ರೀತಿಯಲ್ಲಿದ್ದ ನನ್ನನ್ನು ನೋಡಿ ಪ್ರೀತಿಯಿಂದ ನಮಸ್ಕರಿಸಿ ಇಷ್ಟಾರ್ಥವನ್ನು ಕೊಡುವ ತನ್ನ ಮಗನನ್ನು ಸ್ತೋತ್ರ ಮಾಡಿದನು.

೨೬–೨೭. ಮಹಾಮಹಿಮನಾದ ದೇವತೆಗಳಿಗೆ ಸ್ವಾಮಿಯಾದ ಮೂರು ಕಣ್ಣುಗಳುಳ್ಳ ನಾಶರಹಿತನಾದ ನೀನು ನನ್ನ ಪುತ್ರನಾಗಿರುವೆ. ಸರ್ವವ್ಯಾಪಿಯಾಗಿ ನೀನು ಜಗತ್ತನ್ನು ದುಃಖವಿಲ್ಲದಂತೆ ರಕ್ಷಿಸುವುದರಿಂದ ಲೋಕಕ್ಕೆ ತಂದೆಯಾಗಿರುವೆ.

೨೮–೨೯. ಜಗತ್ತಿಗೆ ಕಾರಣನಾಗಿ ಬ್ರಹ್ಮಸ್ವರೂಪನಾದ ಅಯೋನಿಜನಾದ ನೀನು ಲೋಕಕ್ಕೆ ಗುರುವಾಗಿ ತಂದೆ ಎನಿಸಿ ನನಗೆ ಮಗನಾಗಿರುವೆ. ಎಲೈ ಪ್ರೀತಿಪಾತ್ರನಾದ ಮಹಾಮಹಿಮೆಯುಳ್ಳ ಪರಮೇಶ್ವರನೇ,

ವತ್ಸವತ್ಸ ಮಹಾಭಾಗ ಪಾಹಿ ಮಾಂ ಪರಮೇಶ್ವರ ।
ತ್ವಯಾಽಹಂ ನಂದಿತೋ ಯಸ್ಮಾ ನ್ನಂದೀ ನಾಮ್ನಾ ಸುರೇಶ್ವರ॥೨೯॥

ತಸ್ಮಾನ್ನಂದಯ ಮಾಂ ನಂದಿನ್ ನಮಾಮಿ ಜಗದೀಶ್ವರಂ ।
ಪ್ರಸೀದ ಪಿತರೌ ಮೇಽದ್ಯ ರುದ್ರಲೋಕಂ ಗತೌ ವಿಭೋ ॥೩೦॥

ಪಿತಾಮಹಶ್ಚ ಭೋ ನಂದಿನ್ ಅವತೀರ್ಣೇ ಮಹೇಶ್ವರೇ ।
ಮಮೈವ ಸಫಲಂ ಲೋಕೇ ಜನ್ಮ ವೈ ಜಗತಾಂ ಪ್ರಭೋ ॥೩೧॥

ಅವತೀರ್ಣೇ ಸುತೇ ನಂದಿನ್ ರಕ್ಷಾರ್ಥಂ ಮಹ್ಯಮೀಶ್ವರ ।
ತುಭ್ಯಂ ನಮಃ ಸುರೇಶಾನ ನಂದೀಶ್ವರ ನಮೋಽಸ್ತು ತೇ ॥೩೨॥

ಪುತ್ರ ಪಾಹಿ ಮಹಾಬಾಹೋ ದೇವದೇವ ಜಗದ್ಗುರೋ ।
ಪುತ್ರತ್ವಮೇವ ನಂದೀಶ ಮತ್ವಾ ಯತ್ಕೀರ್ತಿತಂ ಮಯಾ ॥೩೩॥

---

ನನ್ನನ್ನು ರಕ್ಷಿಸು. ನಿನ್ನಿಂದ ನಾನು ಆನಂದವನ್ನು ಹೊಂದಿದೆನಾದುದರಿಂದ ನೀನು ನಂದಿ ಎಂದು ಹೆಸರನ್ನು ಹೊಂದು.

೩೦-೩೧. ಎಲೈ ನಂದಿಯೇ, ನಂದೀ ಎಂಬ ಹೆಸರನ್ನು ಹೊಂದಿದುದರಿಂದ ಜಗತ್ತಿಗೆ ಒಡೆಯನಾದ ನೀನು ನನ್ನನ್ನೂ ಸಂತೋಷಪಡಿಸು. ನಿನಗೆ ನಮಸ್ಕಾರಮಾಡುವೆನು. ನೀನು ನನ್ನ ಪುತ್ರನಾದುದರಿಂದ ನನ್ನ ಪಿತೃಗಳೂ, ಪಿತಾಮಹ ಮೊದಲಾದವರೂ, ಈ ದಿನ ರುದ್ರಲೋಕಕ್ಕೆ ಹೋದರು. ಮಹೇಶ್ವರನಾದ ನೀನು, ಅವತಾರ ಮಾಡಲು ನನ್ನ ಜನ್ಮವೇ ಸಾರ್ಥಕವಾಯಿತು.

೩೨-೩೩. ನನ್ನ ರಕ್ಷಣೆಗಾಗಿ ನೀನು ಅವತಾರ ಮಾಡಿರುವೆ. ಎಲೈ ದೇವದೇವನಾದ ನಂದೀಶ್ವರನೇ, ನಿನಗೆ ನಮಸ್ಕಾರವು. ಮಹಾಶೂರನೂ, ಜಗದ್ಗುರುವೂ, ಆದ ಪುತ್ರನೇ, ನೀನು ನನ್ನನ್ನು ಕಾಪಾಡು. ಎಲೈ ನಂದೀಶ್ವರನೇ, ನೀನು ಪುತ್ರನೆಂಬುದಾಗಿ ತಿಳಿದು ನಾನು ಯಾವ ಮಾತನ್ನಾಡಿದ್ದರೂ, ಅದನ್ನು ಕ್ಷಮಿಸಬೇಕು. ಸುರಾಸುರರು ಅನೇಕ ಸ್ತುತಿಗಳಿಂದ ನಿನ್ನನ್ನು ಸ್ತೋತ್ರ ಮಾಡುವರು.

ತ್ವಯಾ ತ ತ್ಕ್ಷಮ್ಯತಾಂ ವತ್ಸ ಸ್ತವಸ್ತ್ವ ಸುರಾಸುರೈಃ ।
ಯಃ ಪಠೇಚ್ಛೃಣುಯಾದ್ವಾಽಪಿ ಮಮಪುತ್ರ ಪ್ರಭಾಷಿತಂ ॥೩೪॥

ಶ್ರಾವಯೇದ್ವಾ ದ್ವಿಜಾನ್ ಭಕ್ತ್ಯಾ ಮಯಾ ಸಾರ್ಧಂ ಸ ಮೋದತೇ ।
ಏವಂ ಸ್ತುತ್ವಾ ಸುತಂ ಬಾಲಂ ಪ್ರಣಮ್ಯ ಬಹುಮಾನತಃ ॥೩೫॥

ಮುನೀಶ್ವರಾಂಶ್ಚ ಸಂಪ್ರೇಕ್ಷ್ಯ ಶಿಲಾದೋವಾಚ ಸುವ್ರತಃ ।
ಪಶ್ಯಧ್ವಂ ಮುನಯಃ ಸರ್ವೇ ಮಹಾಭಾಗ್ಯಂ ಮಮಾವ್ಯಯಃ ॥೩೬॥

ನಂದೀ ಯಜ್ಞಾಂ ಗಣೇ ದೇವ ಶ್ಚಾವತೀರ್ಣೋ ಯತಃ ಪ್ರಭುಃ ।
ಮತ್ಸಮಃ ಕಃ ಪುಮಾನ್ ಲೋಕೇ ದೇವೋ ವಾ ದಾನವೋಽಪಿವಾ॥
ಏಷ ನಂದೀ ಯತೋ ಜಾತೋ ಯಜ್ಞಭೂಮೌ ಹಿತಾಯ ಮೇ ॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
ನಂದಿಕೇಶ್ವರೋತ್ಪತ್ತಿರ್ನಾಮ ದ್ವಿಚತ್ವಾರಿಂಶೋಽಧ್ಯಾಯಃ

---

೩೪. ಪುತ್ರನನ್ನು ಕುರಿತು ಹೇಳಿದ ನನ್ನ ಈ ಮಾತುಗಳನ್ನು ಯಾರು ಉಚ್ಚರಿಸುವರೋ, ಕೇಳುವರೋ ಅಥವಾ ಭಕ್ತಿಯಿಂದ ಬ್ರಾಹ್ಮಣರಿಗೆ ಹೇಳುವರೋ ಅವರು ನನ್ನೊಡನೆ ಸಂತೋಷವನ್ನು ಅನುಭವಿಸುವರು.

೩೫. ಈರೀತಿಯಲ್ಲಿ ಶಿಲಾದಮುನಿಯು ಬಾಲಕನಾದ ಪುತ್ರನನ್ನು ಗೌರವದಿಂದ ಹೊಗಳಿ ನಮಸ್ಕರಿಸಿ, ಮುನಿಶ್ರೇಷ್ಠರನ್ನು ನೋಡಿ ಹೇಳಿದನು.

೩೬–೩೮. ಮುನಿಗಳೇ, ಎಲ್ಲರೂ ನನ್ನ ಶಾಶ್ವತವಾದ ಪುಣ್ಯವನ್ನು ನೋಡಿರಿ. ದೇವದೇವನಾದ ಶಿವನು ನಂದೀ ಎಂಬ ಹೆಸರಿನಿಂದ ನನ್ನ ಯಜ್ಞಭೂಮಿಯಲ್ಲಿ ಅವತಾರಮಾಡಿದನು. ಈ ಲೋಕದಲ್ಲಿ ದೇವತೆಗಳಲ್ಲಾಗಲೀ, ದಾನವರಲ್ಲಾಗಲಿ ನನ್ನ ಸಮನಾದ ಪುರುಷನು ಯಾವನಿರುವನು? ಈ ನಂದಿಯು ನನ್ನ ಹಿತಕ್ಕಾಗಿ ಯಜ್ಞಭೂಮಿಯಲ್ಲಿ ಅವತಾರಮಾಡಿರುವನು, ಎಂದು ಹೇಳಿದನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನಂದಿಕೇಶ್ವರನ ಉತ್ಪತ್ತಿಯನ್ನು ವಿವರಿಸಿರುವ ನಲವತ್ತೆರಡನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ತ್ರಿಚತ್ವಾರಿಂಶೋಽಧ್ಯಾಯಃ

**ತ್ರಿಚತ್ವಾರಿಂಶಕೇಽ ಧ್ಯಾಯೇ ಮಾನುಷಂ ರೂಪಮಾಗತಃ ।**
**ನಂದೀ ರುದ್ರಾರಾಧನತಃ ಪ್ರಸಾದಂ ಮಹದಾಪ್ತವಾನ್ ॥**

**॥ ನಂದಿಕೇಶ್ವರ ಉವಾಚ ॥**

**ಮಯಾ ಸಹ ಪಿತಾ ಹೃಷ್ಟಃ ಪ್ರಣಮ್ಯ ಚ ಮಹೇಶ್ವರಂ ।**
**ಉಟಜಂ ಸ್ವಂ ಜಗಾಮಾಶು ನಿಧಿಂ ಲಬ್ಧ್ವೇವ ನಿರ್ಧನಃ ॥ ೧ ॥**

**ಯದಾಽಽಗತೋಽಹ ಮುಟಜಂ ಶಿಲಾದಸ್ಯ ಮಹಾಮುನೇಃ ।**
**ತದಾ ವೈ ದೈವಿಕಂ ರೂಪಂ ತ್ಯಕ್ತ್ವಾ ಮಾನುಷ್ಯ ಮಾಸ್ಥಿತಃ ॥ ೨ ॥**

**ನಷ್ಟಾ ಚೈವ ಸ್ಮೃತಿರ್ದಿವ್ಯಾ ಯೇನ ಕೇನಾಪಿ ಕಾರಣಾತ್ ।**
**ಮಾನುಷ್ಯ ಮಾಸ್ಥಿತಂ ದೃಷ್ಟ್ವಾ ಪಿತಾ ಮೇ ಲೋಕ ಪೂಜಿತಃ॥ ೩ ॥**

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನಲವತ್ತು ಮೂರನೆಯ ಅಧ್ಯಾಯವು.

(ನಲವತ್ತು ಮೂರನೆಯ ಅಧ್ಯಾಯದಲ್ಲಿ ನಂದಿಯು ಮನುಷ್ಯರೂಪವನ್ನು ಹೊಂದಿ ರುದ್ರಾರಾಧನೆಯನ್ನು ಮಾಡಿ ಶಿವನ ವಿಶೇಷವಾದ ಅನುಗ್ರಹವನ್ನು ಪಡೆದನೆಂದು ವರ್ಣಿಸಲಾಗುವುದು.)

೧. ನಂದಿಕೇಶ್ವರನು ಹೇಳಿದನು: ನನ್ನ ತಂದೆಯು ನನ್ನೊಡನೆ ಕೂಡಿ ಸಂತೋಷದಿಂದ ಮಹೇಶ್ವರನಿಗೆ ನಮಸ್ಕಾರವನ್ನು ಮಾಡಿ, ದರಿದ್ರನು ನಿಧಿಯನ್ನು ಪಡೆದಂತೆ ಸಂತೋಷದಿಂದ ನನ್ನೊಡನೆ ತನ್ನ ಪರ್ಣಶಾಲೆಗೆ ಹೋದನು.

೨. ನಾನು ಶಿಲಾದಮುನಿಯ ಗುಡಿಸಲಿಗೆ ಹೋಗುತ್ತಲೂ ಅನಿರ್ವಚನೀಯವಾದ ಯಾವುದೋ ಕಾರಣದಿಂದ ನನ್ನ ದೇವರೂಪವು ಹೋಗಿ ಮನುಷ್ಯರೂಪವು ಬಂದಿತು! ಆ ದಿವ್ಯಜ್ಞಾನವೂ ಹೊರಟು ಹೋಯಿತು!

ವಿಲಲಾಪಾತಿ ದುಃಖಾರ್ತಃ ಸ್ವಜನೈಶ್ಚ ಸಮಾವೃತಃ ।
ಜಾತ ಕರ್ಮಾದಿ ಕಾಂಶ್ಚೈವ ಚಕಾರ ಮಮ ಸರ್ವವಿತ್ ॥ ೪ ॥

ಶಾಲಂಕಾಯನ ಪುತ್ರೋ ನೈ ಶಿಲಾದಃ ಪುತ್ರವತ್ಸಲಃ ।
ಉಪದಿಷ್ಟಾ ಹಿ ತೇನೈವ ಯತ್ ಶಾಖಾ ಋಜುಷಸ್ತಥಾ ॥ ೫ ॥

ಸಾಮಶಾಖಾ ಸಹಸ್ರಂಚ ಸಾಂಗೋಪಾಂಗಂ ಮಹಾಮುನೇ ।
ಆಯುರ್ವೇದಂ ಧನುರ್ವೇದಂ ಗಾಂಧರ್ವಂ ಚಾ ಶ್ವಲಕ್ಷಣಂ ॥ ೬ ॥

ಹಸ್ತಿನಾಂ ಚರಿತಂ ಚೈವ ನರಾಣಾಂ ಚೈವ ಲಕ್ಷಣಂ ।
ಸಂಪೂರ್ಣೇ ಸಪ್ತಮೇ ವರ್ಷೇ ತತೋಽಥ ಮುನಿಸತ್ತಮೌ ॥ ೭ ॥

ಮಿತ್ರಾವರುಣ ನಾಮಾನೌ ತಪೋಯೋಗ ಬಲಾನ್ವಿತೌ ।
ತಸ್ಯಾ ಶ್ರಮಂ ಗತೌ ದಿವ್ಯಾದ್ರಷ್ಟುಂ ಮಾಂ ಚಾಜ್ಞಯಾ ವಿಭೋಃ॥

---

೩–೪. ಮನುಷ್ಯರೂಪವನ್ನು ಪಡೆದ ನನ್ನನ್ನು ಲೋಕಪೂಜಿತನೂ, ಶಾಲಂಕಾಯನ ಋಷಿಯ ಮಗನೂ, ಮಗನಲ್ಲಿ ಅತ್ಯಂತ ಪ್ರೀತಿಯುಳ್ಳವನೂ, ಆದ ನನ್ನ ತಂದೆಯಾದ ಶಿಲಾದಮುನಿಯು ಕಂಡು ಅತ್ಯಂತ ದುಃಖದಿಂದ ಕೂಡಿ ಸರ್ವಜ್ಞನಾದುದರಿಂದ ತನ್ನ ಬಂಧುಗಳೊಡನೆ ನನಗೆ ಜಾತಕರ್ಮಾದಿ ಬ್ರಾಹ್ಮಣ ಸಂಸ್ಕಾರಗಳೆಲ್ಲವನ್ನೂ ಮಾಡಿದನು.

೫–೬. ಆ ಶಿಲಾದಮುನಿಯೇ ನನಗೆ ಋಗ್ವೇದ, ಯಜುರ್ವೇದ, ಸಾಮವೇದಗಳನ್ನೂ, ವೇದಾಂಗಗಳನ್ನೂ, ಉಪಾಂಗಗಳನ್ನೂ, ಆಯುರ್ವೇದ, ಧನುರ್ವೇದ, ಗಾಂಧರ್ವವೇದಗಳನ್ನೂ, ಅಶ್ವಲಕ್ಷಣ, ಹಸ್ತಿಲಕ್ಷಣ, ಮನುಷ್ಯಲಕ್ಷಣ, ಈ ಶಾಸ್ತ್ರಗಳನ್ನೂ ಉಪದೇಶಮಾಡಿದನು.

೭–೮. ನನಗೆ ಏಳನೆಯ ವರ್ಷವು ತುಂಬುತ್ತಲೂ, ತಪಸ್ಸಿನ ಬಲದಿಂದಲೂ, ಯೋಗಾಭ್ಯಾಸದ ಬಲದಿಂದಲೂ, ಕೂಡಿದ ಮಿತ್ರಾವರುಣರೆಂಬ ಇಬ್ಬರು ದೇವಮುನಿಗಳು ಶಿವನ ಅಪ್ಪಣೆಯಿಂದ ನನ್ನನ್ನು ನೋಡಲು ಆ ಶಿಲಾದಮುನಿಯ ಆಶ್ರಮಕ್ಕೆ ಬಂದರು.

ಊಚತುಶ್ಚ ಮಹಾತ್ಮಾನೌ ಮಾಂ ನಿರೀಕ್ಷ್ಯ ಮುಹುರ್ಮುಹುಃ।
ತಾತ ನಂದ್ಯಯ ಮಲ್ಪಾಯುಃ ಸರ್ವ ಶಾಸ್ತ್ರಾರ್ಥ ಪಾರಗಃ ॥೯॥
ನ ದೃಷ್ಟ ಮೇವ ಮಾಶ್ಚರ್ಯ ಮಾಯುರ್ವರ್ಷಾದತಃ ಪರಂ।
ಇತ್ಯುಕ್ತವತಿ ವಿಪ್ರೇಂದ್ರಃ ಶಿಲಾದಃ ಪುತ್ರವತ್ಸಲಃ ॥೧೦॥
ಸಮಾಲಿಂಗ್ಯಚ ದುಃಖಾರ್ತೋ ರುರೋದಾತೀವ ವಿಸ್ವರಂ।
ಹಾಪುತ್ರ ಪುತ್ರ ಪುತ್ರೇತಿ ಪಪಾತ ಚ ಸಮಂತತಃ ॥೧೧॥
ಅಹೋ ಬಲಂ ದೈವ ವಿಧೇ ರ್ವಿಧಾತುಶ್ಚೇತಿ ದುಃಖಿತಃ।
ತಸ್ಯಚಾರ್ತಸ್ವರಂ ಶ್ರುತ್ವಾ ತದಾಶ್ರಮನಿವಾಸಿನಃ ॥೧೨॥
ನಿಪೇತು ರ್ವಿಹ್ವಲಾತ್ಯರ್ಥಂ ರಕ್ಷಾಶ್ಚಕ್ರುಶ್ಚ ಮಂಗಲಂ।
ತುಷ್ಟುವುಶ್ಚ ಮಹಾದೇವಂ ತ್ರಿಯಂಬಕ ಮುಮಾಪತಿಂ ॥೧೩॥

---

೯. ಮಹಾತ್ಮರಾದ ಆ ಮಿತ್ರಾವರುಣ ಮುನಿಗಳು ನನ್ನನ್ನು ಮತ್ತೆ ಮತ್ತೆ ನೋಡಿ, ಎಲೈ ಶಿಲಾದಮುನಿಯೇ, ಈ ನಂದಿಯು ಸಕಲ ಶಾಸ್ತ್ರಾರ್ಥಗಳನ್ನೂ ಸಂಪೂರ್ಣವಾಗಿ ತಿಳಿದಿರುವನು. ಇಂತಹ ಆಶ್ಚರ್ಯ ವನ್ನು ನಾವು ನೋಡಲಿಲ್ಲ. ಆದರೆ ಈ ಬಾಲಕನಾದ ನಂದಿಯು ಅಲ್ಪಾ ಯುಸ್ಸಿನವನು. ಇನ್ನು ಒಂದು ವರ್ಷಕ್ಕಿಂತ ಹೆಚ್ಚಾಗಿ ಇವನಿಗೆ ಆಯು ಸ್ಸಿಲ್ಲ! ಎಂದರು.

೧೦–೧೧. ಹೀಗೆಂದು ಹೇಳುತ್ತಲು, ಪುತ್ರನಲ್ಲಿ ಪ್ರೀತಿಯುಳ್ಳ ಬ್ರಾಹ್ಮಣಶ್ರೇಷ್ಠನಾದ ಶಿಲಾದಮುನಿಯು, ಮಗನನ್ನು ಆಲಿಂಗಿಸಿ ಕೊಂಡುದುಃಖದಿಂದ ವಿಕಾರವಾದ ಧ್ವನಿಯಿಂದ ವಿಶೇಷವಾಗಿ ಅಳುತ್ತಾ ನೆಲದಮೇಲೆ ಬಿದ್ದನು.

೧೨–೧೩. ಅದೃಷ್ಟಫಲ ರೂಪವಾದ ನಿಯಮದ ಬಲವೇ ಬಲವಾ ದುದೆಂದು ದುಃಖಿಸುತ್ತಿರುವ ಆ ಶಿಲಾದಮುನಿಯ ಆರ್ತನಾದವನ್ನು ಕೇಳಿ ಆ ಆಶ್ರಮದಲ್ಲಿದ್ದ ಮುನಿಗಳೆಲ್ಲರೂ ಅತ್ಯಂತ ದುಃಖಪೀಡಿತರಾಗಿ ಮಂಗ ಲಕರವಾದ ರಕ್ಷೆಗಳನ್ನು ಮಾಡಿ, ಮುಕ್ಕಣ್ಣನೂ, ಉಮಾಪತಿಯೂ ಆದ ಮಹಾದೇವನನ್ನು ಸ್ತೋತ್ರಮಾಡಿದರು.

ಹುತ್ವಾ ತ್ರಿಯಂಬಕೇನೈವ ಮಧುನೈವ ಚ ಸಂಪ್ಲುತಾಂ ।
ದೂರ್ವಾ ಮಯುತಸಂಖ್ಯಾತಾಂ ಸರ್ವದ್ರವ್ಯ ಸಮನ್ವಿತಾಂ ॥೧೪॥

ಪಿತಾ ವಿಗತಸಂಜ್ಞಶ್ಚ ತಥಾ ಚೈವ ಪಿತಾಮಹಃ ।
ವಿಚೇಷ್ಟಶ್ಚ ಲಲಾಪಾಸೌ ಮೃತವನ್ನಿ ಪಪಾತಚ ॥೧೫॥

ಮೃತ್ಯೋರ್ಭೀತೋಽಹಮಚಿರಾತ್ ಶಿರಸಾ ಚಾಭಿವಂದ್ಯತಂ ।
ಮೃತವತ್ಪತಿತಂ ಸಾಕ್ಷಾತ್ಪಿತರಂ ಚ ಪಿತಾಮಹಂ ॥೧೬॥

ಪ್ರದಕ್ಷಿಣೀ ಕೃತ್ಯ ಚ ತಂ ರುದ್ರಜಾಪ್ಯ ರತೋಽಭವಂ ।
ಹೃತ್ಪುಂಡರೀ ಕೇ ಸುಷಿರೇ ಧ್ಯಾತ್ವಾ ದೇವಂ ತ್ರಿಯಂಬಕಂ ॥೧೭॥

ತ್ರ್ಯಕ್ಷಂ ದಶಭುಜಂ ಶಾಂತಂ ಪಂಚವಕ್ತ್ರಂ ಸದಾಶಿವಂ ।
ಸರಿತ ಶ್ಚಾಂತರೇ ಪುಣ್ಯೇ ಸ್ಥಿತಂ ಮಾಂ ಪರಮೇಶ್ವರಃ ॥೧೮॥

---

೧೪. ತ್ರಿಯಂಬಕ ಮಂತ್ರದಿಂದಲೇ ಜೇನಿನಲ್ಲಿ ನೆನಸಿದ ಗರಿಕೆಯನ್ನು ಹತ್ತುಸಾವಿರ ಹೋಮವನ್ನು ವಿಧ್ಯುಕ್ತವಾದ ಸಕಲ ವಸ್ತುಗಳೊಡನೆ ನೆರವೇರಿಸಿ ಸ್ತೋತ್ರ ಮಾಡಿದರು.

೧೫. ನನ್ನ ತಂದೆಯೂ, ತಾತನೂ ದುಃಖಪಡುತ್ತಾ ಮೂರ್ಛಿತರಾಗಿ ಸತ್ತವರಂತೆ ಚಲಿಸದೇ ನೆಲದಮೇಲೆ ಬಿದ್ದಿದ್ದರು.

೧೬. ನಾನೂ ಕೂಡ ಮೃತ್ಯುವಿಗೆ ಹೆದರಿ ಸತ್ತಂತೆ ಬಿದ್ದಿದ್ದ ತಂದೆಗೂ ತಾತನಿಗೂ ನಮಸ್ಕಾರಮಾಡಿ, ಪ್ರದಕ್ಷಿಣೆಮಾಡಿ ಬೇಗನೆ ರುದ್ರಮಂತ್ರವನ್ನು ಜಪಿಸಲು ಪ್ರಾರಂಭಮಾಡಿದೆನು.

೧೭. ಹೃದಯಕಮಲ ಮಧ್ಯದಲ್ಲಿರುವ ದಹರಾಕಾಶದಲ್ಲಿ ಮೂರು ಕಣ್ಣುಗಳೂ, ಹತ್ತು ತೋಳುಗಳೂ, ಐದು ಮುಖಗಳೂ ಉಳ್ಳ ಶಾಂತನಾದ ತ್ರಿಯಂಬಕನೆಂಬ ಶಿವನನ್ನು ತ್ರಿಯಂಬಕ ಮಂತ್ರಜಪಮಾಡುತ್ತ ಧ್ಯಾನ ಮಾಡಿದೆನು.

೧೮. ಪುಣ್ಯಕರವಾದ ನದಿಯ ಮಧ್ಯದಲ್ಲಿ ನಿಂತು ಧ್ಯಾನಮಾಡುತ್ತಿದ್ದ ನನ್ನನ್ನು ಕುರಿತು ಸಂತೋಷಗೊಂಡ ಚಂದ್ರಶೇಖರನೂ, ಉಮಾದೇವಿಯ ಸಹಿತನೂ ಆದ ಪರಮೇಶ್ವರನು ಹೇಳಿದನು.

ತುಷ್ಟೋಽಬ್ರವೀನ್ಮಹಾದೇವಃ ಸೋಮಃ ಸೋಮಾರ್ಧ ಭೂಷಣಃ ।
ವತ್ಸನಂದಿನ್ಮಹಾಬಾಹೋ ಮೃತ್ಯೋರ್ಭೀತಿಃ ಕುತಸ್ತವ ॥೧೯॥
ಮಯೈವ ಪ್ರೇಷಿತೌ ವಿಪ್ರೌ ಮತ್ಸಮಸ್ತ್ವಂ ನ ಸಂಶಯಃ ।
ವತ್ಸೈನ ತ್ತ್ವ ದೇಹಂ ಚ ಲೌಕಿಕಂ ಪರಮಾರ್ಥತಃ ॥೨೦॥
ನಾಸ್ತ್ಯೇವ ದೈವಿಕಂ ದೃಷ್ಟಂ ಶಿಲಾದೇನ ಪುರಾ ತವ ।
ದೇವೈಶ್ಚ ಮುನಿಭಿಃ ಸಿದ್ಧೈಃ ಗಂಧರ್ವೈರ್ದಾನವೋತ್ತಮೈಃ ॥೨೧॥
ಪೂಜಿತಂ ಯತ್ಪುರಾ ವತ್ಸ ದೈವಿಕಂ ನಂದಿಕೇಶ್ವರ ।
ಸಂಸಾರಸ್ಯ ಸ್ವಭಾವೋಽಯಂ ಸುಖಂ ದುಃಖಂ ಪುನಃ ಪುನಃ ॥೨೨॥
ನೃಣಾಂ ಯೋನಿಪರಿತ್ಯಾಗಃ ಸರ್ವಥೈವ ವಿವೇಕಿನಃ ।
ಏವ ಮುಕ್ತ್ವಾತು ಮಾಂ ಸಾಕ್ಷಾತ್ಸರ್ವದೇವ ಮಹೇಶ್ವರಃ ॥೨೩॥
ಕರಾಭ್ಯಾಂ ಸುಶುಭಾಭ್ಯಾಂ ಚ ಉಭಾಭ್ಯಾಂ ಪರಮೇಶ್ವರಃ ।
ಪಸ್ಪರ್ಶ ಭಗವಾನ್ರುದ್ರಃ ಪರಮಾರ್ತಿ ಹರೋ ಹರಃ ॥೨೪॥

---

೧೯–೨೦. ಎಲೈ ಪ್ರೀತಿಪಾತ್ರನಾದ ಬಾಲಕನಾದ ನಂದಿಯೇ ಮಹಾಶೂರನಾದ ನಿನಗೆ ಮರಣಭೀತಿ ಯೆಲ್ಲಿಯದು? ಆ ಮಿತ್ರಾವರುಣ ರೆಂಬ ಬ್ರಾಹ್ಮಣರನ್ನು ನಾನೇ ಕಳುಹಿಸಿದೆನು. ನೀನು ನನ್ನ ಸಮಾನನು. ಇದರಲ್ಲಿ ಸಂದೇಹವಿಲ್ಲ. ಎಲೈ ಬಾಲಕನೇ, ಈ ನಿನ್ನ ಶರೀರವು ನಿಜ ವಾಗಿಯೂ ಈ ಮನುಷ್ಯಲೋಕಕ್ಕೆ ಸಂಬಂಧಪಟ್ಟುದು.

೨೧–೨೨. ಹಿಂದೆ ಶಿಲಾದನು ನೋಡಿದ ದೇವಶರೀರವು ಈಗ ನಿನಗೆ, ಇಲ್ಲವಷ್ಟೇ? ನೀನು ಅವತಾರ ಮಾಡಿದಾಗ ಇದ್ದ ದೇವಶರೀರವನ್ನು ದೇವತೆಗಳೂ, ಮುನಿಗಳೂ, ಸಿದ್ಧರೂ, ಗಂಧರ್ವರೂ, ದಾನವೋತ್ತಮ ರೂ ನೋಡಿ ಪೂಜಿಸಿದರು. ಎಲೈ ನಂದಿಕೇಶ್ವರನೇ, ಸಂಸಾರದ ಸ್ವಭಾ ವವೇ ಇದು. ಸುಖದುಃಖಗಳು ಮತ್ತೆ ಮತ್ತೆ ಮರಳಿಬರುತ್ತಿರುವುವು.

೨೩–೨೪. ವಿವೇಕಿಗಳಾದ ಮನುಷ್ಯರಿಗೆ ಸ್ತ್ರೀಸಂಗಪರಿತ್ಯಾಗವು ಸರ್ವಥಾ ಶ್ರೇಷ್ಠವಾದುದು. ಎಂದು ಹೇಳಿ, ದುಃಖವನ್ನು ನಾಶಮಾಡುವ ದೇವದೇವನಾದ ಮಹಾಮಹಿಮನಾದ ರುದ್ರಾವತಾರ ಮಾಡಿದ ಮಹೇ ಶ್ವರನು ಮಂಗಳಕರವಾದ ತನ್ನೆರಡು ಕೈಗಳಿಂದ ನನ್ನನ್ನು ಮುಟ್ಟಿದನು.

ಉವಾಚ ಚ ಮಹಾದೇವ ಸ್ತುಷ್ಟಾತ್ಮಾ ವೃಷಭಧ್ವಜಃ ।
ನಿರೀಕ್ಷ್ಯಗಣಪಾಂ ಶ್ಚೈವ ದೇವೀಂ ಹಿಮವತಃ ಸುತಾಂ ॥೨೫॥

ಸಮಾಲೋಕ್ಯ ಚತುಷ್ಟಾತ್ಮಾ ಮಹಾದೇವಃ ಸುರೇಶ್ವರಃ ।
ಅಜರೋ ಜರಯಾ ತ್ಯಕ್ತೋ ನಿತ್ಯಂ ದುಃಖ ವಿವರ್ಜಿತಃ ॥೨೬॥

ಅಕ್ಷಯಶ್ಚಾವ್ಯಯ ಶ್ಚೈವ ಸಪಿತಾ ಸಸುಹೃಜ್ಜನಃ ।
ಮಮೇಷ್ಟೋ ಗಣಪ ಶ್ಚೈವ ಮದ್ವೀರ್ಯೋ ಮತ್ಪರಾಕ್ರಮಃ ॥೨೭॥

ಇಷ್ಟೋ ಮಮ ಸದಾ ಚೈವ ಮಮ ಪಾರ್ಶ್ವಗತಃ ಸದಾ ।
ಮದ್ಬಲಶ್ಚೈವ ಭವಿತಾ ಮಹಾಯೋಗ ಬಲಾನ್ವಿತಃ ॥೨೮॥

ಏವ ಮುಕ್ತ್ವಾಚ ಮಾಂ ದೇವೋ ಭಗವಾನ್ ಸಗಣಸ್ತದಾ ।
ಕುಶೇಶಯ ಮಯೀಂ ಮಾಲಾಂ ಸಮುನ್ಮುಚ್ಯಾತ್ಮನ ಸ್ತದಾ ॥೨೯॥

---

೨೫-೨೮. ಆಮೇಲೆ ವೃಷಭಧ್ವಜನಾದ ಆ ಮಹಾದೇವನು ಸಂತೋಷದಿಂದ ಕೂಡಿ ಗಣಾಧಿಪತಿಗಳನ್ನೂ, ಹಿಮವಂತನ ಪುತ್ರಿಯಾದ ಪಾರ್ವತೀ ದೇವಿಯನ್ನೂ ನೋಡಿ ಹೇಳಿದನು. ಈ ಬಾಲಕನು ನನಗೆ ಇಷ್ಟನಾದವನು. ನನ್ನಷ್ಟೇ ತೇಜಸ್ಸು ಮತ್ತು ಪರಾಕ್ರಮ ಉಳ್ಳವನು. ಗಣಾಧಿಪತಿಯಾಗಿ ಯಾವಾಗಲೂ ನನ್ನ ಪಾರ್ಶ್ವದಲ್ಲಿರುವವನು. ಇವನು ಮುಪ್ಪು ಮರಣ ಇಲ್ಲದವನಾಗಿ, ದುಃಖವಿಲ್ಲದವನಾಗಿ, ನಾಶರಹಿತನಾಗಿ ಮಹಾಯೋಗ ಬಲದಿಂದ ಕೂಡಿದವನಾಗಿ, ನನ್ನಷ್ಟೇ ಶಕ್ತಿಯುಳ್ಳವನಾಗಿ ಆಗುವನು. ಇವನು ತನ್ನ ತಂದೆಯೊಡನೆಯೂ, ತನ್ನ ಸ್ನೇಹಿತರೊಡನೆಯೂ, ಯಾವಾಗಲೂ ನನ್ನ ಸಮೀಪದಲ್ಲಿರುವನು. ಎಂದು ಹೇಳಿದನು.

೨೯. ಹೀಗೆಂದು ನನಗೆ ಹೇಳಿ, ಗಣಗಳಿಂದ ಕೂಡಿದವನಾಗಿ ಮಹಾತ್ಮನಾದ ಆ ದೇವನು ತನ್ನ ಕುತ್ತಿಗೆಯಲ್ಲಿದ್ದ ಬಿಳೀಕಮಲದ ಮಾಲೆಯುನ್ನು ತೆಗೆದು ನನ್ನ ಕುತ್ತಿಗೆಗೆ ಧರಿಸಿದನು.

ಆಬಬಂಧ ಮಹಾತೇಜಾ ಮಮ ದೇವೋ ವೃಷಧ್ವಜಃ ।
ತಯಾಽಹಂ ಮಾಲಯಾ ಜಾತಃ ಶುಭಯಾ ಕಂಠಸಕ್ತಯಾ ॥೩೦॥

ತ್ರ್ಯಕ್ಷೋ ದಶ ಭುಜಶ್ಚೈವ ದ್ವಿತೀಯ ಇವ ಶಂಕರಃ ।
ತತ ಏವ ಸಮಾದಾಯ ಹಸ್ತೇನ ಪರಮೇಶ್ವರಃ ॥೩೧॥

ಉವಾಚ ಬ್ರೂಹಿ ಕಿಂ ತೇಽದ್ಯ ದದಾಮಿ ವರಮುತ್ತಮಂ ।
ತತೋ ಜಟಾಶ್ರಿತಂ ವಾರಿ ಗೃಹೀತ್ವಾ ಚಾತಿನಿರ್ಮಲಂ ॥೩೨॥

ಉಕ್ತ್ವಾ ನದೀ ಭವಸ್ವೇತಿ ಉತ್ಸಸರ್ಜ ವೃಷಧ್ವಜಃ ।
ತತಃ ಸಾ ದಿವ್ಯತೋಯಾ ಚ ಪೂರ್ಣಾ ಸಿತ ಜಲಾ ಶುಭಾ ॥೩೩॥

ಪದ್ಮೋತ್ಪಲ ವನೋಪೇತಾ ಪ್ರಾವರ್ತತ ಮಹಾನದೀ ।
ತಾಮಾಹ ಚ ಮಹಾದೇವೋ ನದೀಂ ಪರಮ ಶೋಭನಾಂ ॥೩೪॥

---

೩೦. ನನ್ನ ಕುತ್ತಿಗೆಯಲ್ಲಿ ಕಟ್ಟಿದ ಆ ಶುಭಕರವಾದಮಾಲೆಯಿಂದ ನಾನು ಆ ಕ್ಷಣದಲ್ಲಿಯೇ ಮೂರು ಕಣ್ಣುಗಳೂ, ಹತ್ತು ತೋಳುಗಳೂ, ಉಳ್ಳವನಾಗಿ ಎರಡನೆಯ ಶಿವನಂತೆ ಆದೆನು.

೩೧. ಆ ಮೇಲೆ ಪರಮೇಶ್ವರನು ನನ್ನನ್ನು ಕೈಯ್ಯಲ್ಲಿ ಹಿಡಿದು ಕೊಂಡು ನಿನಗೆ ಇನ್ನೂ ಯಾವ ಉತ್ತಮವಾದ ವರವನ್ನು ಕೊಡಲಿ? ಎಂದು ಕೇಳಿದನು.

೩೨. ಆಮೇಲೆ ವೃಷಭಧ್ವಜನಾದ ಶಿವನು ತನ್ನ ಜಟೆಯಲ್ಲಿರುವ ನಿರ್ಮಲವಾದ ನೀರನ್ನು ತೆಗೆದುಕೊಂಡು " ನದಿಯಾಗು " ಎಂದು ಹೇಳಿ ಮೇಲಕ್ಕೆ ಎರಚಿದನು.

೩೩-೩೪. ಬಳಿಕ ಆ ನದಿಯು ಶ್ರೇಷ್ಠವಾದ ನೀರಿನಿಂದ ತುಂಬಿ, ಕಮಲದ ಹೂಗಳಿಂದಲೂ, ನೈದಿಲೆಯ ಹೂಗಳಿಂದಲೂ, ಕೂಡಿ ಮಹಾ ನದಿಯಾಗಿ ಹರಿಯಿತು. ಆ ಶುಭವಾದ ನದಿಯು ಜಟೋದಕದಿಂದ ಹುಟ್ಟಿದುದರಿಂದ ಮಹಾದೇವನು ಜಟೋದಕಾ ಎಂದು ಹೆಸರಿಟ್ಟನು. ಅದು ಪುಣ್ಯಕರವಾದ ಶ್ರೇಷ್ಠ ನದಿಯಾಯಿತು. ನಿನ್ನಲ್ಲಿ ಯಾವ ಮನು

ಯಸ್ಮಾಜ್ಜಟೋದಕಾದೇವ ಪ್ರವೃತ್ತಾ ತ್ವಂ ಮಹಾನದೀ ।
ತಸ್ಮಾಜ್ಜಟೋದಕಾ ಪುಣ್ಯಾ ಭವಿಷ್ಯಸಿ ಸರಿದ್ವರಾ ॥೩೫॥
ತ್ವಯಿ ಸ್ನಾತ್ವಾ ನರಃ ಕಶ್ಚಿತ್ ಸರ್ವಪಾಪೈಃ ಪ್ರಮುಚ್ಯತೇ ।
ತತೋ ದೇವ್ಯಾ ಮಹಾದೇವಃ ಶಿಲಾದತನಯಂ ಪ್ರಭುಃ ॥೩೬॥
ಪುತ್ರಸ್ತೇಽಯ ಮಿತಿ ಪ್ರೋಚ್ಯ ಪಾದಯೋಃ ಸನ್ನ್ಯಪಾತಯತ್ ।
ಸಾ ಮಾಮಾಘ್ರಾಯ ಶಿರಸಿ ಪಾಣಿಭ್ಯಾಂ ಪರಿಮಾರ್ಜತಿ ॥೩೭॥
ಪುತ್ರ ಪ್ರೇಮ್ಣಾಽಭ್ಯಷಿಂಚಚ್ಚ ಸ್ರೋತೋಭಿಃ ಸ್ತನಜೈ ಸ್ತ್ರಿಭಿಃ ।
ಪಯಸಾ ಶಂಖ ಗೌರೇಣ ದೇವದೇವಂ ನಿರೀಕ್ಷ್ಯ ಸಾ ॥೩೮॥
ತಾನಿ ಸ್ರೋತಾಂಸಿ ತ್ರೀಣ್ಯಸ್ಯಾಃ ಸ್ರೋತಸ್ವಿನ್ಯೋಽಭವಂ ಸ್ತದಾ ।
ನದೀಂ ತ್ರಿಸ್ರೋತಸಂ ದೇವೋ ಭಗವಾನವದದ್ಭವಃ ॥೩೯॥

---

ಜನು ಸ್ನಾನ ಮಾಡುವನೋ, ಅವನು ಸರ್ವಪಾಪಗಳನ್ನೂ ಕಳೆದುಕೊಳ್ಳು ವನು, ಎಂದು ಪರಮೇಶ್ವರನು ಅವನಿಗೆ ವರವನ್ನು ಕೊಟ್ಟನು.

೩೬. ಆಮೇಲೆ, ಮಹಾದೇವನು, ಇವನು ನಿನ್ನ ಮಗನು. ಎಂಬು ದಾಗಿ ಹೇಳಿ, ಶಿಲಾದಮುನಿಯ ಪುತ್ರನನ್ನು ಪಾರ್ವತೀದೇವಿಯ ಪಾದದ ಮೇಲೆ ಬೀಳಿಸಿದನು. ಎಂದರೆ ನಮಸ್ಕರಿಸುವಂತೆ ಮಾಡಿದನು.

೩೭–೩೮. ಆ ದೇವಿಯು ನನ್ನ ತಲೆಯನ್ನು ಮೂಸಿ ನೋಡಿ ಮಗ ನೆಂಬ ಪ್ರೇಮದಿಂದ ತನ್ನ ಕೈಗಳಿಂದ ನನ್ನ ಮೈಯ್ಯನ್ನು ಸವರುತ್ತಾ ಮಹಾದೇವನನ್ನು ನೋಡಿ ತನ್ನ ಸ್ತನದಲ್ಲಿ ಹುಟ್ಟಿದ ಶಂಖದಂತೆ ಬೆಳ್ಳಗಿ ರುವ ಹಾಲಿನ ಮೂರು ಪ್ರವಾಹಗಳಿಂದ ನನ್ನನ್ನು ಅಭಿಷೇಕ ಮಾಡಿದಳು.

೩೯–೪೦. ಆ ದೇವಿಯ ಹಾಲಿನ ಮೂರು ಪ್ರವಾಹಗಳು ಮೂರು ನದಿಗಳಾದುವು. ಶಿವನು ಆ ನದಿಗಳಿಗೆ ತಿಸ್ರೋತಾನದಿಗಳೆಂದು ಹೆಸರಿ ಟ್ಟನು. ತಿಸ್ರೋತಾ ನದಿಯನ್ನು ನೋಡಿ ಸಂತೋಷದಿಂದ ವೃಷಭನು ಗಟ್ಟಿಯಾಗಿ ಧ್ವನಿಮಾಡಿದನು. ಆ ಧ್ವನಿಯಿಂದ ಮತ್ತೊಂದು ನದಿಯು

ತ್ರಿಸ್ರೋತಸಂ ನದೀಂ ದೃಷ್ಟ್ವಾ ವೃಷಃ ಪರಮ ಹರ್ಷಿತಃ ।
ನನಾದ ನಾದಾತ್ತಸ್ಮಾಚ್ಚ ಸರಿದನ್ಯಾ ತತೋಽ ಭವತ್ ॥೪೦॥

ವೃಷಧ್ವನಿರಿತಿ ಖ್ಯಾತಾ ದೇವದೇವೇನ ಸಾ ನದೀ ।
ಜಾಂಬೂನದ ಮಯಂ ಚಿತ್ರಂ ಸರ್ವರತ್ನಮಯಂ ಶುಭಂ ॥೪೧॥

ಸ್ವಂ ದೇವ ಶ್ಚಾ ದ್ಭುತಂ ದಿವ್ಯಂ ನಿರ್ಮಿತಂ ವಿಶ್ವಕರ್ಮಣಾ ।
ಮುಕುಟಂ ಚಾಬಬಂಧೇಶೋ ಮಮ ಮೂರ್ಧ್ನಿ ವೃಷಧ್ವಜಃ ॥

ಕುಂಡಲೇ ಚ ಶುಭೇ ದಿವ್ಯೇ ವಜ್ರವೈಡೂರ್ಯ ಭೂಷಿತೇ ।
ಆಬಬಂಧ ಮಹಾದೇವಃ ಸ್ವಯಮೇವ ಮಹೇಶ್ವರಃ ॥೪೩॥

ಮಾಂ ತಥಾಽಭ್ಯರ್ಚಿತಂ ವ್ಯೋಮ್ನಿ ದೃಷ್ಟ್ವಾ ಮೇಘೈಃ ಪ್ರಭಾಕರಃ ।
ಮೇಘಾಂಭಸಾ ಚಾಭ್ಯಷಿಂಚ ಚ್ಛಿಲಾದನ ಮಘೋ ಮುನೇ ॥೪೪॥

ತಸ್ಯಾಭಿಷಿಕ್ತಸ್ಯ ತದಾ ಪ್ರವೃತ್ತಾ ಸ್ರೋತಸಾ ಭೃಶಂ ।
ಯಸ್ಮಾತ್ಸುವರ್ಣಾ ನ್ನಿಸ್ಸೃತ್ಯ ನದ್ಯೇಷಾ ಸಂಪ್ರವರ್ತತೇ ॥೪೫॥

---

ಉಂಟಾಯಿತು. ಅದಕ್ಕೆ ಪ್ರಸಿದ್ಧವಾದ ವೃಷಧ್ವನಿಯೆಂದು ಹೆಸರುಂಟಾಯಿತು. ಈ ಹೆಸರನ್ನು ದೇವದೇವನಾದ ಪರಮೇಶ್ವರನೇ ಪ್ರಕಟಿಸಿದನು.

೪೧–೪೩. ಆಮೇಲೆ ದೇವದೇವನಾದ ಮಹೇಶ್ವರನು ವಿಶ್ವಕರ್ಮನು ಚಿನ್ನದಿಂದ ಮಾಡಿದ, ಸಮಸ್ತ ರತ್ನಖಚಿತವಾದ, ವಿಚಿತ್ರವಾದ, ದೇವಯೋಗ್ಯವೂ, ಆಶ್ಚರ್ಯಕರವೂ ಆದ ತನ್ನ ಕಿರೀಟವನ್ನು ನನ್ನ ತಲೆಯ ಮೇಲಿಟ್ಟು, ವಜ್ರ ವೈಡೂರ್ಯ ರತ್ನಗಳನ್ನು ಕೆತ್ತಿದ ಶುಭಕರವಾದ ಕರ್ಣಾಭರಣವನ್ನು ತಾನೇ ನನ್ನ ಕಿವಿಗಳಿಗೆ ಅಲಂಕರಿಸಿದನು.

೪೪–೪೫. ಹಾಗೆ ಪೂಜಿಸಲ್ಪಟ್ಟ ಶಿಲಾದಪುತ್ರನಾದ ನನ್ನನ್ನು ನೋಡಿ ಸೂರ್ಯನು ಮೇಘೋದಕದಿಂದ ಅಭಿಷೇಕಮಾಡಿದನು. ಹಾಗೆ ಅಭಿಷೇಕಮಾಡಿದ ನೀರು ನನ್ನ ಕಿರೀಟದಲ್ಲಿರುವ ಚಿನ್ನದ ಸಂಬಂಧದಿಂದ ಕೂಡಿ ಒಂದು ನದಿಯಾಗಿ ಹರಿಯಿತು. ಆ ನದಿಗೆ ಸ್ವರ್ಣೋದಕಾ ನದೀಯೆಂದು ದೇವದೇವನಾದ ಮುಕ್ಕಣ್ಣನೇ ಹೆಸರಿಟ್ಟನು.

ಸ್ವರ್ಣೋದಕೇತಿ ತಾ ಮಾಹ ದೇವದೇವ ಸ್ತ್ರಿಯಂಬಕಃ ।
ಜಾಂಬೂನದ ಮಯಾದ್ಯಸ್ಮಾ ದ್ದ್ವಿತೀಯ ಮಕುಟಾಚ್ಛುಭಾ ॥೪೬॥
ಪ್ರಾವರ್ತತ ನದೀ ಪುಣ್ಯಾ ಊಚುರ್ಜಂಬೂನದೀತಿ ತಾಂ ।
ಏತತ್ಪಂಚನದಂ ನಾಮ ಜಪ್ಯೇಶ್ವರ ಸಮೀಪಗಂ ॥೪೭॥
ಯಃ ಪಂಚನದ ಮಾಸಾದ್ಯ ಸ್ನಾತ್ವಾ ಜಪ್ಯೇಶ್ವರೇಶ್ವರಂ ।
ಪೂಜಯೇಚ್ಛಿವಸಾಯುಜ್ಯಂ ಪ್ರಯಾತ್ಯೇವ ನ ಸಂಶಯಃ ॥೪೮॥
ಅಥ ದೇವೋ ಮಹಾದೇವಃ ಸರ್ವಭೂತ ಪತಿರ್ಭವಃ ।
ದೇವೀ ಮುವಾಚ ಶರ್ವಾಣೀ ಮುಮಾಂ ಗಿರಿಸುತಾ ಮಜಾಂ॥೪೯॥
ದೇವಿ ನಂದೀಶ್ವರಂ ದೇವ ಮಭಿಷಿಂಚಾಮಿ ಭೂತಪಂ ।
ಗಣೇಂದ್ರಂ ವ್ಯಾಹರಿಷ್ಯಾಮಿ ಕಿಂವಾ ತ್ವಂ ಮನ್ಯಸೇಽವ್ಯಯೇ ॥೫೦॥
ತಸ್ಯ ತದ್ವಚನಂ ಶ್ರುತ್ವಾ ಭವಾನೀ ಹರ್ಷಿತಾನನಾ ।
ಸ್ಮಯಂತೀ ವರದಂ ಪ್ರಾಹ ಭವಂ ಭೂತ ಪತಿಂ ಪತಿಂ ॥೫೧॥

---

೪೬–೪೭. ಜಾಂಬೂನದ ಮಯವಾದ ಕಿರೀಟದಿಂದ ಮತ್ತೊಂದು ನದಿಯು ಹರಿಯಿತು. ಆ ಪುಣ್ಯಕರವಾದ ನದಿಯನ್ನು ಜಂಬೂನದೀ ಎಂದು ಕರೆದರು. ತ್ರಿಸ್ರೋತಾ, ಸ್ವರ್ಣೋದಕಾ, ಜಂಬೂ ಎಂಬ ಐದು ನದಿಗಳು ಜಪ್ಯೇಶ್ವರಕ್ಷೇತ್ರದ ಸಮೀಪದಲ್ಲಿರುವುವು.

೪೮. ಯಾವ ಮನುಜನಾದರೂ ಈ ಪಂಚನದ ಕ್ಷೇತ್ರಕ್ಕೆ ಹೋಗಿ ಆ ನದಿಗಳಲ್ಲಿ ಸ್ನಾನಗಳನ್ನು ಮಾಡಿ, ಜಪ್ಯೇಶ್ವರನೆಂಬ ಶಿವಲಿಂಗವನ್ನು ಪೂಜಿಸಿದರೆ ಶಿವಸಾಯುಜ್ಯವನ್ನು ಹೊಂದುವನು. ಸಂದೇಹವಿಲ್ಲ.

೪೯–೫೦. ಆಮೇಲೆ ಸರ್ವಭೂತಗಳಿಗೂ ಒಡೆಯನಾದ ಶಿವನು ಉಮಾದೇವಿಯನ್ನು ಕುರಿತು, ಎಲೌ ದೇವಿಯೇ, ನಂದೀಶ್ವರನನ್ನು ಭೂತ ಗಣಗಳಿಗೆ ಅಧಿಪತಿಯಾಗಿ ಪಟ್ಟಾಭಿಷೇಕ ಮಾಡುವೆನು. ಅವನನ್ನು ಗಣೇಂದ್ರನೆಂದು ಕರೆಯುವೆನು. ನಿನ್ನ ಅಭಿಪ್ರಾಯವೇನು? ಎಂದು ಕೇಳಿದನು.

೫೧. ಆ ಮಹಾದೇವನ ಮಾತನ್ನು ಕೇಳಿ ಭವಾನಿಯು ಸಂತೋಷ ದಿಂದ ಕೂಡಿದ ಮುಖವುಳ್ಳವಳಾಗಿ ನಗುತ್ತಾ ವರವನ್ನು ಕೊಡುವ ಭೂತಪತಿಯಾದ ತನ್ನ ಪತಿಯನ್ನು ಕುರಿತು ಹೇಳಿದಳು.

ಸರ್ವ ಲೋಕಾಧಿಪತ್ಯಂ ಚ ಗಣೇಶತ್ವಂ ತಥೈವಚ ।
ದಾತು ಮರ್ಹಸಿ ದೇವೇಶ ಶೈಲಾದಿಸ್ತನಯೋ ಮಮ ॥೫೨॥

ತತಃ ಸ ಭಗವಾನ್ ಶರ್ವಃ ಸರ್ವಲೋಕೇಶ್ವರೇಶ್ವರಃ ।
ಸಸ್ಮಾರ ಗಣಪಾನ್ ದಿವ್ಯಾನ್ ದೇವದೇವೋ ವೃಷಧ್ವಜಃ ॥೫೩॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ನಂದಿಕೇಶ್ವರ ಪ್ರಾದುರ್ಭಾವ ನಂದಿಕೇಶ್ವರಾಭಿಷೇಕ ಮಂತ್ರೋ ನಾಮ ತ್ರಿಚತ್ವಾರಿಂಶೋಧ್ಯಾಯಃ

---

೫೨. ದೇವತೆಗಳೆಲ್ಲರಿಗೂ ಸ್ವಾಮಿಯಾದ ಶಿವನೇ, ಶಿಲಾದಪುತ್ರನಾದ ನಂದಿಯು ನನ್ನ ಪುತ್ರನಾಗಿರುವನು. ಅವನಿಗೆ ಸಮಸ್ತ ಲೋಕಾಧಿಪತ್ಯವನ್ನೂ, ಗಣೇಶತ್ವವನ್ನೂ ಕೊಡಬಹುದು, ಎಂದು ದೇವಿಯು ಹೇಳಿದಳು.

೫೩. ಆಮೇಲೆ ಸಮಸ್ತ ಲೋಕೇಶ್ವರನೂ, ಮಹಾಮಹಿಮನೂ ಆದ ಶಿವನು ಗಣದೇವತೆಗಳನ್ನು ಸ್ಮರಿಸಿದನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನಂದಿಕೇಶ್ವರನ ಪ್ರಾದುರ್ಭಾವ, ಅಭಿಷೇಕ ಸಮಾಲೋಚನೆಗಳನ್ನು ತಿಳಿಸುವ ನಲವತ್ತುಮೂರನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಚತುಶ್ಚತ್ವಾರಿಂಶೋಽಧ್ಯಾಯಃ

ಚತುಶ್ಚತ್ವಾರಿಂಶಕೇ ತು ನಂದಿನಃ ಸರ್ವಸಂಭೃತಃ ।
ಗಾಣಪತ್ಯೇಽಭಿಷೇಕೋ ವೈ ವಿವಾಹಶ್ಚ ನಿರೂಪ್ಯತೇ ॥

॥ ಶೈಲಾದಿರುವಾಚ ॥

ಸ್ಮರಣಾದೇವ ರುದ್ರಸ್ಯ ಸಂಪ್ರಾಪ್ತಾಶ್ಚ ಗಣೇಶ್ವರಾಃ ।
ಸರ್ವೇ ಸಹಸ್ರ ಹಸ್ತಾಶ್ಚ ಸಹಸ್ರಾಯುಧ ಪಾಣಯಃ ॥ ೧ ॥

ತ್ರಿಣೇತ್ರಾಶ್ಚ ಮಹಾತ್ಮಾನಸ್ತ್ರಿದಶೈರಪಿ ವಂದಿತಾಃ ।
ಕೋಟಿಕಾಲಾಗ್ನಿ ಸಂಕಾಶಾ ಜಟಾಮುಕುಟ ಧಾರಿಣಃ ॥ ೨ ॥

ದಂಷ್ಟ್ರಾ ಕರಾಳವದನಾ ನಿತ್ಯಾ ಬುದ್ಧಾಶ್ಚ ನಿರ್ಮಲಾಃ ।
ಕೋಟಿ ಕೋಟಿ ಗಣೈಸ್ತುಲ್ಯೈ ರಾತ್ಮನಾ ಚ ಗಣೇಶ್ವರಾಃ ।
ಅಸಂಖ್ಯಾತಾ ಮಹಾತ್ಮಾನಸ್ತತ್ರಾಜಗ್ಮುರ್ಮುದಾ ಯುತಾಃ॥ ೩ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನಲವತ್ತುನಾಲ್ಕನೆಯ ಅಧ್ಯಾಯವು.

(ನಲವತ್ತುನಾಲ್ಕನೆಯ ಅಧ್ಯಾಯದಲ್ಲಿ ಸಮಸ್ತ ವಸ್ತು ಸಮೃದ್ಧಿಯಿಂದ ಕೂಡಿದ ನಂದಿಯು ಗಾಣಪತ್ಯಪಟ್ಟಾಭಿಷೇಕವೂ, ವಿವಾಹವೂ, ಇವನ್ನು ವರ್ಣಿಸಲಾಗುವುದು.)

೧-೩. ನಂದಿಯು ಹೇಳಿದನು: ಶಿವನು ಸ್ಮರಿಸುತ್ತಲೂ ಗಣೇಶ್ವರರೆಲ್ಲರೂ ಬಂದರು. ಆ ಗಣಗಳಲ್ಲಿದ್ದವರೆಲ್ಲರೂ, ಸಾವಿರ ಕಣ್ಣುಗಳೂ, ಸಾವಿರ ಕೈಗಳೂ, ಉಳ್ಳವರು. ಸಾವಿರ ಆಯುಧಗಳನ್ನು ಹಿಡಿದಿದ್ದರು. ಎಲ್ಲರಿಗೂ ಮೂರು ಕಣ್ಣುಗಳಿದ್ದವು. ಜಟೆಯನ್ನೇ ಕಿರೀಟವಾಗಿ ಧರಿಸಿದ್ದರು. ಪ್ರಳಯಾಗ್ನಿಯ ಕೋಟಿಪಾಲು ಪ್ರಕಾಶವುಳ್ಳವರು. ಪ್ರತಿಯೊಬ್ಬ ಗಣೇಶ್ವರನೂ ತನಗೆ ಸಮಾನರಾದ ಕೋಟಿಸಂಖ್ಯೆಯ ಗಣಗಳಿಂದ ಕೂಡಿದವನು. ಎಲ್ಲರೂ ಮಹಾಮಹಿಮರಾಗಿ ದೇವತೆಗಳಿಗೆ ಪೂಜ್ಯರಾಗಿದ್ದವರು. ಇಂತಹ ಲೆಕ್ಕವಿಲ್ಲದಷ್ಟು ಗಣಗಳು ಸಂತೋಷದಿಂದ ಅಲ್ಲಿಗೆ ಬಂದರು.

ಗಾಯಂತಶ್ಚ ದ್ರವಂತಶ್ಚ ನೃತ್ಯಂತಶ್ಚ ಮಹಾಬಲಾಃ ।
ಮುಖಾಡಂಬರವಾದ್ಯಾನಿ ವಾದಯಂತಸ್ತಥೈವ ಚ ॥ ೪ ॥

ರಥೈರ್ನಾಗೈರ್ಹಯೈಶ್ಚೈವ ಸಿಂಹ ಮರ್ಕಟವಾಹನಾಃ ।
ವಿಮಾನೇಷು ತಥಾಽಽರೂಢಾ ಹೇಮಚಿತ್ರೇಷು ವೈ ಗಣಾಃ ॥ ೫ ॥

ಭೇರೀ ಮೃದಂಗಕಾದ್ಯೈಶ್ಚ ಪಣವಾನಕ ಗೋಮುಖೈಃ ।
ವಾದಿತ್ರೈರ್ವಿವಿಧೈಶ್ಚಾನ್ಯೈಃ ಪಟಹೈರೇಕ ಪುಷ್ಕರೈಃ ॥ ೬ ॥

ಭೇರೀಮುರಜ ಸಂನಾದೈ ರಾಡಂಬರಕ ಡಿಂಡಿಮೈಃ ।
ಮರ್ದಲೈ ರ್ವೇಣು ವೀಣಾಭಿಃ ವಿವಿಧೈಸ್ತಾಲ ನಿಸ್ವನೈಃ ॥ ೭ ॥

ದರ್ದುರೈಸ್ತಲ ಘಾತೈಶ್ಚ ಕಚ್ಛಪೈಃ ಪಣವೈರಪಿ ।
ವಾದ್ಯಮಾನೈರ್ಮಹಾಯೋಗಾ ಅಜಗ್ಮು ರ್ದೇವಸಂಸದಂ ॥ ೮ ॥

ತೇ ಗಣೇಶಾ ಮಹಾಸತ್ವಾಃ ಸರ್ವದೇವೇಶ್ವರೇಶ್ವರಾಃ ।
ಪ್ರಣಮ್ಯ ದೇವೀಂ ದೇವಂ ಚ ಇದಂ ವಚನ ಮಬ್ರುವನ್ ॥ ೯ ॥

---

೪–೫. ಕೆಲವರು ಗಾನಮಾಡುತ್ತಿದ್ದರು. ಕೆಲವರು ಓಡುತ್ತಿದ್ದರು. ಕೆಲವರು ಕುಣಿಯುತ್ತಿದ್ದರು. ಎಲ್ಲರೂ ಮಹಾಬಲವುಳ್ಳವರು. ಬಾಯಿಯಿಂದಲೇ ಅನೇಕ ವಾದ್ಯಗಳನ್ನು ಬಾರಿಸುತ್ತಿದ್ದರು. ರಥದ ಮೇಲೆಯೂ, ಆನೆಗಳ ಮೇಲೆಯೂ, ಕುದುರೆಗಳ ಮೇಲೆಯೂ, ಸಿಂಹ, ಕಪಿ, ವಿಮಾನ, ಇವುಗಳ ಮೇಲೆಯೂ ಕುಳಿತಿದ್ದರು.

೬–೮. ನಗಾರಿ, ಮೃದಂಗ, ಪಣವವೆಂಬ ತಮಟೆ, ಆನಕ, ಗೋಮುಖ, ಬಗೆಬಗೆಯ ವಾದ್ಯಗಳು, ತಮಟೆ, ಏಕಪುಷ್ಕರ, ಕೊಂಬು, ಕಹಳೆ, ಕೊಳಲು, ವೀಣೆ, ತಾಳಗಳು, ಕೈಚಪ್ಪಾಳೆ, ಬುಡಬುಡಿಕೆ, ಮುಂತಾದ ಅನೇಕ ವಾದ್ಯಗಳನ್ನು ಬಾರಿಸುತ್ತಾ ಎಲ್ಲರೂ ಆ ದೇವ ಸಭೆಗೆ ಬಂದರು.

೯. ಮಹಾಪರಾಕ್ರಮಿಗಳೂ, ಸಕಲ ದೇವತೆಗಳಿಗೂ ಒಡೆಯರೂ, ಆದ ಆ ಗಣೇಶ್ವರರು ದೇವನಿಗೂ, ದೇವಿಗೂ, ನಮಸ್ಕಾರವನ್ನು ಮಾಡಿ ಹೇಳಿದರು.

ಭಗವನ್ ದೇವದೇವೇಶ ತ್ರಿಯಂಬಕ ವೃಷಧ್ವಜ ।
ಕಿಮರ್ಥಂ ಚ ಸ್ಮೃತಾ ದೇವ ಆಜ್ಞಾಪಯ ಮಹಾದ್ಯುತೇ ॥೧೦॥
ಕಿಂ ಸಾಗರಾನ್ ಶೋಷಯಾಮೋ ಯಮಂ ವಾ ಸಹ ಕಿಂಕರೈಃ ।
ಹನ್ಮೋ ಮೃತ್ಯುಸುತಾಂ ಮೃತ್ಯುಂ ಪಶುವದ್ಧನ್ಮ ಪದ್ಮಜಂ ॥೧೧॥
ಬದ್ಧ್ವೇಂದ್ರಂ ಸಹ ದೇವೈಶ್ಚ ಸಹ ವಿಷ್ಣುಂಚ ವಾಯುನಾ ।
ಆನಯಾಮಃ ಸುಸಂಕ್ರುದ್ಧಾಃ ದೈತ್ಯಾನ್ವಾ ಸಹ ದಾನವೈಃ ॥೧೨॥
ಕಸ್ಯಾದ್ಯ ವ್ಯಸನಂ ಘೋರಂ ಕರಿಷ್ಯಾಮಸ್ತವಾಜ್ಞಯಾ ।
ಕಸ್ಯ ವಾಽದ್ಯೋತ್ಸವೋ ದೇವ ಸರ್ವಕಾಮ ಸಮೃದ್ಧಯೇ ॥೧೩॥
ತಾಂಸ್ತಥಾವಾದಿನಃ ಸರ್ವಾನ್ ಗಣೇಶಾನ್ ಸರ್ವಸಮ್ಮತಾನ್ ।
ಉವಾಚ ದೇವಃ ಸಂಪೂಜ್ಯ ಕೋಟಿ ಕೋಟಿ ಶತಾನ್ ಪ್ರಭುಃ॥೧೪॥

---

೧೦–೧೧. ಮಹಾಮಹಿಮನೂ, ಮುಕ್ಕಣ್ಣನೂ, ವೃಷಧ್ವಜನೂ ಆದ ದೇವದೇವನೇ, ನಮ್ಮನ್ನೇಕೆ ಸ್ಮರಿಸಿದೆ? ಮಹಾತೇಜಸ್ವಿಯಾದ ನೀನು ಅಪ್ಪಣೆ ಮಾಡು. ನಾವು ಸಾಗರಗಳನ್ನು ಒಣಗಿಸೋಣವೇ? ಯಮನನ್ನು ಅವನ ಸೇವಕರೊಡನೆ ಕೊಲ್ಲೋಣವೇ? ಮೃತ್ಯುದೇವತೆಯ ಮಗಳಾದ ಜರೆಯನ್ನು ಕೊಲ್ಲೋಣವೇ? ಅಥವಾ ಕಮಲದಲ್ಲಿ ಹುಟ್ಟಿದ ಬ್ರಹ್ಮನನ್ನು ಪಶುವಿನಂತೆ ಕೊಲ್ಲೋಣವೇ?

೧೨–೧೩. ದೇವೇಂದ್ರನನ್ನು ದೇವತೆಗಳೊಡನೆಯೂ, ವಿಷ್ಣು ಮತ್ತು ವಾಯುಗಳೊಡನೆಯೂ, ಕಟ್ಟಿಹಾಕಿ ತರೋಣವೇ? ಕೋಪದಿಂದ ದೈತ್ಯ ದಾನವರನ್ನು ಹಿಡಿದು ತರೋಣವೇ? ಈ ದಿನ ನಿನ್ನ ಅಪ್ಪಣೆಯಿಂದ ಯಾರಿಗೆ ಭಯಂಕರವಾದ ದುಃಖವನ್ನುಂಟುಮಾಡೋಣ? ಅಥವಾ ಸಮಸ್ತ ಇಷ್ಟಾರ್ಥಗಳ ಪೂರ್ಣತೆಗಾಗಿ ಯಾರಿಗೆ ಈ ದಿವಸ ಉತ್ಸವವನ್ನು ನೆರವೇರಿಸಬೇಕು? ಅಪ್ಪಣೆಮಾಡು. ಎಂದರು.

೧೪. ಹಾಗೆ ಹೇಳುತ್ತಿರುವ ಸಕಲ ಗುಣ ಸಂಪನ್ನರಾದ ಅನೇಕ ಸಂಖ್ಯೆಯ ಗಣೇಶರನ್ನು ಮರ್ಯಾದೆಮಾಡಿ ಅವರನ್ನು ಕುರಿತು ಮಹಾದೇವನು ಹೇಳಿದನು.

ಶೃಣುಧ್ವಂ ಯತ್ಕೃತೇ ಯೂಯ ಮಿಹಾಹೂತಾ ಜಗದ್ಧಿತಾಃ ।
ಶ್ರುತ್ವಾ ಚ ಪ್ರಯತಾತ್ಮಾನಃ ಕುರುಧ್ವಂ ತದ ಶಂಕಿತಾಃ ॥೧೫॥

ನಂದೀಶ್ವರೋಽಯಂ ಪುತ್ರೋ ಸಃ ಸರ್ವೇಷಾ ಮೀಶ್ವರೇಶ್ವರಃ ।
ವಿಪ್ರೋಽಯಂ ನಾಯಕಶ್ಚೈವ ಸೇವಾನೀರ್ವಃ ಸಮೃದ್ಧಿಮಾನ್ ॥

ತಮಿಮಂ ಮಮ ಸಂದೇಶಾ ದ್ಯೂಯಂ ಸರ್ವೇಽಪಿ ಸಂಮತಾಃ ।
ಸೇನಾನ್ಯ ಮಭಿಷಿಂಚಧ್ವಂ ಮಹಾಯೋಗ ಪತಿಂ ಪತಿಂ ॥೧೭॥

ಏವಮುಕ್ತಾ ಭಗವತಾ ಗಣಪಾಃ ಸರ್ವ ಏವ ತೇ ।
ಏವ ಮಸ್ತ್ವಿತಿ ಸಂಮಂತ್ರ್ಯ ಸಂಭಾರಾನಾ ಹರಂಸ್ತತಃ ॥೧೮॥

ತಸ್ಯ ಸರ್ವಾಶ್ರಯಂ ದಿವ್ಯಂ ಜಾಂಬೂನದ ಮಯಂ ಶುಭಂ ।
ಆಸನಂ ಮೇರು ಸಂಕಾಶಂ ಮನೋಹರ ಮುಪಾಹರನ್ ॥೧೯॥

ನೈಕಸ್ತಂಭ ಮಯಂ ಚಾಪಿ ಚಾಮೀಕರ ವರಪ್ರಭಂ ।
ಮುಕ್ತಾದಾಮಾವಲಂಬಂ ಚ ಮಣಿರತ್ನಾವಭಾಸಿತಂ ॥೨೦॥

---

೧೫–೧೬–೧೭. ಲೋಕಕ್ಕೆ ಹಿತವನ್ನುಂಟುಮಾಡುವ ನೀವು ಯಾವ ಕಾರ್ಯಕ್ಕೆ ಇಲ್ಲಿಗೆ ಕರೆಯಲ್ಪಟ್ಟಿರಿ ಎಂಬುದನ್ನು ಹೇಳುವೆನು ಕೇಳಿರಿ. ಅದನ್ನು ಕೇಳಿದಮೇಲೆ ಪ್ರಯತ್ನ ಪೂರ್ವಕವಾಗಿ ಸಂದೇಹವಿಲ್ಲದೇ ಅದನ್ನು ನಡೆಸಿರಿ. ಈ ನಂದೀಶ್ವರನು ನಮ್ಮ ಪುತ್ರನು. ಬ್ರಾಹ್ಮಣನು. ಸಮಸ್ತರಿಗೂ ಸ್ವಾಮಿಯು. ನಿಮಗೆಲ್ಲರಿಗೂ ಸೇನಾನಾಯಕನು. ಮಹಾ ಯೋಗಿಯಾದ ಇವನನ್ನು ನನ್ನ ಅಪ್ಪಣೆಯಿಂದ ನೀವೆಲ್ಲರೂ ಸೇರಿ ಸೇನಾಪತಿಯನ್ನಾಗಿ ಪಟ್ಟಾಭಿಷೇಕ ಮಾಡಿರಿ.

೧೮. ಭಗವಂತನಾದ ಶಿವನು ಹೀಗೆಂದು ಹೇಳಿದ ಮೇಲೆ ಆ ಸಮಸ್ತ ಗಣಪತಿಗಳೂ, ಹಾಗೆಯೇ ಆಗಲೆಂದು ಹೇಳಿ ಎಲ್ಲರೂ ಆಲೋಚಿಸಿ ಪಟ್ಟಾಭಿಷೇಕಕ್ಕೆ ಬೇಕಾದ ಪದಾರ್ಥಗಳನ್ನು ತಂದರು.

೧೯. ಆ ಪಟ್ಟಾಭಿಷೇಕ ಕಾರ್ಯಕ್ಕಾಗಿ ಚಿನ್ನದಿಂದ ಮಾಡಿದ ಶ್ರೇಷ್ಠವೂ, ಮಂಗಳಕರವೂ ಆದ, ಮೇರುಪರ್ವತದಂತೆ ಎತ್ತರವಾದ ಸುಂದರವಾದ ಪೀಠವನ್ನು ತಂದರು.

೨೦–೨೧. ಚಿನ್ನದ ಕಾಂತಿಯಿಂದ ಕೂಡಿದ ಅನೇಕ ಕಂಬಗಳುಳ್ಳ ಮಂಟಪವನ್ನು ಮಾಡಿ ಮುತ್ತಿನ ಸರವನ್ನು ತೂಗುಕಟ್ಟಿ, ರತ್ನದ ಅಲಂ

ಸ್ತಂಭೈಶ್ಚ ವೈಡೂರ್ಯ ಮಯೈಃ ಕಿಂಕಿಣೀಜಾಲ ಸಂವೃತಂ ।
ಚಾರುರತ್ನಕ ಸಂಯುಕ್ತಂ ಮಂಡಪಂ ವಿಶ್ವತೋಮುಖಂ ॥೨೦॥

ಕೃತ್ವಾ ವಿನ್ಯಸ್ಯ ತನ್ಮಧ್ಯೇ ತದಾಸನ ವರಂ ಶುಭಂ ।
ತಸ್ಯಾಗ್ರತಃ ಪಾದಪೀಠಂ ನೀಲವಜ್ರಾವಭಾಸಿತಂ ॥೨೨॥

ಚಕ್ರುಃ ಪಾದ ಪ್ರತಿಷ್ಠಾರ್ಥಂ ಕಲಶೌ ಚಾಸ್ಯ ಪಾರ್ಶ್ವಗೌ ।
ಸಂಪೂರ್ಣೌ ಪರಮಾಂಭೋಭಿ ರರವಿಂದಾ ವೃತಾನನೌ ॥೨೩॥

ಕಲಶಾನಾಂ ಸಹಸ್ರಂ ತು ಸೌವರ್ಣಂ ರಾಜತಂ ತಥಾ ।
ತಾಮ್ರಜಂ ಮೃನ್ಮಯಂ ಚೈವ ಸರ್ವತೀರ್ಥಾಂಬು ಪೂರಿತಂ ॥೨೪॥

ವಾಸೋಯುಗಂ ತಥಾದಿವ್ಯಂ ಗಂಧಂ ದಿವ್ಯಂ ತಥೈವಚ ।
ಕೇಯೂರೇ ಕುಂಡಲೇ ಚೈವ ಮಕುಟಂ ಹಾರಮೇವಚ ॥೨೫॥

ಛತ್ರಂ ಶತಶಲಾಕಂಚ ಬಾಲವ್ಯಜನ ಮೇವಚ ।
ದತ್ತಂ ಮಹಾತ್ಮನಾ ತೇನ ಬ್ರಹ್ಮಣಾ ಪರಮೇಷ್ಠಿನಾ ॥೨೬॥

---

ಕಾರಗಳನ್ನು ಮಾಡಿ, ವೈಡೂರ್ಯವೆಂಬ ರತ್ನದ ಕಂಬಗಳಿಂದ ಅಲಂಕರಿಸಿ ಗಂಟೆಗಳನ್ನು ಸುತ್ತಲೂ ಕಟ್ಟಿ, ನಾಲ್ಕು ಕಡೆಗಳಲ್ಲಿಯೂ ಆ ಮಂಟಪವನ್ನು ಅಲಂಕರಿಸಿ ಆ ಮಂಟಪದ ನಡುವೆ ಶುಭಕರವಾದ ಆ ಪೀಠವನ್ನಿರಿಸಿದರು.

೨೨–೨೩–೨೪. ಆ ಪೀಠದ ಮುಂಭಾಗದಲ್ಲಿ ಕಾಲನ್ನಿಟ್ಟುಕೊಳ್ಳುವುದಕ್ಕಾಗಿ ನೀಲ ಮುತ್ತು ವಜ್ರಗಳಿಂದ ಅಲಂಕರಿಸಿದ ಪಾದ ಪೀಠವನ್ನಿಟ್ಟು ಅದರ ಎರಡು ಕಡೆಗಳಲ್ಲಿ ಶ್ರೇಷ್ಠವಾದ ನೀರಿನಿಂದ ತುಂಬಿ ಕಮಲದ ಹೂವ್ವಿನಿಂದ ಅಲಂಕರಿಸಿದ ಎರಡು ಕಲಶಗಳನ್ನಿಟ್ಟರು. ಇದಲ್ಲದೇ ಚಿನ್ನ, ಬೆಳ್ಳಿ, ತಾಮ್ರ, ಮಣ್ಣು, ಇವುಗಳಿಂದ ಮಾಡಿದ ಅನೇಕ ಸಾವಿರ ಕಲಶಗಳಲ್ಲಿ ಸಕಲ ಪುಣ್ಯ ತೀರ್ಥಗಳ ನೀರನ್ನೂ ತುಂಬಿ ಇಟ್ಟಿದ್ದರು.

೨೫–೨೬. ದಿವ್ಯವಾದ ಎರಡು ವಸ್ತ್ರಗಳು, ಗಂಧ, ಭುಜಕೀರ್ತಿ, ಕುಂಡಲಗಳು, ಕಿರೀಟ, ಹಾರ, ನೂರು ಸಲಿಗೆಗಳುಳ್ಳ ಛತ್ರಿ, ಚೌರಿಯಿಂದ ಮಾಡಿದ ಬೀಸಣಿಗೆ ಇವುಗಳನ್ನು ಸೃಷ್ಟಿಕರ್ತನಾದ ಮಹಾತ್ಮನಾದ ಬ್ರಹ್ಮನು ಕೊಟ್ಟನು. ಅವುಗಳನ್ನಲ್ಲಿ ಸಿದ್ಧಪಡಿಸಿದ್ದರು.

ಶಂಖ ಹಾರಾಂಗ ಗೌರೇಣ ಪೃಷ್ಠೇನಾಪಿ ವಿರಾಜಿತಂ ।
ವ್ಯಜನಂ ಚಂದ್ರ ಶುಭ್ರಂಚ ಹೇಮದಂಡಂ ಸುಚಾಮರಂ ॥೨೭॥

ಐರಾವತಃ ಸುಪ್ರತೀಕೋ ಗಜಾವೇತೌ ಸುಪೂಜಿತೌ ।
ಮುಕುಟಂ ಕಾಂಚನಂ ಚೈವ ನಿರ್ಮಿತಂ ವಿಶ್ವಕರ್ಮಣಾ ॥೨೮॥

ಕುಂಡಲೇ ಚಾಮಲೇ ದಿವ್ಯೇ ವಜ್ರಂ ಚೈವ ವರಾಯುಧಂ ।
ಜಾಂಬೂನದ ಮಯಂ ಸೂತ್ರಂ ಕೇಯೂರದ್ವಯ ಮೇವಚ ॥

ಸಂಭಾರಾಣಿ ತಥಾಽನ್ಯಾನಿ ವಿವಿಧಾನಿ ಬಹೂನ್ಯಪಿ ।
ಸಮಂತಾನ್ನಿನ್ಯುರವ್ಯಗ್ರಾ ಗಣಪಾ ದೇವ ಸಂಮತಾಃ ॥೩೦॥

ತತೋ ದೇವಾಶ್ಚ ಸೇಂದ್ರಾಶ್ಚ ನಾರಾಯಣ ಮುಖಾಸ್ತಥಾ ।
ಮುನಯೋ ಭಗವಾನ್ ಬ್ರಹ್ಮಾ ನವ ಬ್ರಹ್ಮಾಣ ಏವಚ ॥೩೧॥

ದೇವೈಶ್ಚ ಲೋಕಾಃ ಸರ್ವೇ ತೇ ತತೋ ಜಗ್ಮು ರ್ಮುದಾ ಯುತಾಃ।
ತೇಷ್ವಾಗತೇಷು ಸರ್ವೇಷು ಭಗವಾನ್ ಪರಮೇಶ್ವರಃ ॥೩೨॥

---

೨೭-೨೮-೨೯-೩೦. ಶುಭ್ರವಾಗಿರುವ ಶಂಖ, ಚಂದ್ರನಂತೆ ಚೆನ್ನಾಗಿರುವ ಬೀಸಣಿಗೆ, ಚಿನ್ನದ ಹಿಡಿಯುಳ್ಳ ಚಾಮರಗಳು, ಐರಾವತ, ಸುಪ್ರತೀಕವೆಂಬ ಎರಡು ಆನೆಗಳು, ವಿಶ್ವಕರ್ಮನು ಮಾಡಿದ ಚಿನ್ನದ ಕಿರೀಟ, ದಿವ್ಯವಾದ ವಜ್ರದ ಕರ್ಣಾಭರಣಗಳು, ವಜ್ರಾಯುಧ, ಚಿನ್ನದ ದಾರ, ಭುಜಕೀರ್ತಿಯೆಂಬ ಅಭರಣಗಳು, ಇನ್ನೂ ಅನೇಕ ಬಗೆಯ ಉಪಯುಕ್ತ ಪದಾರ್ಥಗಳನ್ನು ಗಣದೇವತೆಗಳು ಎಲ್ಲ ಕಡೆಗಳಿಂದಲೂ ತೆಗೆದುಕೊಂಡು ಬಂದರು.

೩೧. ಆ ಮೇಲೆ ದೇವತೆಗಳೊಡನೆ ಕೂಡಿದ ದೇವೇಂದ್ರನೂ, ನಾರಾಯಣನೂ, ಮುನಿಗಳೂ, ಮಹಾ ಮಹಿಮನಾದ ಬ್ರಹ್ಮನೂ, ಒಂಬತ್ತುಜನ ಬ್ರಹ್ಮಮಾನಸ ಪುತ್ರರೂ, ದೇವಲೋಕದಲ್ಲಿರುವ ಸಕಲರೂ ಸಂತೋಷದಿಂದ ಅಲ್ಲಿಗೆ ಬಂದರು.

೩೨. ದೇವತೆಗಳೊಡನೆ ಸಕಲ ಲೋಕವಾಸಿಗಳೂ ಸಂತೋಷದಿಂದ ಅಲ್ಲಿಗೆ ಬರುತ್ತಲು ಪರಮೇಶ್ವರನು ಪಟ್ಟಾಭಿಷೇಕದ ಸಕಲ ಶಾಸ್ತ್ರೋಕ್ತವಾದ ಕಾರ್ಯಗಳನ್ನೂ ಮಾಡಬೇಕೆಂದು ಬ್ರಹ್ಮನಿಗೆ ಅಪ್ಪಣೆಯನ್ನು ಮಾಡಿದನು.

ಸರ್ವಕಾರ್ಯ ವಿಧಿಂ ಕರ್ತುರ್ಮಾದಿದೇಶ ಪಿತಾಮಹಂ ।
ಪಿತಾಮಹೋಽಪಿ ಭಗವಾನ್ ನಿಯೋಗಾ ದೇವ ತಸ್ಯ ತು ॥೩೩॥

ಚಕಾರ ಸರ್ವಂ ಭಗವಾನಭಿಷೇಕಂ ಸಮಾಹಿತಃ ।
ಅರ್ಚಯಿತ್ವಾ ತತೋ ಬ್ರಹ್ಮಾ ಸ್ವಯಮೇವಾಭ್ಯಷೇಚಯತ್ ॥

ತತೋ ವಿಷ್ಣು ಸ್ತತಃ ಶಕ್ರೋ ಲೋಕ ಪಾಲಾಸ್ತಥೈವಚ ।
ಅಭ್ಯಷಿಂಚಂತ ವಿಧಿವ ದ್ಗಣೇಂದ್ರಂ ಶಿವಶಾಸನಾತ್ ॥೩೫॥

ಋಷಯಸ್ತುಷ್ಟುವು ಶ್ಚೈವ ಪಿತಾಮಹ ಪುರೋಗಮಾಃ ।
ಸ್ತುತವತ್ಸು ತತಸ್ತೇಷು ವಿಷ್ಣುಃ ಸರ್ವಜಗತ್ಪತಿಃ ॥೩೬॥

ಶಿರಸ್ಯಂಜಲಿಮಾದಾಯ ತುಷ್ಟಾವ ಚ ಸಮಾಹಿತಃ ।
ಪ್ರಾಂಜಲಿಃ ಪ್ರಣತೋ ಭೂತ್ವಾ ಜಯಶಬ್ದಂ ಚಕಾರಚ ॥೩೭॥

ತತೋ ಗಣಾಧಿಪಾಃ ಸರ್ವೇ ತತೋ ದೇವಾಸ್ತತೋಽಸುರಾಃ ।
ಏವಂಸ್ತುತಶ್ಚಾಭಿಷಿಕ್ತೋ ದೇವೈಃ ಸಬ್ರಹ್ಮಕೈಸ್ತದಾ ॥೩೮॥

---

೩೩–೩೪. ಬ್ರಹ್ಮನೂ ಕೂಡ ಆ ಮಹಾದೇವನ ಅಪ್ಪಣೆಯಿಂದ ಏಕಾಗ್ರತೆಯಿಂದ ಕೂಡಿ ಸಮಸ್ತಕಾರ್ಯಗಳನ್ನೂ ನಡೆಸಿ ತಾನೇ ನಂದಿಯನ್ನು ಪೂಜಿಸಿ ಪಟ್ಟಾಭಿಷೇಕವನ್ನು ಮಾಡಿದನು.

೩೫. ಆ ಮೇಲೆ ವಿಷ್ಣುವೂ, ಬಳಿಕ ದೇವೇಂದ್ರನೂ, ತರುವಾಯ ಲೋಕಪಾಲಕರೂ, ಶಿವನ ಅಪ್ಪಣೆಯಂತೆ ಶಾಸ್ತ್ರವಿಧಿಗನುಸಾರವಾಗಿ ನನ್ನನ್ನು ಗಣೇಂದ್ರನನ್ನಾಗಿ ಪಟ್ಟಾಭಿಷೇಕ ಮಾಡಿದರು.

೩೬–೩೭. ಬ್ರಹ್ಮನೇ ಮೊದಲಾದ ಸಮಸ್ತಋಷಿಗಳೂ ಸ್ತೋತ್ರ ಮಾಡಿದರು. ಅವರೆಲ್ಲರೂ ಸ್ತೋತ್ರಮಾಡುತ್ತಿದ್ದಾಗ ಸಮಸ್ತಲೋಕಗಳಿಗೂ ಒಡೆಯನಾದ ವಿಷ್ಣುವು ತಲೆಯಮೇಲೆ ಕೈಮುಗಿದು ಕೈಜೋಡಿಸಿ ಇಟ್ಟುಕೊಂಡು ಏಕಾಗ್ರತೆಯಿಂದ ಸ್ತೋತ್ರವನ್ನೂ ನಮಸ್ಕಾರವನ್ನೂ ಜಯಶಬ್ದವನ್ನೂ ಮಾಡಿದನು.

೩೮–೩೯. ಆಮೇಲೆ ಸಮಸ್ತ ಗಣಾಧಿಪತಿಗಳೂ, ದೇವತೆಗಳೂ, ಅಸುರರೂ, ಕ್ರಮವಾಗಿ ಸ್ತೋತ್ರ ಮಾಡಿದರು. ಹೀಗೆ ಎಲ್ಲರೂ ನನ್ನನ್ನು ಸ್ತೋತ್ರಮಾಡಿ ವೇದಮಂತ್ರಗಳಿಂದ ಪಟ್ಟಾಭಿಷೇಕ ಮಾಡಿದರು. ಆ

ಉದ್ವಾಹಶ್ಚ ಕೃತಸ್ತತ್ರ ನಿಯೋಗಾತ್ಪರಮೇಷ್ಠಿನಃ ।
ಮರುತಾಂ ಚ ಸುತಾ ದೇವೀ ಸುಯಶಾಖ್ಯಾ ಬಭೂವ ಯಾ ॥೩೯॥

ಲಬ್ಧಂ ಶಶಿಪ್ರಭಂ ಛತ್ರಂ ತಯಾ ತತ್ರ ವಿಭೂಷಿತಂ ।
ಚಾಮರೇ ಚಾಮರಾಸಕ್ತ ಹಸ್ತಾಗ್ರೈ ಸ್ತ್ರೀಗಣೈರ್ಯುತಾ ॥೪೦॥

ಸಿಂಹಾಸನಂ ಚ ಪರಮಂ ತಯಾ ಚಾಧಿಷ್ಠಿತಂ ಮಯಾ ।
ಅಲಂಕೃತಾ ಮಹಾಲಕ್ಷ್ಮ್ಯಾ ಮುಕುಟಾದ್ಯೈಃ ಸುಭೂಷಣೈಃ ॥೪೧॥

ಲಬ್ಧೋ ಹಾರಶ್ಚ ಪರಮೋ ದೇವ್ಯಾಃ ಕಂಠಗತಸ್ತಥಾ ।
ವೃಷೇಂದ್ರಶ್ಚಸಿತೋ ನಾಗಃ ಸಿಂಹಃ ಸಿಂಹಧ್ವಜಸ್ತಥಾ ॥೪೨॥

ರಥಶ್ಚ ಹೇಮ ಚ್ಛತ್ರಂ ಚ ಚಂದ್ರ ಬಿಂಬ ಸಮಪ್ರಭಂ ।
ಅದ್ಯಾಪಿ ಸದೃಶಃ ಕಶ್ಚಿನ್ಮಯಾ ನಾಸ್ತಿ ವಿಭುಃ ಕ್ವಚಿತ್ ॥೪೩॥

---

ಪಟ್ಟಾಭಿಷೇಕ ಮಂಟಪದಲ್ಲಿಯೇ ಮರುತ್ತುಗಳ ಪುತ್ರಿಯಾದ ಸುಯಶಾ ಎಂಬುವಳನ್ನು ಬ್ರಹ್ಮನ ಅಪ್ಪಣೆಯಂತೆ ತಂದು ನನಗೆ ವಿವಾಹವನ್ನು ಮಾಡಿದರು.

೪೦. ಚಂದ್ರನಂತೆ ಕಾಂತಿಯುಕ್ತವಾದ ಛತ್ರಿಯು ನನಗೆ ದೊರೆಯಿತು. ಆ ವಿವಾಹ ಕಾಲದಲ್ಲಿ ನನ್ನ ಪತ್ನಿಗೂ ಅದು ಅಲಂಕಾರವಾಯಿತು. ದೇವಸ್ತ್ರೀಯರು ಚಾಮರಗಳನ್ನು ಬೀಸಿದರು. ಶ್ರೇಷ್ಠವಾದ ಸಿಂಹಾಸನದಲ್ಲಿ ನಾವಿಬ್ಬರೂ ಕುಳಿತೆವು.

೪೧-೪೨-೪೩. ಮಹಾಲಕ್ಷ್ಮೀ ದೇವಿಯು ನನ್ನ ಪತ್ನಿಗೆ ಕಿರೀಟ ಮುಂತಾದ ಒಳ್ಳೆಯ ಆಭರಣಗಳಿಂದ ಅಲಂಕಾರ ಮಾಡಿದಳು. ಪಾರ್ವತೀದೇವಿಯು ತನ್ನ ಕುತ್ತಿಗೆಯಲ್ಲಿದ್ದ ಉತ್ತಮವಾದ ಹಾರವನ್ನು ಕೊಟ್ಟಳು. ಇದೂ ಅಲ್ಲದೇ ಆ ದೇವಿಯು ಒಂದು ಶ್ರೇಷ್ಠವಾದ ಎತ್ತು, ಬಿಳಿಯ ಆನೆ, ಸಿಂಹ, ಸಿಂಹಧ್ವಜ, ರಥ, ಚಂದ್ರಮಂಡಲದಂತೆ ಕಾಂತಿಯುಕ್ತವಾದ ಚಿನ್ನದ ಹಿಡಿಯ ಬಿಳಿಯ ಛತ್ರಿ, ಇವುಗಳನ್ನೆಲ್ಲವನ್ನೂ ಕೊಟ್ಟಳು. ಈಗಲೂ ನನಗೆ ಸಮಾನನಾದ ಪುಣ್ಯವಂತನು ಎಲ್ಲಿಯೂ ಇಲ್ಲ.

ಸಾನ್ವಯಂ ಚ ಗೃಹೀತ್ವೇಶ ಸ್ತಥಾ ಸಂಬಂಧಿ ಬಾಂಧವೈಃ ।
ಆರುಹ್ಯ ವೃಷಮೀಶಾನೋ ಮಯಾ ದೇವ್ಯಾ ಗತಃ ಶಿವಃ ॥೪೪॥
ತದಾ ದೇವೀಂ ಭವಂ ದೃಷ್ಟ್ವಾ ಮಯಾ ಚ ಪ್ರಾರ್ಥಯನ್ ಗಣೈಃ ।
ಮುನಿದೇವರ್ಷಯಃ ಸಿದ್ಧಾ ಆಜ್ಞಾಂ ಪಾಶುಪತೀಂ ದ್ವಿಜಾಃ ॥೪೫॥
ಅಥಾಜ್ಞಾಂ ಪ್ರದದೌ ತೇಷಾ ಮರ್ಹಣಾಮಾಜ್ಞಯಾ ವಿಭೋಃ ।
ಸಂದಿಕೋ ನಗಜಾ ಭರ್ತು ಸ್ತೇಷಾಂ ಪಾಶುಪತೀಂ ಶುಭಾಂ ॥೪೬॥
ತಸ್ಮಾದ್ಧಿಮುನಯೋ ಲಬ್ಧ್ವಾತದಾಜ್ಞಾಂ ಮುನಿಪುಂಗವಾತ್ ।
ಭವಭಕ್ತಾಸ್ತದಾಚಾಸಂಸ್ತಸ್ಮಾದೇವಂ ಸಮರ್ಚಯೇತ್ ॥೪೭॥

---

೪೪. ಆಮೇಲೆ ಶಿವನು ನನ್ನ ವಂಶದವರನ್ನೂ, ಸಂಬಂಧಿಗಳಾದ ನೆಂಟರನ್ನೂ ಕರೆದುಕೊಂಡು ದೇವಿಯೊಡನೆ ವೃಷಭವನ್ನೇರಿ ನನ್ನೊಡನೆ ಪ್ರಯಾಣ ಮಾಡಿದನು.

೪೫. ಆ ಪ್ರಯಾಣಕಾಲದಲ್ಲಿ ನನ್ನೊಡನೆ ಶಿವನನ್ನೂ ದೇವಿಯನ್ನೂ ನೋಡಿ ಗಣಗಳೊಡನೆ ಕೂಡಿದ ಮುನಿಗಳೂ, ದೇವರ್ಷಿಗಳೂ, ಸಿದ್ಧರೂ, ಬ್ರಾಹ್ಮಣರೂ, ಪಶುಪತಿಯಾದ ಪರಮೇಶ್ವರನ ಸಂಬಂಧವಾದ ಅಪ್ಪಣೆಯನ್ನು ಪ್ರಾರ್ಥಿಸಿದರು.

೪೬. ಆಮೇಲೆ ಪಾರ್ವತೀಪತಿಯಾದ ಶಿವನಿಗೂ, ಅವನ ಗಣಗಳಿಗೂ ಆನಂದವನ್ನುಂಟುಮಾಡುವ ನಾನು ಪೂಜ್ಯರಾದ ಮುನಿದೇವಾದಿಗಳಿಗೆ ಶುಭವಾದ ಪಾಶುಪತ ವ್ರತ ರೂಪವಾದ ಶಿವನ ಅಪ್ಪಣೆಯನ್ನು ಕೊಟ್ಟೆನು.

೪೭. ಮುನಿಶ್ರೇಷ್ಠನಾದ ನಂದಿಕೇಶ್ವರನಿಂದ ಅಪ್ಪಣೆಯನ್ನು ಪಡೆದು ಆಮೇಲೆ ಮುನಿಗಳು ನನ್ನ ಶಿವಪೂಜಾಮಹಿಮೆಯನ್ನು ನೋಡಿದುದು ಮೊದಲುಗೊಂಡು ಶಿವನಲ್ಲಿ ಭಕ್ತಿಯುಳ್ಳವರಾದರು. ಆದುದರಿಂದ ಈ ರೀತಿಯಲ್ಲಿ ಭಕ್ತರ ವಿಶ್ವಾಸವನ್ನು ಅಭಿವೃದ್ಧಿಪಡಿಸುವುದರಿಂದ ದೇವನಾದ ಶಿವನನ್ನು ಚೆನ್ನಾಗಿ ಪೂಜಿಸಬೇಕು.

ನಮುಸ್ಕಾರ ವಿಹೀನಸ್ತು ನಾಮ ಉದ್ಗಿರಯೇದ್ಭವೇ ।
ಬ್ರಹ್ಮಘ್ನದಶ ಸಂತುಲ್ಯಂ ತಸ್ಯ ಪಾಪಂ ಗರೀಯಸಂ ॥೪೮॥
ತಸ್ಮಾತ್ಸರ್ವಪ್ರಕಾರೇಣ ನಮಸ್ಕಾರಾದಿ ಮುಚ್ಚರೇತ್ ।
ಆದೌ ಕುರ್ಯಾನ್ನಮಸ್ಕಾರಂ ತದಂತೇ ಶಿವತಾಂ ವ್ರಜೇತ್ ॥೪೯॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ನಂದಿಕೇಶ್ವರಾಭಿ
ಷೇಕೋ ನಾಮ ಚತುಶ್ಚತ್ವಾರಿಂಶೋಽಧ್ಯಾಯಃ

---

೪೮. ಶಿವನಿಗೆ ನಮಸ್ಕಾರವನ್ನು ಮಾಡದೇ ಕೇವಲ ನಾಮೋಚ್ಚಾರಣೆಯನ್ನು ಮಾಡುವ ಮನುಷ್ಯನಿಗೆ ಹತ್ತು ಬ್ರಹ್ಮಹತ್ಯೆಯನ್ನು ಮಾಡಿದಷ್ಟು ಪಾಪ ಬರುವುದು.

೪೯. ಆದುದರಿಂದ ಸರ್ವ ಪ್ರಯತ್ನದಿಂದಲೂ ಮೊದಲು ತ್ರಿಕರಣ ಶದ್ಧಿಪೂರ್ವಕವಾಗಿ ನಮಸ್ಕಾರವನ್ನು ಮಾಡಿ ನಮಸ್ಕಾರ ಶಬ್ದೋಚ್ಚಾರಣೆಯನ್ನು ಮಾಡಬೇಕು. ಹಾಗೆ ಮಾಡಿದರೆ ಕೊನೆಯಲ್ಲಿ ಮಂಗಳ ಸ್ವರೂಪವನ್ನು ಪಡೆಯುವರು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನಂದಿಕೇಶ್ವರ ಪಟ್ಟಾಭಿಷೇಕವನ್ನು ವರ್ಣಿಸಿರುವ ನಲವತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಪಂಚಚತ್ವಾರಿಂಶೋಽಧ್ಯಾಯಃ

ಪಂಚಚತ್ವಾರಿಂಶಕೇ ತು ಸಮಷ್ಟ್ಯಾಖ್ಯಂ ವಿಭೋರ್ವಪುಃ ।
ಋಷಿಭ್ಯೋ ವರ್ಣಯನ್ ಸೂತೋಽಧಸ್ತಲಾನಿಸ್ಯರೂಪಯತ್ ॥

॥ ಋಷಯ ಊಚುಃ ॥

ಸೂತ ಸುವ್ಯಕ್ತಮಖಿಲಂ ಕಥಿತಂ ಶಂಕರಸ್ಯ ತು ।
ಸರ್ವಾತ್ಮಭಾವಂ ರುದ್ರಸ್ಯ ಸ್ವರೂಪಂ ವಕ್ತುಮರ್ಹಸಿ ॥ ೧ ॥

॥ ಸೂತ ಉವಾಚ ॥

ಭೂರ್ಭುವಃ ಸ್ವರ್ಮಹಶ್ಚೈವ ಜನಃ ಸಾಕ್ಷಾತ್ತಪಸ್ತಥಾ ।
ಸತ್ಯಲೋಕಶ್ಚ ಪಾತಾಲಂ ನರಕಾರ್ಣವ ಕೋಟಯಃ ॥ ೨ ॥
ತಾರಕಾ ಗ್ರಹ ಸೋಮಾರ್ಕಾ ಧ್ರುವಃ ಸಪ್ತರ್ಷಯಸ್ತಥಾ ।
ವೈಮಾನಿಕಾಸ್ತಥಾನ್ಯೇ ಚ ತಿಷ್ಠಂತ್ಯಸ್ಯ ಪ್ರಸಾದತಃ ॥ ೩ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನಲವತ್ತೈದನೆಯ ಅಧ್ಯಾಯವು.

ನಲವತ್ತೈದನೆಯ ಅಧ್ಯಾಯದಲ್ಲಿ ಸೂತನು ಸಮಷ್ಟಿರೂಪವಾದ ಶಿವನ ಶರೀರವನ್ನು ಋಷಿಗಳಿಗೆ ವರ್ಣಿಸಿ ಹೇಳುತ್ತಾ ಮೊದಲು ಪಾತಾಳ ಲೋಕಗಳನ್ನು ವಿವರಿಸಿ ಹೇಳುವನು.

೧. ಋಷಿಗಳು ಹೇಳಿದರು: ಎಲೈ ಸೂತನೇ, ಶಿವನ ಸ್ವರೂಪವನ್ನು ಎಲ್ಲವನ್ನೂ ತಿಳಿಯುವಂತೆ ಹೇಳಿದೆ. ಆದರೆ ರುದ್ರನಿಗೆ ಸರ್ವಾತ್ಮ ಸ್ವರೂಪವು ಹೇಗೆ ಬಂದಿತು? ಎಂಬುದನ್ನು ನಮಗೆ ಈಗ ಹೇಳಬೇಕು.

೨–೩. ಸೂತನು ಹೇಳಿದನು: ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹೋಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ, ಪಾತಾಲಲೋಕ, ಸಮುದ್ರಗಳಂತಿರುವ ಕೋಟಿ ನರಕಗಳು, ನಕ್ಷತ್ರಗಳೂ, ಗ್ರಹಗಳೂ, ಚಂದ್ರಸೂರ್ಯರೂ, ಧ್ರುವ ಮಂಡಲ ಸಪ್ತರ್ಷಿ ಮಂಡಲಗಳು, ವಿಮಾನ ಸಂಚಾರಮಾಡುವ ದೇವಾದಿಗಳು ಇವರೆಲ್ಲರೂ ಶಿವನ ಅನುಗ್ರಹದಿಂದ ಇರುವರು.

ಅನೇನ ನಿರ್ಮಿತಾಸ್ತ್ವೇವಂ ತದಾತ್ಮಾನೋ ದ್ವಿಜರ್ಷಭಾಃ ।
ಸಮಷ್ಟಿರೂಪಃ ಸರ್ವಾತ್ಮಾ ಸಂಸ್ಥಿತಃ ಸರ್ವದಾ ಶಿವಃ ॥ ೪ ॥
ಸರ್ವಾತ್ಮಾನಂ ಮಹಾತ್ಮಾನಂ ಮಹಾದೇವಂ ಮಹೇಶ್ವರಂ ।
ನ ವಿಜಾನಂತಿ ಸಂಮೂಢಾ ಮಾಯಯಾ ತಸ್ಯ ಮೋಹಿತಾಃ ॥ ೫ ॥
ತಸ್ಯ ದೇವಸ್ಯ ರುದ್ರಸ್ಯ ಶರೀರಂ ವೈ ಜಗತ್ರಯಂ ।
ತಸ್ಮಾತ್ಪ್ರಣಮ್ಯ ತಂ ವಕ್ಷ್ಯೇ ಜಗತಾಂ ನಿರ್ಣಯಂ ಶುಭಂ ॥ ೬ ॥
ಪುರಾ ವಃ ಕಥಿತಂ ಸರ್ವಂ ಮಯಾಂಽಡಸ್ಯ ಯಥಾಽಽಕೃತಿಃ ।
ಭುವನಾನಾಂ ಸ್ವರೂಪಂ ಚ ಬ್ರಹ್ಮಾಂಡೇ ಕಥಯಾಮ್ಯಹಂ ॥ ೭ ॥
ಪೃಥಿವೀ ಚಾಂತರಿಕ್ಷಂ ಚ ಸ್ವರ್ಮಹರ್ಜನ ಏವಚ ।
ತಪಃ ಸತ್ಯಂಚ ಸಪ್ತೈತೇ ಲೋಕಾಸ್ತ್ವಂಡೋದ್ಭವಾಃ ಶುಭಾಃ ॥

---

೪. ಎಲೈ ಬ್ರಾಹ್ಮಣ ಶ್ರೇಷ್ಠರೇ, ಈ ಶಿವನಿಂದಲೇ ಪ್ರಪಂಚವು ಈ ರೀತಿಯಾಗಿ ನಿರ್ಮಾಣವಾಗಿ ಅವನ ಸ್ವರೂಪವೇ ಆಗಿರಲು ಸಕಲ ಸ್ವರೂಪನಾಗಿ ಎಲ್ಲ ಪದಾರ್ಥಗಳಿಗೂ ಅಂತರ್ಯಾಮಿಯಾಗಿ ಯಾವಾಗಲೂ ಶಿವನು ಇದ್ದೇ ಇರುವನು.

೫. ಮಹಾಮಹಿಮನಾದ ಮಹೇಶ್ವರನು ಸರ್ವಾತ್ಮನಾಗಿ ಇರುವನೆಂದು ಅವನ ಮಾಯೆಯಿಂದ ಮೋಹಿತರಾದ ಅಜ್ಞಾನಿಗಳಾದ ಜನರು ತಿಳಿಯಲಾರರು.

೬. ಈ ಮೂರು ಲೋಕವೂ ಆ ರುದ್ರನ ಶರೀರವಾದುದರಿಂದ ಅವನಿಗೆ ನಮಸ್ಕಾರಮಾಡಿ ಶುಭಕರವಾದ ಜಗತ್ತಿನ ವಿಭಾಗ ಸ್ವರೂಪವನ್ನು ಹೇಳುವೆನು.

೭. ಹಿಂದೆ ನಾನು ನಿಮಗೆ ಬ್ರಹ್ಮಾಂಡದ ಉತ್ಪತ್ತಿಯನ್ನು ಹೇಳಿರುವೆನು. ಈ ಬ್ರಂಹಾಂಡದಲ್ಲಿ ಲೋಕಗಳ ಸ್ವರೂಪವನ್ನು ಹೇಳುವೆನು.

೮. ಭೂಮಿ, ಅಂತರಿಕ್ಷ, ಸ್ವರ್ಗ, ಮಹ, ಜನ, ತಪ, ಸತ್ಯ, ಎಂಬ ಏಳು ಲೋಕಗಳೂ ಒಂದಕ್ಕಿಂತೊಂದು ಉತ್ತಮವಾಗಿ ಈ ಬ್ರಹ್ಮಾಂಡದಲ್ಲಿರುವುವು.

ಅಧಸ್ತಾದತ್ರ ಚೈತೇಷಾಂ ದ್ವಿಜಾಃ ಸಪ್ತ ತಲಾನಿ ತು ।
ಮಹಾತಲಾದಯಸ್ತೇಷಾಂ ಅಧಸ್ತಾನ್ನರಕಾಃ ಕ್ರಮಾತ್ ॥ ೯ ॥

ಮಹಾತಲಂ ಹೇಮತಲಂ ಸರ್ವರತ್ನೋಪಶೋಭಿತಂ ।
ಪ್ರಾಸಾದೈಶ್ಚ ವಿಚಿತ್ರೈಶ್ಚ ಭವತ್ಯಾಯ ತನೈಸ್ತಥಾ ॥೧೦॥

ಅನಂತೇನ ಚ ಸಂಯುಕ್ತಂ ಮುಚುಕುಂದೇನ ಧೀಮತಾ ।
ನೃಪೇಣ ಬಲಿನಾ ಚೈವ ಪಾತಾಲ ಸ್ವರ್ಗವಾಸಿನಾ ॥೧೧॥

ಶೈಲಂ ರಸಾತಲಂ ವಿಪ್ರಾಃ ಶಾರ್ಕರಂ ಹಿ ತಲಾತಲಂ ।
ಪೀತಂ ಸುತಲಮಿತ್ಯುಕ್ತಂ ವಿತಲಂ ವಿದ್ರುಮ ಪ್ರಭಂ ॥೧೨॥

ಸಿತಂ ಹಿ ಅತಲಂ ತಚ್ಚ ತಲಂ ಯಚ್ಚ ಸಿತೇತರಂ ।
ಕ್ಷ್ಮಾಯಾಸ್ತು ಯಾವದ್ವಿಸ್ತಾರೋ ಹ್ಯಧಸ್ತೇಷಾಂ ಚ ಸುವ್ರತಾಃ ॥

---

೯. ಎಲೈ ಮುನಿಗಳೇ, ಈ ಏಳು ಲೋಕಗಳ ಕೆಳಭಾಗದಲ್ಲಿ ಏಳು ತಲಗಳು ಇರುವುವು. ಮಹಾತಲಾದಿ ಲೋಕಗಳ ಕೆಳಭಾಗದಲ್ಲಿ ನರಕ ಲೋಕಗಳಿರುವುವು.

೧೦–೧೧. ಮಹಾತಲವೆಂಬ ಲೋಕವು ಚಿನ್ನದ ನೆಲಗಟ್ಟುಳ್ಳದ್ದಾಗಿ ಸಮಸ್ತ ರತ್ನಗಳಿಂದ ಅಲಂಕೃತವಾಗಿರುವುದು. ಅನೇಕ ಉಪ್ಪರಿಗೆ ಮನೆಗಳಿರುವುವು. ಅನೇಕ ಶಿವಾಲಯಗಳಿರುವುವು. ಆದಿಶೇಷನೂ ಬುದ್ಧಿವಂತನಾದ ಮುಚುಕುಂದನೆಂಬ ರಾಜನೂ ಪಾತಾಲ ಸ್ವರ್ಗವಾಸಿ ಯಾದ ಬಲಿ ಚಕ್ರವರ್ತಿಯೂ ಅಲ್ಲಿರುವರು.

೧೨–೧೩. ಎಲೈ ಬ್ರಾಹ್ಮಣರೇ, ಕೇಳಿರಿ: ರಸಾತಲವು ಶಿಲಾಮಯ ವಾದುದು. ತಲಾತಲವು ನುರುಜುಗಲ್ಲುಗಳಿಂದ ಕೂಡಿದುದು. ಸಕ ಲವೂ ಹಳದಿಯ ಬಣ್ಣವಾದುದು. ವಿತಲವು ಹವಳದ ಕಾಂತಿಯುಳ್ಳದ್ದು. ಅತಲವು ಬಿಳಿಯ ಬಣ್ಣವುಳ್ಳದ್ದು. ತಲಾತಲವು ಕಪ್ಪುಬಣ್ಣ ಉಳ್ಳದ್ದು. ಭೂಮಿಯು ಎಷ್ಟು ವಿಸ್ತಾರವುಳ್ಳುದೋ ಅವರ ಕೆಳಗಿನ ಲೋಕಗಳೂ ಅಷ್ಟೇ ವಿಸ್ತಾರ ಉಳ್ಳವು.

ತಲಾನಾಂ ಚೈವ ಸರ್ವೇಷಾಂ ತಾವತ್ಸಂಖ್ಯಾ ಸಮಾಹಿತಾ ।
ಸಹಸ್ರಯೋಜನಂ ವ್ಯೋಮ ದಶ ಸಾಹಸ್ರಮೇವಚ ॥೧೪॥

ಲಕ್ಷಂ ಸಪ್ತಸಹಸ್ರಂ ಹಿ ತಲಾನಾಂ ಸಘನಸ್ಯತು ।
ವ್ಯೋಮ್ನಃ ಪ್ರಮಾಣಂ ಮೂಲಂ ತು ತ್ರಿಂಶತ್ಸಾಹಸ್ರಕೇಣ ತು ॥

ಸುವರ್ಣೇನ ಮುನಿಶ್ರೇಷ್ಠಾ ಸ್ತಥಾ ವಾಸುಕಿನಾ ಶುಭಂ ।
ರಸಾತಲ ಮಿತಿ ಖ್ಯಾತಂ ತಥಾऽ ನ್ಯೈಶ್ಚ ನಿಷೇವಿತಂ ॥೧೬॥

ವಿರೋಚನ ಹಿರಣ್ಯಾಕ್ಷ ನರಕಾದ್ಯೈಶ್ಚ ಸೇವಿತಂ ।
ತಲಾತಲಮಿತಿ ಖ್ಯಾತಂ ಸರ್ವಶೋಭಾ ಸಮನ್ವಿತಂ ॥೧೭॥

ವೈನಾವಕಾದಿಭಿಶ್ಚೈವ ಕಾಲನೇಮಿ ಪುರೋಗಮೈಃ ।
ಪೂರ್ವದೇವೈಃ ಸಮಾಕೀರ್ಣಂ ಸುತಲಂ ಚ ತಥಾಪರೈಃ ॥೧೮॥

---

೧೪–೧೫. ಸಮಸ್ತ ತಲ ಲೋಕಗಳೂ ಸಾವಿರ ಯೋಜನ ವಿಸ್ತಾರ ಉಳ್ಳವು. ಆ ಲೋಕಗಳಿಗೆ ಸಂಬಂಧಪಟ್ಟ ಆಕಾಶಗಳು ಹತ್ತು ಸಾವಿರ ಯೋಜನಗಳುಳ್ಳವುಗಳು. ಮಹಾತಲವೇ ಮುಂತಾದ ನಾಲ್ಕು ಲೋಕಗಳು ಮೇಘಗಳಿಂದ ಕೂಡಿದ ಆಕಾಶ ಪ್ರದೇಶಗಳಿಂದ ಸಾವಿರ ಯೋಜನ ವಿಸ್ತಾರವು ಮೊದಲುಗೊಂಡು ಏಳು ಸಾವಿರ ಯೋಜನ ವಿಸ್ತಾರ ಉಳ್ಳವುಗಳು. ಮೂಲಭೂತವಾದ ತಲಾದಿ ಮೂರು ಲೋಕಗಳ ಆಕಾಶಗಳು ಮೂವತ್ತು ಸಾವಿರ ಯೋಜನ ಪ್ರಮಾಣ ಉಳ್ಳವುಗಳು.

೧೬–೧೭. ಸುವರ್ಣನೆಂಬ ವಾಸುಕಿಯಿಂದ ಕೂಡಿದುದು ರಸಾತಲವು. ಇದರಲ್ಲಿ ಇತರರೂ ಇರುವರು. ವಿರೋಚನ, ಹಿರಣ್ಯಾಕ್ಷ, ನರಕ, ಮುಂತಾದವರು ವಾಸವಾಗಿರುವ ತಲಾತಲವೆಂಬ ಲೋಕವು ಸಮಸ್ತ ಅಲಂಕಾರಗಳಿಂದಲೂ ಕೂಡಿರುವುದು.

೧೮. ಸುತಲ ಲೋಕವು ಕಾಲನೇಮಿಯೇ ಮುಂತಾದ ವೈನಾವಕರೆಂಬ ದೈತ್ಯರಿಂದಲೂ, ಇನ್ನೂ ಇತರ ಪ್ರಾಣಿಗಳಿಂದಲೂ, ತುಂಬಿರುವುದು.

ವಿತಲಂ ದಾನ ವಾದ್ಯೈಶ್ಚ ತಾರಕಾಗ್ನಿ ಮುಖೈಸ್ತಥಾ ।
ಮಹಾಂತಕಾದ್ಯೈ ರ್ನಾಗೈಶ್ಚ ಪ್ರಹ್ಲಾದೇನಾ ಸುರೇಣ ಚ ॥೧೯॥

ವಿತಲಂ ಚಾತ್ರವಿಖ್ಯಾತಂ ಕಂಬಲಾಶ್ವ ನಿಷೇವಿತಂ ।
ಮಹಾಕುಂಭೇನ ವೀರೇಣ ಹಯಗ್ರೀವೇಣ ಧೀಮತಾ ॥೨೦॥

ಶಂಕುಕರ್ಣೇನ ಸಂಭಿನ್ನಂ ತಥಾ ನಮುಚಿ ಪೂರ್ವಕೈಃ ।
ತಥಾಽನ್ಯೈ ರ್ವಿವಿಧೈ ರ್ವೀರೈಸ್ತಲಂ ಚೈವ ಸುಶೋಭಿತಂ ॥೨೧॥

ತಲೇಷು ತೇಷು ಸರ್ವೇಷು ಚಾಂಬಯಾ ಪರಮೇಶ್ವರಃ ।
ಸ್ಕಂದೇನ ನಂದಿನಾ ಸಾರ್ಧಂ ಗಣಪೈಃ ಸರ್ವತೋ ವೃತಃ ॥೨೨॥

---

೧೯. ವಿತಲಲೋಕವು ತಾರಕ, ಅಗ್ನಿಮುಖ, ಮುಂತಾದ ದೈತ್ಯರಿಂದಲೂ, ಮಹಾಂತನೇ ಮುಂತಾದ ನಾಗಗಳಿಂದಲೂ, ಪ್ರಹ್ಲಾದನೆಂಬ ಅಸುರನಿಂದಲೂ, ಕೂಡಿರುವುದು.

೨೦. ವಿತಲ ಲೋಕದಲ್ಲಿ ಕಂಬಲಾಶ್ವನೆಂಬ ಸರ್ಪರಾಜನೂ, ವೀರರಾದ ಕುಂಭ ಮಹಾಕುಂಭರೆಂಬ ರಾಕ್ಷಸರೂ, ಬುದ್ಧಿವಂತನಾದ ಹಯಗ್ರೀವನೆಂಬ ರಾಕ್ಷಸನೂ ಇರುವರು. ಇವರಿಂದ ಆ ಲೋಕವು ಪ್ರಸಿದ್ಧವಾಗಿರುವುದು.

೨೧. ತಲಲೋಕವು ಶಂಕುಕರ್ಣ, ನಮುಚಿ ಮುಂತಾದ ರಾಕ್ಷಸವೀರರಿಂದ ಅಲಂಕೃತವಾಗಿರುವುದು.

೨೨. ಆ ಸಮಸ್ತ ಲೋಕಗಳಲ್ಲಿಯೂ ದೇವೀ ಸಹಿತನಾದ ಪರಮೇಶ್ವರನು ಸ್ಕಂದ, ನಂದಿ, ಗಣಾಧಿಪತಿಗಳು ಇವರುಗಳೊಡನೆ ವಾಸವಾಗಿರುವನು.

ತಲಾನಾಂ ಚೈವ ಸರ್ವೇಷಾ ಮೂರ್ಧ್ವತಃ ಸಪ್ತಸಪ್ತಮಾಃ ।
ಕ್ಷ್ಮಾತಲಾನಿ ಧರಾ ಚಾಪಿ ಸಪ್ತಧಾ ಕಥಯಾಮಿ ವಃ ॥೨೩॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಪಾತಾಲವರ್ಣನಂ ನಾಮ ಪಂಚಚತ್ವಾರಿಂಶೋಽಧ್ಯಾಯಃ

---

೨೩. ಸಮಸ್ತ ತಲಗಳಿಗೂ ಮೇಲು ಭಾಗದಲ್ಲಿ ಭೂಮಿಯೂ ಊರ್ಧ್ವ ಲೋಕಗಳೂ ಇರುವುವು. ಭೂಮಿಯು ಏಳು ದ್ವೀಪಗಳಾಗಿ ಇರುವುದು. ಅದನ್ನು ನಿನಗೆ ಹೇಳುವೆನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಪಾತಾಳಾದಿವರ್ಣನೆಯನ್ನು ತಿಳಿಸುವ ನಲವತ್ತೈದನೆಯ ಅಧ್ಯಾಯವು ಮುಗಿದುದು.

अथ श्री लिंगमहापुराणे पूर्वभागे
षट्चत्वारिंशोऽध्यायः

षट्चत्वारिंशकेऽध्यायेऽ भूद्वीपानि च सागराः ।
प्रियव्रतात्मजाधीशा स्तद्विभागो निरूप्यते ॥

॥ सूत उवाच ॥

सप्तद्वीपा तथा पृथ्वी नदी पर्वत संकुला ।
समुद्रैः सप्तभिश्चैव सर्वतः समलंकृता ॥ १ ॥

जंबूः प्लक्षः शाल्मलिश्च कुशः क्रौंच स्तथैवच ।
शाकः पुष्करनामा च द्वीपास्त्वभ्यं तरे क्रमात् ॥ २ ॥

सप्तद्वीपेषु सर्वेषु सांबः सर्वगुणैर्वृतः ।
नानावेषधरो भूत्वा सान्निध्यं कुरुते हरः ॥ ३ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನಲವತ್ತಾರನೆಯ ಅಧ್ಯಾಯವು.

ನಲವತ್ತಾರನೆಯ ಅಧ್ಯಾಯದಲ್ಲಿ ಭೂಮಿಯಲ್ಲಿರುವ ದ್ವೀಪಗಳೂ ಸಾಗರಗಳೂ, ಪ್ರಿಯವ್ರತ ರಾಜನ ಪುತ್ರರ ದೇಶವಿಭಾಗಾದಿಗಳೂ ಇವನ್ನು ನಿರೂಪಿಸಲಾಗುವುದು.

೧. ಸೂತನು ಹೇಳಿದನು: ಭೂಲೋಕವು ನದೀ ಮತ್ತು ಪರ್ವತ ಗಳಿಂದ ಕೂಡಿ ಏಳು ದ್ವೀಪಗಳಾಗಿರುವುದು. ಸುತ್ತಲೂ ಏಳು ಸಮುದ್ರಗಳೂ ಈ ಭೂಮಿಗೆ ಅಲಂಕಾರವಾಗಿರುವುವು.

೨. ಭೂಲೋಕದಲ್ಲಿ ಕ್ರಮವಾಗಿ ಜಂಬೂ, ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಶಾಕ, ಪುಷ್ಕರ, ಎಂಬ ಹೆಸರಿನ ಏಳು ದ್ವೀಪಗಳಿರುವುವು.

೩. ಈ ಏಳು ದ್ವೀಪಗಳಲ್ಲಿಯೂ ದೇವೀಸಹಿತನಾದ ಶಿವನು ಬಗೆ ಬಗೆಯ ವೇಷಗಳಿಂದ ವಾಸವಾಗಿರುವನು.

ಕ್ಷಾರೋ ದೇಕ್ಷುರಸೋದಶ್ಚ ಸುರೋದಶ್ಚ ಘೃತೋದಧಿಃ ।
ದಧ್ಯರ್ಣವಶ್ಚ ಕ್ಷೀರೋದಃ ಸ್ವಾದೂದಶ್ಚಾಪ್ಯನು ಕ್ರಮಾತ್ ॥ ೪ ॥
ಸಮುದ್ರೇಷ್ವಿಹ ಸರ್ವೇಷು ಸರ್ವದಾ ಸಗಣಃ ಶಿವಃ ।
ಜಲರೂಪೀ ಭವಃ ಶ್ರೀಮಾನ್ ಕ್ರೀಡತೇ ಚೋರ್ಮಿಬಾಹುಭಿಃ ॥೫॥
ಕ್ಷೀರಾರ್ಣವಾ ಮೃತಮಿವ ಸದಾಕ್ಷೀರಾರ್ಣವೇ ಹರಿಃ ।
ಶೇತೇ ಶಿವಜ್ಞಾನಧಿಯಾ ಸಾಕ್ಷಾದ್ವೈ ಯೋಗ ನಿದ್ರಯಾ ॥ ೬ ॥
ಯದಾ ಪ್ರಬುದ್ಧೋ ಭಗರ್ವಾ ಪ್ರಬುದ್ಧಮಖಿಲಂ ಜಗತ್ ।
ಯದಾ ಸುಪ್ತಸ್ತದಾ ಸುಪ್ತಂ ತನ್ಮಯಂ ಚ ಚರಾಚರಂ ॥ ೭ ॥
ತೇನೈವಸೃಷ್ಟಮಖಿಲಂ ಧೃತಂ ರಕ್ಷಿತ ಮೇವಚ ।
ಸಂಹೃತಂ ದೇವದೇವಸ್ಯ ಪ್ರಸಾದಾತ್ಪರಮೇಷ್ಠಿನಃ ॥ ೮ ॥

---

೪–೫. ಉಪ್ಪುನೀರು, ಕಬ್ಬಿನ ರಸ, ಮದ್ಯ, ತುಪ್ಪ, ಮೊಸರು, ಹಾಲು, ಶುದ್ಧೋದಕ, ಇವುಗಳ ಸಮುದ್ರಗಳು ಕ್ರಮವಾಗಿರುವುವು. ಈ ಎಲ್ಲ ಸಮುದ್ರಗಳಲ್ಲಿಯೂ ಶಿವನು ಯಾವಾಗಲೂ ನೀರಿನ ರೂಪದಿಂದ ತನ್ನ ಗಣಗಳೊಡನೆ ವಾಸಮಾಡುತ್ತಾ ಅಲೆಗಳೆಂಬ ತನ್ನ ತೋಳುಗಳಿಂದ ಆಟವಾಡುತ್ತಾ ಕಾಂತಿಯುಕ್ತನಾಗಿರುವನು.

೬. ಕ್ಷೀರ ಸಮುದ್ರ ಸಂಬಂಧವಾದ ಅಮೃತದಂತೆ ಸಕಲ ಸಾರ ಭೂತನಾಗಿ ಹರಿಯು ಯಾವಾಗಲೂ ಶಿವನ ಧ್ಯಾನರೂಪವಾದ ಯೋಗ ನಿದ್ರೆಯಿಂದ ಕೂಡಿದವನಾಗಿ ಆ ಕ್ಷೀರ ಸಮುದ್ರದಲ್ಲಿ ಮಲಗಿರುವನು. ಸಾಕ್ಷಾದ್ವಿಷ್ಣುವಿಗೆ ಶಿವ ಚಿಂತನ ರೂಪವಾದ ಸಮಾಧ್ಯವಸ್ಥೆಯು ಆತ್ಮ ಸುಖಾನುಭವರೂಪವಾಗಿರುವುದು. ಎಂದು ಅಭಿಪ್ರಾಯವು.

೭–೮. ಹರಿಯು ಯಾವಾಗ ಎಚ್ಚರವಾಗಿರುವನೋ ಆಗ ಸಕಲ ಪ್ರಪಂಚವೂ ಎಚ್ಚರವಾಗಿರುವುದು. ಯಾವಾಗ ಮಲಗಿರುವನೋ ಆಗ ಎಲ್ಲವೂ ಮಲಗಿರುವುದು. ಈ ಪ್ರಪಂಚವು ಹರಿ ಸ್ವರೂಪವಾದುದ ರಿಂದ ಹೀಗಾಗುವುದು. ಆ ಮಹಾ ವಿಷ್ಣುವೇ ಶಿವನ ಅನುಗ್ರಹದಿಂದ ಈ ಸಮಸ್ತ ಪ್ರಪಂಚವನ್ನೂ ಸೃಷ್ಟಿಸಿದನು. ಪಾಲಿಸುವನು, ಕಡೆಗೆ ಸಂಹರಿಸುವನು.

ಸುಷೇಣಾ ಇತಿ ವಿಖ್ಯಾತಾ ಯಜಂತೇ ಪುರುಷರ್ಷಭಂ ।
ಅನಿರುದ್ಧಂ ಮುನಿಶ್ರೇಷ್ಠಾಃ ಶಂಖ ಚಕ್ರಗದಾಧರಂ ॥೯॥

ಯೇ ಚಾನಿರುದ್ಧಂ ಪುರುಷಂ ಧ್ಯಾಯಂ ತ್ಯಾತ್ಮವಿದಾಂ ವರಾಃ ।
ನಾರಾಯಣಸಮಾಃ ಸರ್ವೇ ಸರ್ವಸಂಪತ್ಸಮನ್ವಿತಾಃ ॥೧೦॥

ಸನಂದನಶ್ಚ ಭಗವಾನ್ ಸನಕಶ್ಚ ಸನಾತನಃ ।
ವಾಲಖಿಲ್ಯಾಶ್ಚ ಸಿದ್ಧಾಶ್ಚ ಮಿತ್ರಾವರುಣಕೌ ತಥಾ ॥೧೧॥

ಯಜಂತಿ ಸತತಂ ತತ್ರ ವಿಶ್ವಸ್ಯ ಪ್ರಭವಂ ಹರಿಂ ।
ಸಪ್ತದ್ವೀಪೇಷು ತಿಷ್ಠಂತಿ ನಾನಾಶೃಂಗಾ ಮಹೋದಯಾಃ ॥೧೨॥

ಆ ಸಮುದ್ರಾಯತಾಃ ಕೇಚಿದ್ಗಿರಯೋ ಗಹ್ವರೈ ಸ್ತಥಾ ।
ಧರಾಯಾಃ ಪತಯಶ್ಚಾಸನ್ ಬಹವಃ ಕಾಲಗೌರವಾತ್ ॥೧೩॥

---

೯–೧೦. ಶಂಖ, ಚಕ್ರ, ಗದೆ, ಇವುಗಳನ್ನು ಧರಿಸಿದ ಪುರುಷ ಶ್ರೇಷ್ಠನಾದ ಅನಿರುದ್ಧ ಮೂರ್ತಿಯನ್ನು ಸುಷೇಣರೆಂಬ ಮುನಿ ಶ್ರೇಷ್ಠರು ಪೂಜಿಸುವರು. ಯಾರು ಅನಿರುದ್ಧರೂಪನಾದ ವಿಷ್ಣುವನ್ನು ಧ್ಯಾನ ಮಾಡುವರೋ ಅವರು ಆತ್ಮಜ್ಞಾನಿಗಳಾಗಿ ನಾರಾಯಣನಿಗೆ ಸಮಾನ ರಾಗಿ ಸಕಲ ಸಂಪತ್ತುಗಳಿಂದ ಕೂಡಿದವರಾಗುವರು.

೧೧. ಮಹಾ ಜ್ಞಾನಿಗಳಾದ ಸನಕ, ಸನಂದನ, ಸನಾತನ ಇವರೂ ವಾಲಖಿಲ್ಯರೆಂಬ ಮುನಿಗಳೂ, ಸಿದ್ಧರೂ, ಮಿತ್ರಾವರುಣರೆಂಬ ಮುನಿ ಗಳೂ, ಸಮಸ್ತ ಪ್ರಪಂಚದ ಉತ್ಪತ್ತಿ ಕಾರಣನಾದ ಹರಿಯನ್ನು ಆ ಕ್ಷೀರ ಸಮುದ್ರದಲ್ಲಿ ಯಾವಾಗಲೂ ಪೂಜಿಸುತ್ತಿರುವರು.

೧೨. ಬಗೆ ಬಗೆಯ ಶಿಖರಗಳಿಂದ ಕೂಡಿದ ಎತ್ತರವಾದ ಪರ್ವತ ಗಳು ಅನೇಕ ಗವಿಗಳಿಂದ ಕೂಡಿ ಸಮುದ್ರದವರೆಗೂ ಹಬ್ಬಿ ಏಳು ದ್ವೀಪಗಳಲ್ಲಿಯೂ ವಿಸ್ತರಿಸಿಕೊಂಡಿರುವುವು.

೧೩–೧೪. ಕ್ರೌಂಚನೆಂಬ ರಾಕ್ಷಸನ ಶತ್ರುವಾದ, ಕುಮಾರ ಸ್ವಾಮಿಯ ತಂದೆಯಾದ ಶಿವನ ಅನುಗ್ರಹದಿಂದಲೂ, ಕಾಲಮಹಿಮೆ

ಸಾಮರ್ಥ್ಯಾತ್ಪರಮೇಶಾನಾಃ ಕ್ರೌಂಚಾರೇಃ ಜನಕಾತ್ಪ್ರಭೋಃ ।
ಮನ್ವಂತರೇಷು ಸರ್ವೇಷು ಅತೀತಾನಾಗ ತೇಷ್ವಿಹ ॥೧೪॥

ಪ್ರವಕ್ಷ್ಯಾಮಿ ಧರೇ ಶಾನ್ಯೋ ವಕ್ಷ್ಯೇ ಸ್ವಾಯಂಭುವೇಽಂತರೇ ।
ಮನ್ವಂತರೇಷು ಸರ್ವೇಷು ಅತೀತಾನಾಗತೇಷು ಚ ॥೧೫॥

ತುಲ್ಯಾಭಿ ಮಾನಿನಶ್ಚೈವ ಸರ್ವೇ ತುಲ್ಯ ಪ್ರಯೋಜನಾಃ ।
ಸ್ವಾಯಂಭುವಸ್ಯ ಚ ಮನೋಃ ಪೌತ್ರಾಸ್ತ್ವಾಸನ್ ಮಹಾಬಲಾಃ ॥
ಪ್ರಿಯವ್ರತಾತ್ಮಜಾ ವೀರಾಸ್ತೇ ದಶೇಹ ಪ್ರಕೀರ್ತಿತಾಃ ।
ಅಗ್ನೀಧ್ರಶ್ಚಾಗ್ನಿಬಾಹುಶ್ಚ ಮೇಧಾ ಮೇಧಾತಿಥಿ ರ್ವಸುಃ ॥೧೭॥

ಜ್ಯೋತಿಷ್ಮಾನ್ದ್ಯುತಿಮಾನ್ ಹವ್ಯಃ ಸವನಃ ಪುತ್ರ ಏವಚ ।
ಪ್ರಿಯವ್ರತೋಽಭ್ಯಷಿಂಚತ್ತಾನ್ ಸಪ್ತ ಸಪ್ತಸು ಪಾರ್ಥಿವಾನ್ ॥
ಜಂಬೂದ್ವೀಪೇಶ್ವರಂ ಚಕ್ರೇ ಅಗ್ನೀಧ್ರಂ ಸುಮಹಾಬಲಂ ।
ಪ್ಲಕ್ಷದ್ವೀಪೇಶ್ವರಶ್ಚಾಪಿ ತೇನ ಮೇಧಾತಿಥಿಃ ಕೃತಃ ॥೧೯॥

---

ಯಿಂದಲೂ, ಕಳೆದ ಮನ್ವಂತರಗಳಲ್ಲಿ ಭೂಮಿಯಲ್ಲಿ ಅನೇಕ ರಾಜರು ರಾಜ್ಯಭಾರ ಮಾಡಿದರು. ಬರುವ ಮನ್ವಂತರಗಳಲ್ಲಿ ಅನೇಕ ಶೂರರಾದ ರಾಜರು ರಾಜ್ಯಭಾರವನ್ನು ಮಾಡುವರು.

೧೫. ಸ್ವಾಯಂಭುವ ಮನ್ವಂತರದಲ್ಲಿದ್ದ ರಾಜರುಗಳನ್ನು ನಿಮಗೆ ಹೇಳುವೆನು. ಕಳೆದುಹೋದ ಮತ್ತು ಮುಂದೆ ಬರುವ ಮನ್ವಂತರಗಳಲ್ಲಿ ಸಕಲ ರಾಜರುಗಳೂ ಸಮಾನವಾದ ಶಕ್ತಿಯುಳ್ಳವರು ಮತ್ತು ಸಮಾನವಾದ ಪ್ರಯೋಜನವುಳ್ಳವರು.

೧೬-೧೭. ಸ್ವಾಯಂಭುವ ಮನುವಿನ ಮೊಮ್ಮಕ್ಕಳೂ ಪ್ರಿಯವ್ರತ ರಾಜನ ಮಕ್ಕಳೂ ಆದ ಮಹಾಬಲಶಾಲಿಗಳಾದ ಅಗ್ನೀಧ್ರ, ಅಗ್ನಿಬಾಹು, ಮೇಧಾ, ಮೇಧಾತಿಥಿ, ವಸು, ಜ್ಯೋತಿಷ್ಮಾನ್, ಹವ್ಯ, ದ್ಯುತಿಮಾನ್, ಸವನ, ಪುತ್ರ, ಎಂಬ ಹತ್ತು ಜನ ರಾಜರು ಪ್ರಸಿದ್ಧರಾದರು.

೧೮-೧೯-೨೦. ಪ್ರಿಯವ್ರತರಾಜನು ಏಳು ಜನ ಮಕ್ಕಳನ್ನೂ ಏಳು ದ್ವೀಪಗಳಿಗೆ ರಾಜರನ್ನು ಮಾಡಿ ಪಟ್ಟಾಭಿಷೇಕ ಮಾಡಿದನು. ಜಂಬೂದ್ವೀಪಕ್ಕೆ ಅಗ್ನೀಧ್ರನೂ, ಪ್ಲಕ್ಷ ದ್ವೀಪಕ್ಕೆ ಮೇಧಾತಿಥಿಯೂ, ಶಾಲ್ಮಲೀ

ಶಾಲ್ಮಲೇಶ್ಚ ವಪುಷ್ಮಂತಂ ರಾಜಾನಮಭಿಷಿಕ್ತವಾನ್ ।
ಜ್ಯೋತಿಷ್ಮಂತಂ ಕುಶದ್ವೀಪೇ ರಾಜಾನಂ ಕೃತವಾನ್ ನೃಪಃ ॥೨೦॥
ದ್ಯುತಿಮಂತಂ ಚ ರಾಜಾನಂ ಕ್ರೌಂಚದ್ವೀಪೇ ಸಮಾದಿಶತ್ ।
ಶಾಕದ್ವೀಪೇಶ್ವರಂ ಚಾಪಿ ಹವ್ಯಂ ಚಕ್ರೇ ಪ್ರಿಯವ್ರತಃ ॥೨೧॥
ಪುಷ್ಕರಾಧಿಪತಿಂ ಚಕ್ರೇ ಸವನಂ ಚಾಪಿ ಸುವ್ರತಾಃ ।
ಪುಷ್ಕರೇ ಸವನಸ್ಯಾಪಿ ಮಹಾವೀತಃ ಸುತೋಽಭವತ್ ॥೨೨॥
ಧಾತಕೀ ಚೈವ ದ್ವಾವೇತೌ ಪುತ್ರೌ ಪುತ್ರವತಾಂ ವರೌ ।
ಮಹಾವೀತಂ ಸ್ಮೃತಂ ವರ್ಷಂ ತಸ್ಯನಾಮ್ನಾ ಮಹಾತ್ಮನಃ ॥೨೩॥
ನಾಮ್ನಾ ತು ಧಾತಕೇಶ್ಚೈವ ಧಾತಕೀ ಖಂಡ ಮುಚ್ಯತೇ ।
ಹವ್ಯೋಽಪ್ಯಜನಯತ್ಪುತ್ರಾನ್ ಶಾಕದ್ವೀಪೇಶ್ವರಃ ಪ್ರಭುಃ ॥೨೪॥
ಜಲದಂ ಚ ಕುಮಾರಂ ಚ ಸುಕುಮಾರಂ ಮಣೀಚಕಂ ।
ಕುಸುಮೋತ್ತರ ಮೋದಾಕೀ ಸಪ್ತಮಸ್ತು ಮಹಾದ್ರುಮಃ ॥೨೫॥

---

ದ್ವೀಪಕ್ಕೆ ವಪುಷ್ಮಂತನೂ, ಕುಶದ್ವೀಪಕ್ಕೆ ಜ್ಯೋತಿಷ್ಮಂತನೂ, ರಾಜರಾದರು.

೨೧. ಆ ಪ್ರಿಯವ್ರತನು ದ್ಯುತಿಮಂತನನ್ನು ಕ್ರೌಂಚದ್ವೀಪಕ್ಕೂ ಹವ್ಯನನ್ನು ಶಾಕ ದ್ವೀಪಕ್ಕೂ, ಸವನನನ್ನು ಪುಷ್ಕರದ್ವೀಪಕ್ಕೂ, ರಾಜರನ್ನಾಗಿ ಮಾಡಿದನು.

೨೨. ಪುಷ್ಕರ ದ್ವೀಪಾಧಿಪತಿಯಾದ ಸವನರಾಜನಿಗೆ ಮಹಾವೀತ, ಧಾತಕಿ, ಎಂಬಿಬ್ಬರು ಮಕ್ಕಳಾದರು. ಪುಷ್ಕರ ದ್ವೀಪವು ಎರಡು ಭಾಗವಾಯಿತು.

೨೩. ಮಹಾ ವೀರನ ಭಾಗಕ್ಕೆ ಮಹಾ ವೀರ ವರ್ಷವೆಂದೂ, ಧಾತಕಿಯ ಭಾಗಕ್ಕೆ ಧಾತಕೀ ಖಂಡವೆಂದೂ, ಹೆಸರಾಯಿತು.

೨೪-೨೫. ಶಾಕದ್ವೀಪಾಧಿಪತಿಯಾದ ಹವ್ಯರಾಜನಿಗೆ ಜಲದ, ಕುಮಾರ, ಸುಕುಮಾರ, ಮಣೀಚಕ, ಕುಸುಮೋತ್ತರ, ಮೋದಾಕಿ, ಮಹಾದ್ರುಮ ಎಂಬ ಏಳು ಜನ ಮಕ್ಕಳಾದರು.

ಜಲದಂ ಜಲದಸ್ಯಾಥ ವರ್ಷಂ ಪ್ರಥಮ ಮುಚ್ಯತೇ ।
ಕುಮಾರಸ್ಯ ತು ಕೌಮಾರಂ ದ್ವಿತೀಯಂ ಪರಿಕೀರ್ತಿತಂ ॥೨೬॥

ಸುಕುಮಾರಂ ತೃತೀಯಂ ತು ಸುಕುಮಾರಸ್ಯ ಕೀರ್ತ್ಯತೇ ।
ಮಣೀಚಕಂ ಚತುರ್ಥಂ ತು ಮಣೀಚಕ ಮಿಹೋಚ್ಯತೇ ॥೨೭॥

ಕುಸುಮೋತ್ತರಸ್ಯ ವೈ ವರ್ಷಂ ಪಂಚಮಂ ಕುಸುಮೋತ್ತರಂ ।
ಮೋದಕಂ ಚಾಪಿಮೋದಾಕೇ ವರ್ಷಂ ಷಷ್ಠಂ ಪ್ರಕೀರ್ತಿತಂ॥೨೮॥

ಮಹಾದ್ರುಮಸ್ಯ ನಾಮ್ನಾ ತು ಸಪ್ತಮಂ ತನ್ಮಹಾದ್ರುಮಂ ।
ತೇಷಾಂ ತು ನಾಮಭಿಸ್ತಾನಿ ಸಪ್ತವರ್ಷಾಣಿ ತತ್ರ ವೈ ॥೨೯॥

ಕ್ರೌಂಚದ್ವೀಪೇಶ್ವರಸ್ಯಾಪಿ ಪುತ್ರಾ ದ್ಯುತಿಮತಸ್ತು ವೈ ।
ಕುಶಲೋ ಮನುಗಶ್ಚೋಷ್ಣಃ ಪೀವರಶ್ಚಾಂಧಕಾರಕಃ ॥೩೦॥

ಮುನಿಶ್ಚ ದುಂದುಭಿಶ್ಚೈವ ಸುತಾ ದ್ಯುತಿಮತಸ್ತು ವೈ ।
ತೇಷಾಂ ಸ್ವನಾಮಭಿರ್ದೇಶಾಃ ಕ್ರೌಂಚದ್ವೀಪಾಶ್ರಯಾಃ ಶುಭಾಃ ॥

ಕುಶಲದೇಶಃ ಕುಶಲೋ ಮನುಗಸ್ಯ ಮನೋಽನುಗಃ ।
ಉಷ್ಣಸ್ಯೋಷ್ಣಃ ಸ್ಮೃತೋ ದೇಶಃ ಪೀವರಃ ಪೀವರಸ್ಯ ಚ ॥೩೧॥

---

೨೬–೨೯. ಆ ಮಕ್ಕಳ ಹೆಸರಿನಿಂದಲೇ ಅವರವರ ಭಾಗಕ್ಕೆ ಬಂದ ದ್ವೀಪ ಭಾಗಕ್ಕೆ ಹೆಸರಾಗಿ ಶಾಕದ್ವೀಪವೂ, ಜಲದವರ್ಷ, ಕೌಮಾರ ವರ್ಷ, ಸುಕುಮಾರವರ್ಷ, ಮಣೀಚಕವರ್ಷ, ಕುಸುಮೋತ್ತರವರ್ಷ, ಮೋದಕವರ್ಷ, ಮಹಾದ್ರುಮವರ್ಷ, ಎಂದು ಏಳು ಭಾಗವಾಯಿತು.

೩೦. ಕ್ರೌಂಚದ್ವೀಪಾಧಿಪತಿಯಾದ ದ್ಯುತಿಮಂತನೆಂಬ ರಾಜನಿಗೆ, ಕುಶಲ, ಮನುಗ, ಉಷ್ಣ, ಪೀವರ, ಅಂಧಕಾರ, ಮುನಿ,ದುಂದುಭಿ, ಎಂಬ ಏಳುಜನ ಮಕ್ಕಳಿದ್ದರು.

೩೧–೩೩. ಅವರ ಹೆಸರಿನಿಂದಲೇ ಕ್ರೌಂಚದ್ವೀಪವು, ಕುಶಲ ದೇಶ, ಮನೋನುಗದೇಶ, ಉಷ್ಣದೇಶ, ಪೀವರದೇಶ, ಅಂಧಕಾರ

ಅಂಧಕಾರಸ್ಯ ಕಥಿತೋ ದೇಶೋ ನಾಮ್ನಾಂಧಕಾರಕಃ ।
ಮುನೇರ್ದೇಶೋ ಮುನಿಃ ಪ್ರೋಕ್ತೋ ದುಂದುಭೇ ದುಂದುಭಿಃ
ಸ್ಮೃತಃ ॥೩೩॥

ಏತೇ ಜನಪದಾಃ ಸಪ್ತ ಕ್ರೌಂಚದ್ವೀಪೇಷು ಭಾಸ್ವರಾಃ ।
ಜ್ಯೋತಿಷ್ಮಂತಃ ಕುಶದ್ವೀಪೇ ಸಪ್ತ ಚಾಸನ್ ಮಹೌಜಸಃ ॥೩೪॥

ಉದ್ಭಿದೋ ವೇಣುಮಾಂ ಶ್ಚೈವ ದ್ವೈರಥೋ ಲವಣೋ ಧೃತಿಃ ।
ಷಷ್ಠಃ ಪ್ರಭಾಕರಶ್ಚಾಪಿ ಸಪ್ತಮಃ ಕಪಿಲಃ ಸ್ಮೃತಃ ॥೩೫॥

ಉದ್ಭಿದಂ ಪ್ರಥಮಂ ವರ್ಷಂ ದ್ವಿತೀಯಂ ವೇಣುಮಂಡಲಂ ।
ತೃತೀಯಂ ದ್ವೈರಥಂ ಚೈವ ಚತುರ್ಥಂ ಲವಣಂ ಸ್ಮೃತಂ ॥೩೬॥

ಪಂಚಮಂ ಧೃತಿಮತ್ಷಷ್ಠಂ ಪ್ರಭಾಕರ ಮನುತ್ತಮಂ ।
ಸಪ್ತಮಂ ಕಪಿಲಂನಾಮ ಕಪಿಲಸ್ಯ ಪ್ರಕೀರ್ತಿತಂ ॥೩೭॥

ಶಾಲ್ಮಲಸ್ಯೇಶ್ವರಾಃ ಸಪ್ತ ಸುತಾಸ್ತೇ ವೈ ವಪುಷ್ಮತಃ ।
ಶ್ವೇತಶ್ಚ ಹರಿತಶ್ಚೈವ ಜೀಮೂತೋ ರೋಹಿತಸ್ತಥಾ ॥೩೮॥

---

ದೇಶ, ಮುನಿದೇಶ, ದುಂದುಭಿದೇಶ, ಎಂಬ ಏಳುದೇಶಗಳಾಗಿ ಪ್ರಕಾಶಿಸುತ್ತಿರುವುದು.

೩೪-೩೫. ಕುಶದ್ವೀಪಾಧಿಪತಿಯಾದ ಜ್ಯೋತಿಷ್ಮಂತನಿಗೆ ಉದ್ಭಿದ, ವೇಣುಮಂತ, ದ್ವೈರಥ, ಲವಣ, ಧೃತಿ, ಪ್ರಭಾಕರ, ಕಪಿಲ, ಎಂಬ ಏಳುನಜ ಮಕ್ಕಳು.

೩೬-೩೭. ಈ ಏಳುಜನ ಮಕ್ಕಳಿಗೆ, ಉದ್ಭಿದವರ್ಷ, ವೇಣುಮಂಡಲವರ್ಷ, ದ್ವೈರಥವರ್ಷ, ಲವಣವರ್ಷ, ಧೃತಿಮಂತವರ್ಷ, ಪ್ರಭಾಕರವರ್ಷ, ಕಪಿಲವರ್ಷ, ಎಂಬ ಏಳುಭಾಗಗಳಾಗಿ ಕುಶದ್ವೀಪವು ವಿಭಾಗವಾಯಿತು.

೩೮. ಶಾಲ್ಮಲಿದ್ವೀಪದ ಅಧಿಪತಿಯಾದ ವಪುಷ್ಮಂತರಾಜನಿಗೆ ಶ್ವೇತ, ಹರಿತ, ಜೀಮೂತ, ರೋಹಿತ, ವೈದ್ಯುತ, ಮಾನಸ, ಸುಪ್ರಭ, ಎಂಬ ಏಳುಜನ ಮಕ್ಕಳಿದ್ದರು.

ವೈದ್ಯುತೋ ಮಾನಸಶ್ಚೈವ ಸುಪ್ರಭಃ ಸಪ್ತಮಸ್ತಥಾ ।
ಶ್ವೇತಸ್ಯ ದೇಶಃ ಶ್ವೇತಸ್ತು ಹರಿತಸ್ಯ ಚ ಹಾರಿತಃ ॥೩೯॥
ಜೀಮೂತಸ್ಯ ಚ ಜೀಮೂತೋ ರೋಹಿತಸ್ಯ ಚ ರೋಹಿತಃ ।
ವೈದ್ಯುತೋ ವೈದ್ಯುತಸ್ಯಾಪಿ ಮಾನಸಸ್ಯ ಚ ಮಾನಸಃ ॥೪೦॥
ಸುಪ್ರಭಃ ಸುಪ್ರಭಸ್ಯಾಪಿ ಸಪ್ತ ವೈ ದೇಶಲಾಂಛಕಾಃ ।
ಪ್ಲಕ್ಷದ್ವೀಪೇ ತು ವಕ್ಷ್ಯಾಮಿ ಜಂಬೂದ್ವೀಪಾದನಂತರಂ ॥೪೧॥
ಸಪ್ತ ಮೇಧಾತಿಥೇಃ ಪುತ್ರಾಃ ಪ್ಲಕ್ಷದ್ವೀಪೇಶ್ವರಾ ನೃಪಾಃ ।
ಜ್ಯೇಷ್ಠಃ ಶಾಂತಭಯಸ್ತೇಷಾಂ ಸಪ್ತವರ್ಷಾಣಿ ತಾನಿ ವೈ ॥೪೨॥
ತಸ್ಮಾಚ್ಛಾಂತಭಯಾಚ್ಚೈವ ಶಿಶಿರಸ್ತು ಸುಖೋದಯಃ ।
ಆನಂದಶ್ಚ ಶಿವಶ್ಚೈವ ಕ್ಷೇಮಕಶ್ಚ ಧ್ರುವಸ್ತಥಾ ॥೪೩॥
ತಾನಿ ತೇಷಾಂ ತು ನಾಮಾನಿ ಸಪ್ತವರ್ಷಾಣಿ ಭಾಗಶಃ ।
ನಿವೇಶಿತಾನಿ ತೈಸ್ತಾನಿ ಪೂರ್ವಂ ಸ್ವಾಯಂಭುವೇಽಂತರೇ ॥೪೪॥

---

೩೯–೪೦. ಆ ಮಕ್ಕಳ ಹೆಸರಿನಿಂದಲೇ ಅವರ ದೇಶಗಳಿಗೆ ಹೆಸರಾಗಿ ಶಲ್ಮಲಿದ್ವೀಪವು ಶ್ವೇತದೇಶ, ಹರಿತದೇಶ, ಜೀಮೂತದೇಶ, ರೋಹಿತ ದೇಶ, ವೈದ್ಯುತದೇಶ, ಮಾನಸದೇಶ, ಸುಪ್ರಭದೇಶ, ಎಂಬ ಏಳು ಭಾಗವಾಯಿತು.

೪೧. ಜಂಬೂದ್ವೀಪದ ಸಮೀಪದಲ್ಲಿರುವ ಪ್ಲಕ್ಷದ್ವೀಪಾಧಿಪತಿಯಾದ ಮೇಧಾತಿಥಿ ರಾಜನಿಗೆ ಏಳುಜನ ಮಕ್ಕಳಿದ್ದರು. ಅವರೆಲ್ಲರೂ ರಾಜರಾದರು.

೪೨–೪೪. ಮೇಧಾತಿಥಿರಾಜನು ಶಾಂತಭಯ, ಶಿಶಿರ, ಸುಖೋದಯ, ಆನಂದ, ಶಿವ, ಕ್ಷೇಮಕ, ಧ್ರುವ, ಎಂಬ ಏಳುಜನ ಮಕ್ಕಳಿಗೆ ಇದೇ ಹೆಸರಿನ ಏಳು ವರ್ಷಗಳನ್ನು ವಿಭಾಗಮಾಡಿಕೊಟ್ಟು ಪ್ಲಕ್ಷದ್ವೀಪದಲ್ಲಿ ರಾಜರನ್ನಾಗಿ ಇಟ್ಟನು. ಸ್ವಾಯಂಭುವ ಮನ್ವಂತರದಲ್ಲಿ ಈ ವಿಭಾಗಗಳಾದುವು.

೪೫. ಪ್ಲಕ್ಷದ್ವೀಪ ನಿವಾಸಿಗಳಾದ ಮೇಧಾತಿಥಿರಾಜನ ಪುತ್ರರು ಆ ದ್ವೀಪದಲ್ಲಿ ಪ್ರಜೆಗಳು ವರ್ಣಾಶ್ರಮ ಧರ್ಮಾಚರಣೆಯುಳ್ಳವರಾಗಿರಬೇಕೆಂದು ಗೊತ್ತು ಮಾಡಿದರು.

ಮೇಧಾತಿಥೇಸ್ತು ಪುತ್ರೈಸ್ತ್ರೈಃ ಪ್ಲಕ್ಷದ್ವೀಪ ನಿವಾಸಿಭಿಃ ।
ವರ್ಣಾಶ್ರಮಾಚಾರಯುತಾಃ ಪ್ರಜಾಸ್ತತ್ರ ನಿವೇಶಿತಾಃ ॥೪೫॥

ಪ್ಲಕ್ಷದ್ವೀಪಾದಿ ವರ್ಷೇಷು ಶಾಕದ್ವೀಪಾಂತಿಕೇಷು ವೈ ।
ಜ್ಞೇಯಃ ಪಂಚಸು ಧರ್ಮೋ ವೈ ವರ್ಣಾಶ್ರಮ ವಿಭಾಗಶಃ ॥೪೬॥

ಸುಖಮಾಯುಃ ಸ್ವರೂಪಂ ಚ ಬಲಂ ಧರ್ಮೋ ದ್ವಿಜೋತ್ತಮಾಃ ।
ಪಂಚಸ್ವೇತೇಷು ದ್ವೀಪೇಷು ಸರ್ವಸಾಧಾರಣಂ ಸ್ಮೃತಂ ॥೪೭॥

ರುದ್ರಾರ್ಚನರತಾ ನಿತ್ಯಂ ಮಹೇಶ್ವರ ಪರಾಯಣಾಃ ।
ಅನ್ಯೇಚ ಪುಷ್ಕರದ್ವೀಪೇ ಪ್ರಜಾತಾಶ್ಚ ಪ್ರಜೇಶ್ವರಾಃ ॥೪೮॥

ಪ್ರಜಾಪತೇಶ್ಚ ರುದ್ರಸ್ಯ ಭಾವಾಮೃತ ಸುಖೋತ್ಕಟಾಃ ॥೪೯॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಭುವನಕೋಶೇ ದ್ವೀಪ ದ್ವೀಪೇಶ್ವರ ಕಥನಂ ನಾಮ ಷಟ್ಚತ್ವಾರಿಂಶೋಽಧ್ಯಾಯಃ

---

೪೬. ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಶಾಕ, ಈ ಐದುದ್ವೀಪಗಳಲ್ಲಿ ವರ್ಣಾಶ್ರಮ ಧರ್ಮವಿಭಾಗಗಳು ಮುಂದೆ ಹೇಳುವಂತೆ ಇರುವುವು.

೪೭. ಮೇಲೆ ಹೇಳಿದ ಐದು ದ್ವೀಪಗಳಲ್ಲಿ ಸುಖ, ಆಯುಸ್ಸು, ಸ್ವರೂಪ, ಬಲ, ಧರ್ಮ, ಇವುಗಳು ಎಲ್ಲ ಪ್ರಜೆಗಳಿಗೂ ಸಾಮಾನ್ಯವಾದುದಾಗಿರುವುವು. ಒಬ್ಬರಿಗೂ, ಮತ್ತೊಬ್ಬರಿಗೂ, ಈ ಐದು ವಿಷಯಗಳಲ್ಲಿ ಭೇದವಿರುವುದೇ ಇಲ್ಲ.

೪೮–೪೯. ಮಿಕ್ಕ ಪುಷ್ಕರ ದ್ವೀಪ, ಶ್ವೇತದ್ವೀಪಗಳಲ್ಲಿ ಹುಟ್ಟಿದವರು ಪ್ರತಿ ದಿನವೂ, ರುದ್ರನ ಪೂಜೆಯಲ್ಲಾಸಕ್ತರಾದವರಾಗಿ, ಮಹೇಶ್ವರನನ್ನು ಧ್ಯಾನಮಾಡುತ್ತಾ, ಭಕ್ತಿಯಿಂದುಂಟಾದ ಅಮೃತರಸಾಸ್ವಾದನೆಯ ಸುಖದಿಂದ ಕೂಡಿದವರಾಗಿ, ಅಜ್ಞಾನಾವರಣವನ್ನು ಕಳೆದುಕೊಂಡು ಪ್ರಜೇಶ್ವರರಾಗಿರುವರು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ದ್ವೀಪಗಳನ್ನೂ ದ್ವಿಪೇಶ್ವರರನ್ನೂ ವಿವರಿಸಿರುವ ನಲವತ್ತಾರನೆಯ ಅಧ್ಯಾಯವು ಮುಗಿದುದು.

ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
ಸಪ್ತಚತ್ವಾರಿಂಶೋಽಧ್ಯಾಯಃ

ಸಪ್ತಚತ್ವಾರಿಂಶಕೇ ತು ಜಂಬೂವರ್ಷಾಣಿ ಭಾಗಶಃ ।
ಆಗ್ನೀಧ್ರವಂಶೋ ವಿಖ್ಯಾತೋ ಭಾರತಾಂತಶ್ಚ ಕಥ್ಯತೇ ॥

॥ ಸೂತ ಉವಾಚ ॥

ಆಗ್ನೀಧ್ರಂ ಜ್ಯೇಷ್ಠದಾಯಾದಂ ಕಾಮ್ಯಪುತ್ರಂ ಮಹಾಬಲಂ ।
ಪ್ರಿಯವ್ರತೋಽಭ್ಯಷಿಂಚದ್ವೈ ಜಂಬೂದ್ವೀಪೇಶ್ವರಂ ನೃಪಃ ॥ ೧ ॥

ಸೋಽತೀವ ಭವಭಕ್ತಶ್ಚ ತಪಸ್ವೀ ಕರುಣಃ ಸದಾ ।
ಭವಾರ್ಚನರತಃ ಶ್ರೀಮಾನ್ಗೋಮಾನ್ಧೀಮಾನ್ದ್ವಿಜರ್ಷಭಾಃ ॥ ೨ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನಲವತ್ತೇಳನೆಯ ಅಧ್ಯಾಯವು

( ನಲವತ್ತೇಳನೆಯ ಅಧ್ಯಾಯದಲ್ಲಿ ಜಂಬೂದ್ವೀಪದ ವರ್ಷಭಾಗಗಳನ್ನೂ ಭರತಖಂಡದಲ್ಲಿ ಆಗ್ನೀಧ್ರರಾಜನ ವಂಶವಿಸ್ತಾರವನ್ನೂ ವರ್ಣಿಸಲಾಗುವುದು. )

೧. ಸೂತನು ಹೇಳಿದನು : ಪ್ರಿಯವ್ರತರಾಜನು ಪುತ್ರಕಾಮೇಷ್ಟಿಯನ್ನು ಮಾಡಿದ ಮೇಲೆ ಮೊದಲನೆಯ ಮಗನಾದ ಮಹಾಬಲಶಾಲಿಯಾದ ಆಗ್ನೀಧ್ರನನ್ನು ಜಂಬೂದ್ವೀಪಕ್ಕೆ ರಾಜನನ್ನಾಗಿ ಪಟ್ಟಾಭಿಷೇಕ ಮಾಡಿದನು.

೨. ಎಲೈ ಬ್ರಾಹ್ಮಣಶ್ರೇಷ್ಠರೇ, ಕೇಳಿರಿ. ಆ ಆಗ್ನೀಧ್ರರಾಜನು ಯೌವನವಂತನು. ಮಹಾಶಿವಭಕ್ತನು. ಯಾವಾಗಲೂ ಶಿವಪೂಜೆಯಲ್ಲಿ ಆಸಕ್ತನು. ಮಹಾಬುದ್ಧಿವಂತನು. ಅನೇಕ ಗೋವುಗಳುಳ್ಳವನಾಗಿಯೂ, ಸಂಪತ್ತುಳ್ಳವನಾಗಿಯೂ ಇದ್ದನು.

ತಸ್ಯ ಪುತ್ರಾ ಬಭೂವುಸ್ತೇ ಪ್ರಜಾಪತಿಸಮಾನವ ।
ಸರ್ವೇ ಮಾಹೇಶ್ವರಾಶ್ಚೈವ ಮಹಾದೇವ ಪರಾಯಣಾಃ ॥ ೩ ॥

ಜ್ಯೇಷ್ಠೋ ನಾಭಿರಿತಿ ಖ್ಯಾತಃ ತಸ್ಯ ಕಿಂಪುರುಷೋಽನುಜಃ ।
ಹರಿವರ್ಷಸ್ತೃತೀಯಸ್ತು ಚತುರ್ಥೋ ವೈ ತ್ವಿಲಾವೃತಃ ॥ ೪ ॥

ರಮ್ಯಸ್ತು ಪಂಚಮಸ್ತತ್ರ ಹಿರಣ್ಮಾನ್ ಷಷ್ಠ ಉಚ್ಯತೇ ।
ಕುರುಸ್ತುಸಪ್ತಮಸ್ತೇಷಾಂ ಭದ್ರಾಶ್ವಸ್ತ್ವಷ್ಟಮಃ ಸ್ಮೃತಃ ॥ ೫ ॥

ನವಮಃ ಕೇತುಮಾಲಸ್ತು ತೇಷಾಂ ದೇಶಾನ್ನಿಬೋಧತ ।
ನಾಭೇಸ್ತು ದಕ್ಷಿಣಂ ವರ್ಷಂ ಹೇಮಾಖ್ಯಂ ತು ಪಿತಾ ದದೌ ॥ ೬ ॥

ಹೇಮಕೂಟಂ ತು ಯದ್ವರ್ಷಂ ದದೌ ಕಿಂಪುರುಷಾಯ ಸಃ ।
ನೈಷಧಂ ಯತ್ಸ್ಮೃತಂ ವರ್ಷಂ ಹರಯೇ ತತ್ಪಿತಾ ದದೌ ॥ ೭ ॥

ಇಲಾವೃತಾಯ ಪ್ರದದೌ ಮೇರುರ್ಯತ್ರ ತು ಮಧ್ಯಮಃ ।
ನೀಲಾಚಲಾಶ್ರಿತಂ ವರ್ಷಂ ರಮ್ಯಾಯ ಪ್ರದದೌ ಪಿತಾ ॥ ೮ ॥

---

೩. ಅವನಿಗೆ ಬ್ರಹ್ಮನ ಸಮಾನರಾದ ಒಂಬತ್ತು ಜನ ಮಕ್ಕಳಿದ್ದರು. ಅವರೆಲ್ಲರೂ ಮಹೇಶ್ವರನ ಭಕ್ತರಾಗಿ ಶಿವನ ಪೂಜಾದಿಗಳಲ್ಲಾಸಕ್ತರಾಗಿದ್ದರು.

೪–೫. ೧. ನಾಭಿ. ೨. ಕಿಂಪುರುಷ. ೩. ಹರಿವರ್ಷ. ೪. ಇಲಾವೃತ. ೫. ರಮ್ಯ. ೬. ಹಿರಣ್ಮಯ. ೭. ಕುರು. ೮. ಭದ್ರಾಶ್ವ. ೯. ಕೇತುಮಾಲ. ಇವರೇ ಆ ಒಂಬತ್ತುಜನ ಮಕ್ಕಳು. ಅವರ ದೇಶಗಳನ್ನು ಮುಂದೆ ಹೇಳುವೆನು, ಕೇಳಿರಿ.

೬–೮. ತಂದೆಯು ದಕ್ಷಿಣದಿಕ್ಕಿನ ಹೇಮವರ್ಷವನ್ನು ನಾಭಿಗೂ, ಹೇಮಕೂಟವರ್ಷವನ್ನು ಕಿಂಪುರುಷನಿಗೂ, ನಿಷಧವರ್ಷವನ್ನು ಹರಿಗೂ, ಇಲಾವೃತನಿಗೆ ಮಧ್ಯ ಮೇರುವರ್ಷವನ್ನೂ, ನೀಲಾಚಲವರ್ಷವನ್ನು ರಮ್ಯನಿಗೂ ಕೊಟ್ಟನು,

ಶ್ವೇತಂ ಯದುತ್ತರಂ ತಸ್ಮಾತ್ಪಿತ್ರಾ ದತ್ತಂ ಹಿರಣ್ಮತೇ ।
ಯದುತ್ತರಂ ಶೃಂಗವರ್ಷಂ ಪಿತಾ ತತ್ಕುರವೇ ದದೌ ॥ ೯ ॥

ವರ್ಷಂ ಮಾಲ್ಯವತಂ ಚಾಪಿ ಭದ್ರಾಶ್ವಸ್ಯ ನ್ಯವೇದಯತ್ ।
ಗಂಧಮಾದನ ವರ್ಷಂ ತು ಕೇತುಮಾಲಾಯ ದತ್ತವಾನ್ ॥೧೦॥

ಇತ್ಯೇತಾನಿ ಮಹಾಂತೀಹ ನವವರ್ಷಾಣಿ ಭಾಗಶಃ ।
ಆಗ್ನೀಧ್ರಸ್ತೇಷು ವರ್ಷೇಷು ಪುತ್ರಾಂಸ್ತಾನಭಿಷಿಚ್ಯ ವೈ ॥೧೧॥

ಯಥಾಕ್ರಮಂ ಸ ಧರ್ಮಾತ್ಮಾ ತತಸ್ತು ತಪಸಿ ಸ್ಥಿತಃ ।
ತಪಸಾ ಭಾವಿತಶ್ಚೈವ ಸ್ವಾಧ್ಯಾಯ ನಿರತಸ್ತ್ವಭೂತ್ ॥೧೨॥

ಸ್ವಾಧ್ಯಾಯ ನಿರತಃ ಪಶ್ಚಾಚ್ಛಿವ ಧ್ಯಾನ ಪರಸ್ತ್ವಭೂತ್ ।
ಯಾನಿ ಕಿಂಪುರುಷಾದ್ಯಾನಿ ವರ್ಷಾಣ್ಯಷ್ಟೌ ಶುಭಾನಿ ಚ ॥೧೩॥

ತೇಷಾಂ ಸ್ವಭಾವತಃ ಸಿದ್ಧಿಃ ಸುಖಪ್ರಾಯಾ ಹ್ಯಯತ್ನತಃ ।
ವಿಪರ್ಯಯೋ ನ ತೇಷ್ವಸ್ತಿ ಜರಾಮೃತ್ಯು ಭಯಂ ನ ಚ ॥೧೪॥

---

೯-೧೦. ಉತ್ತರ ದಿಕ್ಕಿನ ಶ್ವೇತವರ್ಷವನ್ನು ಹಿರಣ್ಮಂತನಿಗೂ, ಶೃಂಗವರ್ಷವನ್ನು ಕುರುವಿಗೂ, ಮಾಲ್ಯವಂತವರ್ಷವನ್ನು ಭದ್ರಾಶ್ವನಿಗೂ, ಗಂಧಮಾದನವರ್ಷವನ್ನು ಕೇತುಮಾಲನಿಗೂ, ತಂದೆಯು ಕೊಟ್ಟನು.

೧೧-೧೨. ದೊಡ್ಡದಾದ ಈ ಒಂಬತ್ತು ವರ್ಷಭಾಗಗಳಿಗೆ ತನ್ನ ಒಂಬತ್ತುಜನ ಮಕ್ಕಳನ್ನು ರಾಜರನ್ನಾಗಿಮಾಡಿ ಅವರಿಗೆ ಪಟ್ಟಾಭಿಷೇಕವನ್ನು ಮಾಡಿ ಆ ಆಗ್ನೀಧ್ರರಾಜನು ತಪಸ್ಸನ್ನು ಮಾಡಿ, ಅದರಿಂದ ಪಾಪವನ್ನು ಕಳೆದುಕೊಳ್ಳಲು ವೇದಾಧ್ಯಯನವನ್ನು ಮಾಡುತ್ತಾ ಶಿವಧ್ಯಾನಾಸಕ್ತನಾಗಿದ್ದನು.

೧೩-೧೪. ಕಿಂಪುರುಷವರ್ಷ ಮೊದಲಾದ ಎಂಟುವರ್ಷಗಳು ಶುಭವಾದವುಗಳು. ಆ ವರ್ಷಗಳಲ್ಲಿರುವ ಜನರಿಗೆ ಸ್ವಾಭಾವಿಕವಾಗಿ ಇಷ್ಟಾರ್ಥಗಳುಂಟಾಗುವುವು. ಅವರಿಗೆ ಪ್ರಯತ್ನವಿಲ್ಲದೇ ಸುಖವು ಲಭಿಸುವುದು. ಜನಗಳಲ್ಲಿ ಒಬ್ಬರು ಹೆಚ್ಚು, ಒಬ್ಬರು ಕಡಿಮೆ ಎಂಬ ಭಾವಗಳಿಲ್ಲ. ಅವರಿಗೆ ಮುಪ್ಪು ಮರಣಗಳ ಭಯವಿಲ್ಲ.

ಧರ್ಮಾಧರ್ಮೌ ನ ತೇಷ್ವಾಸ್ತಾಂ ನೋತ್ತಮಾಧಮ ಮಧ್ಯಮಾಃ ।
ನ ತೇಷ್ವಸ್ತಿ ಯುಗಾವಸ್ಥಾ ಕ್ಷೇತ್ರೇಷ್ವಷ್ಟಸು ಸರ್ವತಃ ॥೧೫॥

ರುದ್ರಕ್ಷೇತ್ರೇ ಮೃತಾಶ್ಚೈವ ಜಂಗಮಾಃ ಸ್ಥಾವರಾ ಸ್ತಥಾ ।
ಭಕ್ತಾಃ ಪ್ರಾಸಂಗಿಕಾಶ್ಚಾಪಿ ತೇಷು ಕ್ಷೇತ್ರೇಷು ಯಾಂತಿ ತೇ ॥೧೬॥

ತೇಷಾಂ ಹಿತಾಯ ರುದ್ರೇಣ ಚಾಷ್ಟಕ್ಷೇತ್ರಂ ವಿನಿರ್ಮಿತಂ ।
ತತ್ರ ತೇಷಾಂ ಮಹಾದೇವಃ ಸಾನ್ನಿಧ್ಯಂ ಕುರುತೇ ಸದಾ ॥೧೭॥

ದೃಷ್ಟ್ವಾ ಹೃದಿ ಮಹಾದೇವಂ ಅಷ್ಟಕ್ಷೇತ್ರ ನಿವಾಸಿನಃ ।
ಸುಖಿನಃ ಸರ್ವದಾ ತೇಷಾಂ ಸ ಏವೇಹ ಪರಾಗತಿಃ ॥೧೮॥

ನಾಭೇರ್ನಿಸರ್ಗಂ ಪಕ್ಷ್ಯಾಮಿ ಹಿಮಾಂಕೇಽಸ್ಮಿನ್ನಿಭೋಧತ ।
ನಾಭಿಸ್ತ್ವಜನಯತ್ಪುತ್ರಂ ಮೇರುದೇವ್ಯಾಂ ಮಹಾಮತಿಃ ॥೧೯॥

---

೧೫–೧೬. ಆ ವರ್ಷಗಳಲ್ಲಿ ಧರ್ಮಾಧರ್ಮಗಳ ಗೊಂದಲವಿಲ್ಲ. ಜನರಲ್ಲಿ ಉತ್ತಮಾಧಮ ಮಧ್ಯಮವೆಂಬ ಪಕ್ಷಪಾತವಿಲ್ಲ. ಆ ಎಂಟು ಕ್ಷೇತ್ರಗಳಲ್ಲಿ ಯುಗಧರ್ಮಗಳೂ, ಇರುವುದಿಲ್ಲ. ರುದ್ರಕ್ಷೇತ್ರದಲ್ಲಿ ಮರಣ ಹೊಂದಿದ ಸ್ಥಾವರಜಂಗಮ ಪ್ರಾಣಿಗಳೂ, ಭಕ್ತರೂ ಮತ್ತೊಬ್ಬರ ಸಂಬಂಧದಿಂದ ಈ ಕ್ಷೇತ್ರಗಳಿಗೆ ಹೋಗುವರೂ, ಇವರ ಮತ್ತು,

೧೭–೧೮. ಅಲ್ಲಿರುವ ಪ್ರಜೆಗಳ ಹಿತಕ್ಕಾಗಿ ರುದ್ರನು ಎಂಟು ಕ್ಷೇತ್ರಗಳನ್ನು ನಿರ್ಮಿಸಿದನು. ಆ ಕ್ಷೇತ್ರಗಳಲ್ಲಿ ಮಹಾದೇವನು ಯಾವಾಗಲೂ, ಸನ್ನಿಹಿತನಾಗಿರುವನು. ಅಲ್ಲಿಯ ನಿವಾಸಿಗಳು ತಮ್ಮ ಮನಸ್ಸಿನಲ್ಲಿ ಮಹಾದೇವನ ದರ್ಶನವನ್ನು ಮಾಡಿ ಯಾವಾಗಲೂ ಸುಖವುಳ್ಳವರಾಗಿರುವರು. ಈ ಭೂಲೋಕದಲ್ಲಿ ಆ ಪರಮೇಶ್ವರನೇ ಸಕಲರಿಗೂ ದಿಕ್ಕಾಗಿರುವನು.

೧೯–೨೦. ಹಿಮವತ್ಪರ್ವತವೇ ಗುರುತಾಗಿ ಉಳ್ಳ, ಈ ಭೂಮಿಯಲ್ಲಿ ನಾಭಿರಾಜನ ವಂಶವನ್ನು ಹೇಳುವೆನು. ನಾಭಿರಾಜನಿಗೆ ಮೇರುದೇವಿಯೆಂಬ ಹೆಂಡಿತಿಯಲ್ಲಿ ಋಷಭನೆಂಬ ರಾಜನು ಜನಿಸಿದನು. ಅವನು

ಋಷಭಂ ಪಾರ್ಥಿವಶ್ರೇಷ್ಠಂ ಸರ್ವಕ್ಷತ್ರಸ್ಯ ಪೂಜಿತಂ ।
ಋಷಭಾದ್ಭರತೋ ಜಜ್ಞೇ ವೀರಃ ಪುತ್ರ ಶತಾಗ್ರಜಃ ॥೨೦॥
ಸೋಽಭಿಷಿಚ್ಯಾಥ ಋಷಭೋ ಭರತಂ ಪುತ್ರವತ್ಸಲಃ ।
ಜ್ಞಾನವೈರಾಗ್ಯ ಮಾಶ್ರಿತ್ಯ ಜಿತ್ವೇಂದ್ರಿಯ ಮಹೋರಗಾನ್ ॥೨೧॥
ಸರ್ವಾತ್ಮನಾಽಽತ್ಮನಿ ಸ್ಥಾಪ್ಯ ಪರಮಾತ್ಮಾನಮೀಶ್ವರಂ ।
ನಗ್ನೋ ಜಟೀ ನಿರಾಹಾರೋ ಚೀರೀ ಧ್ವಾಂತ ಗತೋ ಹಿ ಸಃ ॥೨೨॥
ನಿರಾಶಸ್ತ್ಯಕ್ತ ಸಂದೇಹಃ ಶೈವಮಾಪ ಪರಂ ಪದಂ ।
ಹಿಮಾದ್ರೇರ್ದಕ್ಷಿಣಂ ವರ್ಷಂ ಭರತಾಯ ನ್ಯವೇದಯತ್ । ॥೨೩॥
ತಸ್ಮಾತ್ತು ಭಾರತಂ ವರ್ಷಂ ತಸ್ಯ ನಾಮ್ನಾ ವಿದುರ್ಬುಧಾಃ ।
ಭರತಸ್ಯಾತ್ಮಜೋ ವಿದ್ವಾನ್ ಸುಮತಿರ್ನಾಮ ಧಾರ್ಮಿಕಃ ॥೨೪॥

---

ಸಕಲ ಕ್ಷತ್ರಿಯರಿಗೂ ಪೂಜ್ಯನಾದವನು. ಆ ಋಷಭರಾಜನಿಗೆ ಹುಟ್ಟಿದ ನೂರುಜನ ಮಕ್ಕಳುಗಳಲ್ಲಿ ಶೂರನಾದ ಭರತನೆಂಬುವನು ಹಿರಿಯ ಮಗನು.

೨೧-೨೨. ಮಗನ ಮೇಲೆ ಪ್ರೀತಿಯುಳ್ಳ ಋಷಭನು ಭರತನಿಗೆ ಪಟ್ಟಾಭಿಷೇಕವನ್ನು ಮಾಡಿ ತಾನು ಜ್ಞಾನವೈರಾಗ್ಯಗಳನ್ನು ಪಡೆದು ಇಂದ್ರಿಯಗಳೆಂಬ ಸರ್ಪಗಳನ್ನು ಜಯಿಸಿ ತನ್ನ ಮನಸ್ಸಿನಲ್ಲಿ ಪರಮಾತ್ಮನಾದ ಈಶ್ವರನನ್ನು ನೆಲೆಗೊಳಿಸಿ ಆಹಾರವನ್ನು ಬಿಟ್ಟು ಜಟೆಯನ್ನು ಧರಿಸಿ ದಿಗಂಬರನಾಗಿ ಅಜ್ಞಾನವನ್ನು ಕಳೆದುಕೊಂಡನು.

೨೩. ಆ ಋಷಭರಾಜನು ಸಮಸ್ತ ಆಸೆಗಳನ್ನೂ ಬಿಟ್ಟು ಸಂದೇಹಗಳನ್ನೆಲ್ಲವನ್ನೂ ಕಳೆದುಕೊಂಡು ಶಿವಸಂಬಂಧವಾದ ಪರಮಪದವನ್ನು ಪಡೆದನು. ಹಿಮವತ್ಪರ್ವತದ ದಕ್ಷಿಣ ದಿಕ್ಕಿನ ದೇಶವನ್ನು ಭರತನಿಗೆ ಕೊಟ್ಟನು. ಆದುದರಿಂದ ಈ ದೇಶಕ್ಕೆ ಭಾರತವರ್ಷವೆಂದು ಹೆಸರಾಯಿತು.

೨೪-೨೫. ಭರತನಿಗೆ ಸುಮತಿ ಎಂಬ ವಿದ್ಯಾವಂತನೂ, ಧಾರ್ಮಿಕನೂ ಆದ ಮಗನಿದ್ದನು. ಭರತನು ಆ ರಾಜ್ಯವನ್ನು ಮಗನಿಗೆ ಕೊಟ್ಟು,

**ಬಭೂವ ತಸ್ಮಿಂಸ್ತದ್ರಾಜ್ಯಂ ಭರತಃ ಸನ್ಯವೇಶಯಂತ್ ।**
**ಪುತ್ರಸಂಕ್ರಾಮಿತ ಶ್ರೀಕೋ ವನಂ ರಾಜಾ ವಿವೇಶ ಸಃ ॥೨೫॥**

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಭರತವರ್ಷ ಕಥನಂ ನಾಮ ಸಪ್ತಚತ್ವಾರಿಂಶೋಽಧ್ಯಾಯಃ

---

ತಾನು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ತಪಸ್ಸಿಗೆಂದು ವನವನ್ನು ಪ್ರವೇಶಿಸಿದನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಭಾರತವರ್ಷದ ಅರ್ಥವನ್ನೂ ವಿವರಗಳನ್ನೂ ತಿಳಿಸುವ ನಲವತ್ತೇಳನೆಯ ಅಧ್ಯಾಯವು ಮುಗಿದುದು.



ಅಥ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ
ಅಷ್ಟಚತ್ವಾರಿಂಶೋಽಧ್ಯಾಯಃ

ಅಷ್ಟಚತ್ವಾರಿಂಶಕೇ ಚ ಮೇರೋರ್ಮಾನಾದಿ ಸರ್ವತಃ ।
ಪುರ್ಯಷ್ಟಕಂ ತ್ರಿಮೂರ್ತೀನಾಂ ವಿಮಾನಾದಿಕ ಮುಚ್ಯತೇ ॥

॥ ಸೂತ ಉವಾಚ ॥

ಅಸ್ಯ ದ್ವೀಪಸ್ಯ ಮಧ್ಯೇ ತು ಮೇರುರ್ನಾಮ ಮಹಾಗಿರಿಃ ।
ನಾನಾರತ್ನಮಯೈಃ ಶೃಂಗೈಃ ಸ್ಥಿತಃ ಸ್ಥಿತಿಮತಾಂ ವರಃ ॥ ೧ ॥

ಚತುರಾಶೀತಿಸಾಹಸ್ರ ಮುತ್ಸೇಧೇನ ಪ್ರಕೀರ್ತಿತಃ ।
ಪ್ರವಿಷ್ಟಃ ಷೋಡಶಾಧಸ್ತಾದ್ವಿಸ್ತೃತಃ ಷೋಡಶೈವ ತು ॥ ೨ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನಲವತ್ತೆಂಟನೆಯ ಅಧ್ಯಾಯವು

(ನಲವತ್ತೆಂಟನೆಯ ಅಧ್ಯಾಯದಲ್ಲಿ ಮೇರುಪರ್ವತಗಳೇ ಮೊದಲಾದವುಗಳ ಅಳತೆಯನ್ನೂ ದಿಕ್ಪಾಲಕರ ಎಂಟು ಪಟ್ಟಣಗಳನ್ನೂ, ತ್ರಿಮೂರ್ತಿಗಳ ವಿಮಾನಾದಿಗಳನ್ನೂ ವಿವರಿಸಲಾಗುವುದು.)

೧. ಸೂತನು ಹೇಳಿದನು : ಈ ಜಂಬೂದ್ವೀಪದ ನಡುವೆ ಮೇರುವೆಂಬ ದೊಡ್ಡ ಪರ್ವತವು ಬಗೆಬಗೆಯ ರತ್ನಗಳಿಂದ ತುಂಬಿದ ಶಿಖರಗಳಿಂದ ಕೂಡಿ ಸ್ಥಿರವಾಗಿರುವುದು.

೨. ಆ ಮೇರುಪರ್ವತದ ಎತ್ತರವು ಎಂಬತ್ತುನಾಲ್ಕು ಸಾವಿರ ಯೋಜನವು. ಹದಿನಾರುಸಾವಿರ ಯೋಜನ ಪ್ರಮಾಣ ಭೂಮಿಯ ಕೆಳಭಾಗಕ್ಕೆ ಹೋಗಿರುವುದು. ಪರ್ವತದ ಅಗಲವು ಹದಿನಾರು ಸಾವಿರ ಯೋಜನವು.

ಶರಾವವತ್ಸಂಸ್ಥಿತತ್ವಾದ್ದ್ವಾತ್ರಿಂಶನ್ಮೂರ್ಧ್ನಿ ವಿಸ್ತೃತಃ ।
ವಿಸ್ತಾರಾತ್ರಿಗುಣಶ್ಚಾಸ್ಯ ಪರಿಣಾಹೋಽನುಮಂಡಲಃ ॥ ೩ ॥
ಹೈಮೀಕೃತೋ ಮಹೇಶಸ್ಯ ಶುಭಾಂಗ ಸ್ಪರ್ಶನೇನ ಚ ।
ಧತ್ತೂರಪುಷ್ಪಸಂಕಾಶಃ ಸರ್ವದೇವ ನಿಕೇತನಃ ॥ ೪ ॥
ಕ್ರೀಡಾಭೂಮಿಶ್ಚ ದೇವಾನಾ ಮನೇಕಾಶ್ಚರ್ಯ ಸಂಯುತಃ ।
ಲಕ್ಷಯೋಜನ ಆಯಾಮ ಸ್ತಸ್ಯೈವಂ ತು ಮಹಾಗಿರೇಃ ॥ ೫ ॥
ತತಃ ಷೋಡಶಸಾಹಸ್ರಂ ಯೋಜನಾನಿ ಕ್ಷಿತೇರಧಃ ।
ಶೇಷಂ ಚೋಪರಿ ವಿಪ್ರೇಂದ್ರಾ ಧರಾಯಾಸ್ತಸ್ಯ ಶೃಂಗಿಣಃ ॥ ೬ ॥
ಮೂಲಾಯಾಮ ಪ್ರಮಾಣಂ ತು ವಿಸ್ತಾರಾನ್ಮೂಲತೋ ಗಿರೇಃ ।
ಊರ್ಧ್ವವಿಸ್ತಾರ ಮಸ್ಯೈವ ದ್ವಿಗುಣಂ ಮೂಲತೋ ಗಿರೇಃ ॥ ೭ ॥

---

೩. ಆ ಪರ್ವತವು ಮೇಲುಭಾಗದಲ್ಲಿ ತಟ್ಟೆಯಂತೆ ಇರುವುದರಿಂದ ಅದರ ವಿಸ್ತಾರವು ಮೂವತ್ತೆರಡುಸಾವಿರ ಯೋಜನಗಳಾಗಿರುವುದು. ಆ ವಿಸ್ತಾರದ ಮೂರರಷ್ಟು ಎಂದರೆ ತೊಂಬತ್ತಾರುಸಾವಿರ ಯೋಜನ ಸುತ್ತಳತೆಯಿರುವುದು.

೪-೫. ಆ ಮೇರುಪರ್ವತವು ಮಹೇಶ್ವರನ ಶುಭಕರವಾದ ಅಂಗದ ಸ್ಪರ್ಶದಿಂದ ಚಿನ್ನವಾಗಿರುವುದು. ದತ್ತೂರಿ ಹೂವಿನಂತೆ ಪ್ರಕಾಶಮಾನವಾಗಿ ಸಕಲ ದೇವತೆಗಳ ವಿಹಾರಸ್ಥಾನವಾಗಿರುವುದು. ಅನೇಕ ಆಶ್ಚರ್ಯಕರಗಳಾದ ಪ್ರದೇಶಗಳಿಂದ ಕೂಡಿ ದೇವತೆಗಳಿಗೆ ಆಟದ ಭೂಮಿಯಾಗಿರುವುದು. ಆ ಪರ್ವತದ ಒಟ್ಟು ವಿಸ್ತೀರ್ಣವು ಒಂದು ಲಕ್ಷಯೋಜನವಿರುವುದು.

೬. ಆ ಪರ್ವತದಲ್ಲಿ ಹದಿನಾರುಸಾವಿರ ಯೋಜನದ ಅಳತೆಯ ಭಾಗವು ಭೂಮಿಯಿಂದ ಕೆಳಭಾಗಕ್ಕೆ ಹೋಗಿರುವುದು. ಮಿಕ್ಕಭಾಗವು ಭೂಮಿಯಿಂದ ಮೇಲುಭಾಗಕ್ಕಿರುವುದು ಎಂದು ಹೇಳುವರು.

೭. ಆ ಪರ್ವತದ ಬುಡದ ಉದ್ದವು ಎಷ್ಟಿರುವುದೋ ಅದರ ಎರಡರಷ್ಟು ವಿಸ್ತಾರವು ಬುಡದಿಂದ ಮೇಲುಭಾಗಕ್ಕಿರುವುದು ಎಂದು ತಿಳಿದವರು ಹೇಳುವರು.

ಪೂರ್ವತಃ ಪದ್ಮರಾಗಾಭೋ ದಕ್ಷಿಣೇ ಹೇಮಸನ್ನಿಭಃ ।
ಪಶ್ಚಿಮೇ ನೀಲಸಂಕಾಶ ಉತ್ತರೇ ವಿದ್ರುಮಪ್ರಭಃ ॥ ೮ ॥
ಅಮರಾವತೀ ಪೂರ್ವಭಾಗೇ ನಾನಾಪ್ರಾಸಾದ ಸಂಕುಲಾ ।
ನಾನಾದೇವಗಣೈಃ ಕೀರ್ಣಾ ಮಣಿಜಾಲ ಸಮಾವೃತಾ ॥ ೯ ॥
ಗೋಪುರೈರ್ವಿವಿಧಾಕಾರೈ ಹೇಮರತ್ನ ವಿಭೂಷಿತೈಃ ।
ತೋರಣೈರ್ಹೇಮ ಚಿತ್ರೈಸ್ತು ಮಣಿಕ್ಲಪ್ತೈಃ ಪಥಿ ಸ್ಥಿತೈಃ ॥೧೦॥
ಸಲ್ಲಾಪಾಲಾಪ ಕುಶಲೈಃ ಸರ್ವಾಭರಣ ಭೂಷಿತೈಃ ।
ಸ್ತನಭಾರವಿನಮ್ರೈಶ್ಚ ಮದಘೂರ್ಣಿತ ಲೋಚನೈಃ ॥೧೧॥
ಸ್ತ್ರೀಸಹಸ್ರೈಃ ಸಮಾಕೀರ್ಣಾ ಚಾಪ್ಸರೋಭಿಃ ಸಮಂತತಃ ।
ದೀರ್ಘಿಕಾಭಿ ರ್ವಿಚಿತ್ರಾಭಿಃ ಫುಲ್ಲಾಂಭೋರುಹ ಸಂಕುಲೈಃ ॥೧೨॥

---

೮. ಆ ಪರ್ವತವು ಪೂರ್ವದಿಕ್ಕಿನಲ್ಲಿ ಪದ್ಮರಾಗ ರತ್ನದ ಕಾಂತಿಯಿಂದಲೂ, ದಕ್ಷಿಣದಿಕ್ಕಿನಲ್ಲಿ ಚಿನ್ನದ ಕಾಂತಿಯಿಂದಲೂ, ಪಶ್ಚಿಮದಲ್ಲಿ ನೀಲರತ್ನದ ಕಾಂತಿಯಿಂದಲೂ, ಉತ್ತರದಿಕ್ಕಿನಲ್ಲಿ ಹವಳದ ಕಾಂತಿಯಿಂದಲೂ, ಪ್ರಕಾಶಿಸುತ್ತಿರುವುದು.

೯. ಆ ಪರ್ವತದ ಪೂರ್ವದಿಕ್ಕಿನಲ್ಲಿ ಇಂದ್ರನ ರಾಜಧಾನಿಯಾದ ಅಮರಾವತೀ ಪಟ್ಟಣವು ಬಗೆಬಗೆಯ ಉಪ್ಪರಿಗೆ ಮನೆಗಳಿಂದಲೂ, ದೇವತೆಗಳ ಗುಂಪಿನಿಂದಲೂ, ಕೂಡಿದುದಾಗಿ ರತ್ನಗಳ ಸಮೂಹಗಳಿಂದ ತುಂಬಿರುವುದು.

೧೦. ಬಗೆಬಗೆಯ ಆಕಾರಗಳುಳ್ಳ ರತ್ನಗಳಿಂದಲೂ, ಮಣಿಗಳಿಂದಲೂ, ಅಲಂಕಾರವಾಗಿರುವ ಗೋಪುರಗಳಿಂದಲೂ, ಚಿನ್ನದಿಂದಲೂ, ರತ್ನಗಳಿಂದಲೂ, ಚಿತ್ರತರವಾದ ಕೆಲಸಗಳನ್ನು ಮಾಡಿದ ತೋರಣಗಳಿಂದಲೂ ಪ್ರಕಾಶಿಸುತ್ತಿರುವುದು.

೧೧. ಪ್ರಿಯವಾಗಿ ಮಾತನಾಡುವುದರಲ್ಲಿ ಕುಶಲರಾದ, ಎಲ್ಲ ಬಗೆಯ ಒಡವೆಗಳನ್ನೂ ಧರಿಸಿರುವ, ಸ್ತನಗಳ ಭಾರದಿಂದ ಬಗ್ಗಿದ, ಮದದಿಂದ ಕಾಂತಿಯುಕ್ತವಾದ ಕಣ್ಣುಗಳುಳ್ಳ, ಅನೇಕ ಅಪ್ಸರಸ್ತ್ರೀಯರಿಂದ ತುಂಬಿರುವುದು.

೧೨-೧೩. ಅರಳಿದ ಕಮಲಗಳಿಂದ ತುಂಬಿದ ಸರೋವರಗಳಿಂದಲೂ, ಚಿತ್ರತರವಾದ ಚಿನ್ನದ ಮೆಟ್ಟಿಲುಗಳಿಂದ ಕೂಡಿದ ಕೊಳಗಳಿಂದಲೂ,

ಹೇಮಸೋಪಾನಸಂ ಯುಕ್ತೈಃ ಹೇಮಸೈಕತ ರಾಶಿಭಿಃ ।
ನೀಲೋತ್ಪಲೈ ಶ್ಚೋತ್ಪಲೈಶ್ಚ ಹೈಮ್ಯೈ ಶ್ಚಾಪಿ ಸುಗಂಧಿಭಿಃ ॥೧೩॥
ಏವಂ ವಿಧೈಸ್ತಟಾಕೈಶ್ಚ ನದೀಭಿಶ್ಚ ನದ್ಯೈರ್ಯುತಾ ।
ವಿರಾಜತೇ ಪುರೀ ಶುಭ್ರಾ ತಯಾಽಸೌ ಪರ್ವತಃ ಶುಭಃ ॥೧೪॥
ತೇಜಸ್ವಿನೀನಾಮ ಪುರೀ ಆಗ್ನೇಯ್ಯಾಂ ಪಾವಕಸ್ಯ ತು ।
ಅಮರಾವತೀ ಸಮಾ ದಿವ್ಯಾ ಸರ್ವಭೋಗ ಸಮನ್ವಿತಾ ॥೧೫॥
ವೈವಸ್ವತೀ ದಕ್ಷಿಣೇ ತು ಯಮಸ್ಯ ಯಮಿನಾಂ ವರಾಃ ।
ಭವನೈರಾವೃತಾ ದಿವ್ಯೈಃ ಜಾಂಬೂನ ದಮಯೈಃ ಶುಭೈಃ ॥೧೬॥
ನೈರ್ಋತೇ ಕೃಷ್ಣವರ್ಣಾ ಚ ತಥಾ ಶುದ್ಧವತೀ ಶುಭಾ ।
ತಾದೃಶೀ ಗಂಧ ವಂತೀ ಚ ವಾಯುವ್ಯಾಂ ದಿಶಿ ಶೋಭನಾ ॥೧೭॥

---

ಚಿನ್ನದ ಮರಳಿನ ರಾಶಿಗಳಿಂದಲೂ, ತಾವರೇ, ನೈದಿಲೆ, ಹೂಗಳ ಸುವಾಸನೆಗಳಿಂದಲೂ ಕೂಡಿರುವುದು.

೧೪. ಈ ರೀತಿಯಾದ ಕೆರೆಗಳಿಂದಲೂ, ಸಣ್ಣದೊಡ್ಡ ಹೊಳೆಗಳಿಂದಲೂ, ಕೂಡಿದ ಅಮರಾವತೀ ಪಟ್ಟಣವು ಆ ಮೇರುಪರ್ವತದ ಪೂರ್ವ ದಿಕ್ಕಿನಲ್ಲಿ ಮಂಗಳಕರವಾಗಿ ಪ್ರಕಾಶಿಸುತ್ತಿರುವುದು.

೧೫. ಆ ಪರ್ವತದ ಆಗ್ನೇಯ ದಿಕ್ಕಿನಲ್ಲಿ ಅಗ್ನೀದೇವನ ಪಟ್ಟಣವಾದ ತೇಜಸ್ವಿನೀ ನಗರವು ಅಮರಾವತೀ ಪಟ್ಟಣಕ್ಕೆ ಸಮಾನವಾದುದಾಗಿ ಸಕಲ ದಿವ್ಯ ಸುಖಸಾಧನಗಳಿಂದ ಕೂಡಿದುದಾಗಿರುವುದು.

೧೬. ಎಲೈ ಯೋಗಿಶ್ರೇಷ್ಠರೇ, ಕೇಳಿರಿ. ದಕ್ಷಿಣದಿಕ್ಕಿನಲ್ಲಿ ಯಮದೇವನ ವೈವಸ್ವತೀನಗರವು ಚಿನ್ನದಿಂದ ಮಾಡಿದ ದಿವ್ಯವಾದ ಮನೆಗಳಿಂದ ಕೂಡಿ ಪ್ರಕಾಶಿಸುತ್ತಿರುವುದು.

೧೭. ನೈಋುತ್ಯ ದಿಕ್ಕಿನಲ್ಲಿ ನಿರ್ಋತಿಲೋಕಪಾಲಕನ ಕೃಷ್ಣವರ್ಣಾ ನಗರಿಯೂ, ಪಶ್ಚಿಮದಲ್ಲಿ ವರುಣದೇವನ ಶುದ್ಧವತೀಪಟ್ಟಣವೂ, ವಾಯುವ್ಯ ದಿಕ್ಕಿನಲ್ಲಿ ವಾಯುದೇವನ ಗಂಧವತೀಪಟ್ಟಣವೂ, ಪ್ರಕಾಶಿಸುತ್ತಿರುವುದು.

ಮಹೋದಯಾಚೋತ್ತರೇ ಚ ಐಶಾನ್ಯಾಂ ತು ಯಶೋವತೀ ।
ಪರ್ವತಸ್ಯ ದಿಗಂತೇಷು ಶೋಭತೇ ದಿವಿ ಸರ್ವದಾ ॥೧೮॥

ಬ್ರಹ್ಮ ವಿಷ್ಣು ಮಹೇಶಾನಾಂ ತಥಾಽನ್ಯೇಷಾಂ ನಿಕೇತನಂ ।
ಸರ್ವಭೋಗಯುತಂ ಪುಣ್ಯಂ ದೀರ್ಘಿಕಾಭಿರ್ನಗೋತ್ತಮಂ ॥೧೯॥

ಸಿದ್ಧೈರ್ಯಕ್ಷೈಸ್ತು ಸಂಪೂರ್ಣಂ ಗಂಧರ್ವೈ ರ್ಮುನಿಪುಂಗವೈಃ ।
ತಥಾಽನ್ಯೈರ್ವಿವಿಧಾಕಾರೈ ರ್ಭೂತಸಂಘೈಶ್ಚತುರ್ವಿಧೈಃ ॥೨೦॥

ಗಿರೇರುಪರಿ ವಿಪ್ರೇಂದ್ರಾಃ ಶುದ್ಧಸ್ಫಟಿಕ ಸನ್ನಿಭಂ ।
ಸಹಸ್ರಭೌಮಂ ವಿಸ್ತೀರ್ಣಂ ವಿಮಾನಂ ವಾಮತಃ ಸ್ಥಿತಂ ॥೨೧॥

ತಸ್ಮಿನ್ಮಹಾಭುಜಃ ಶರ್ವಃ ಸೋಮಸೂರ್ಯಾಗ್ನಿ ಲೋಚನಃ ।
ಸಿಂಹಾಸನೇ ಮಣಿಮಯೇ ದೇವ್ಯಾಸ್ತೇ ಷಣ್ಮುಖೇನ ಚ ॥೨೨॥

---

೧೮. ಉತ್ತರದಿಕ್ಕಿನಲ್ಲಿ ಕುಬೇರನ ಮಹೋದಯಾ ನಗರಿಯೂ ಈಶಾನ್ಯದಲ್ಲಿ ರುದ್ರನ ಯಶೋವತೀ ನಗರಿಯೂ, ಆ ಮೇರು ಪರ್ವತದ ದಿಗಂತಗಳಲ್ಲಿ ದ್ಯುಲೋಕದಲ್ಲಿ ಯಾವಾಗಲೂ ಪ್ರಕಾಶಿಸುತ್ತಿರುವುವು.

೧೯–೨೦. ಆ ಉತ್ತಮವಾದ ಮೇರುಪರ್ವತವು ಬ್ರಹ್ಮಾ, ವಿಷ್ಣು, ಮಹೇಶ್ವರರ ಮತ್ತು ಇತರ ದೇವತೆಗಳ ಮನೆಗಳಿಂದಲೂ, ಸರೋವರಗಳಿಂದಲೂ, ಸಿದ್ಧರು, ಯಕ್ಷರು, ಗಂಧರ್ವರು, ಋಷಿಗಳು, ಇತರ ವಿಧವಾದ ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜ, ಪ್ರಾಣಿಗಳಿಂದಲೂ ಕೂಡಿ, ಸಕಲ ಸುಖಾನುಭವಗಳಿಗೆ ಆಶ್ರಯಸ್ಥಾನವಾಗಿ ಪುಣ್ಯಕರವಾಗಿರುವುದು.

೨೧. ಎಲೈ ಬ್ರಾಹ್ಮಣ ಶ್ರೇಷ್ಠರೇ, ಕೇಳಿರಿ:– ಆ ಮೇರು ಪರ್ವತದ ಮೇಲೆ ಪರಿಶುದ್ಧವಾದ ಸ್ಫಟಿಕಮಣಿಗೆ ಸಮಾನವಾದ ಕಾಂತಿಯಿಂದ ಕೂಡಿದ ಸಹಸ್ರ ಮಂಟಪವೆಂಬ ವಿಮಾನವು ಮಧ್ಯಭಾಗದಲ್ಲಿರುವುದು.

೨೨. ಆ ವಿಮಾನ ಮಧ್ಯಭಾಗದಲ್ಲಿರುವ ರತ್ನ ಖಚಿತವಾದ ಸಿಂಹಾಸನದಲ್ಲಿ ಚಂದ್ರಸೂರ್ಯಾಗ್ನಿಗಳೇ ಕಣ್ಣಾಗಿಉಳ್ಳ ಮಹಾಶೂರನಾದ ಶಿವನು ಪಾರ್ವತೀ ದೇವಿಯೊಡನೆಯೂ, ಷಣ್ಮುಖನೊಡನೆಯೂ, ಕೂಡಿ ವಾಸಿಸುತ್ತಿರುವನು.

ಹರೇಸ್ತದರ್ಧಂ ವಿಸ್ತೀರ್ಣಂ ವಿಮಾನಂ ತತ್ರ ಸೋಽಪಿ ಚ ।
ಪದ್ಮರಾಗಮಯಂ ದಿವ್ಯಂ ಪದ್ಮಜಸ್ಯ ಚ ದಕ್ಷಿಣೇ ॥೨೩॥

ತಸ್ಮಿನ್ ಶಕ್ರಸ್ಯ ವಿಪುಲಂ ಪುರಂ ರಮ್ಯಂ ಯಮಸ್ಯ ಚ ।
ಸೋಮಸ್ಯ ವರುಣಸ್ಯಾಥ ನಿರೃತೇಃ ಪಾವಕಸ್ಯಚ ॥೨೪॥

ವಾಯೋಶ್ಚೈವ ತು ರುದ್ರಸ್ಯ ಶರ್ವಾಲಯ ಸಮಂತತಃ ।
ತೇಷಾಂ ತೇಷಾಂ ವಿಮಾನೇಷು ದಿವ್ಯೇಷು ವಿವಿಧೇಷು ಚ ॥೨೫॥

ಈಶಾನ್ಯಾ ಮೀಶ್ವರಕ್ಷೇತ್ರೇ ನಿತ್ಯಾರ್ಚಾ ಚ ವ್ಯವಸ್ಥಿತಾ ।
ಸಿದ್ಧೇಶ್ವರೈಶ್ಚ ಭಗವಾನ್ ಶೈಲಾದಿಃ ಶಿಷ್ಯಸಂಮತಃ ॥೨೬॥

ಸನತ್ಕುಮಾರಃ ಸಿದ್ಧೈಸ್ತು ಸುಖಾಸೀನಃ ಸುರೇಶ್ವರಃ ।
ಸನಕಶ್ಚ ಸನಂದಶ್ಚ ಸದೃಶಾಶ್ಚ ಸಹಸ್ರಶಃ ॥೨೭॥

---

೨೩. ಎಡಭಾಗದಲ್ಲಿ ಶಿವನ ವಿಮಾನದ ಅರ್ಧಭಾಗದಷ್ಟು ವಿಸ್ತಾರವಾದ ಪದ್ಮರಾಗವೆಂಬ ಕೆಂಪುರತ್ನಗಳಿಂದ ಕೆಲಸಮಾಡಿದ ಹರಿಯ ವಿಮಾನವೂ, ಬಲಭಾಗದಲ್ಲಿ ಅಷ್ಟೇ ಅಳತೆಯ ಬ್ರಹ್ಮನ ವಿಮಾನವೂ, ಇರುವುದು.

೨೪–೨೫. ಆ ಶಿವನ ಮನೆಯ ಸುತ್ತಲೂ ಇರುವ ಇಂದ್ರ, ಯಮ, ವರುಣ, ಕುಬೇರ, ಅಗ್ನಿ, ನಿರೃತಿ, ವಾಯು, ಈಶಾನ, ಎಂಬ ದಿಕ್ಪಾಲಕರ ಪಟ್ಟಣಗಳಲ್ಲಿರುವ ಶ್ರೇಷ್ಠವಾದ ಬಗೆಬಗೆಯ ಅವರವರ ವಿಮಾನಗಳಲ್ಲಿಯೂ ಈಶಾನ್ಯದಿಕ್ಕಿನ ಈಶ್ವರಕ್ಷೇತ್ರದಲ್ಲಿ ಶಿವವಿಮಾನದಲ್ಲಿಯೂ ಕೂಡ ನಿತ್ಯ ಶಿವಪೂಜೆಯು ನಡೆಯುತ್ತಿರುವುದು.

೨೬–೨೭. ಅಲ್ಲಿ ಮಹಾಮಹಿಮನಾದ, ದೇವತೆಗಳಿಗೆಲ್ಲರಿಗೂ ಅಧಿಪತಿಯಾದ, ಶಿಷ್ಯರಿಗೆ ಪೂಜ್ಯನಾದ, ಶಿಲಾದಪುತ್ರನಾದ ನಂದೀಶ್ವರನು ಸಿದ್ಧರುಗಳಿಂದ ಕೂಡಿ ಮಂಡಿಸಿರುವನು. ಸನಕ, ಸನಂದನ, ಸನತ್ಕುಮಾರರೂ, ಇವರಿಗೆ ಸಮಾನರಾದ ಇನ್ನೂ ಅನೇಕ ಸಿದ್ಧರೂ, ನೆಲೆಸಿರುವರು.

ಯೋಗಭೂಮಿಃ ಕ್ವಚಿತ್ತಸ್ಮಿನ್ ಭೋಗಭೂಮಿಃ ಕ್ವಚಿತ್ಕ್ವಚಿತ್ ।
ಬಾಲಸೂರ್ಯ ಪ್ರತೀಕಾಶಂ ವಿಮಾನಂ ತತ್ರ ಶೋಭನಂ ॥೨೮॥

ಶೈಲಾದಿನಃ ಶುಭಂ ಚಾಸ್ತಿ ತಸ್ಮಿನ್ನಾಸ್ತೇ ಗಣೇಶ್ವರಃ ।
ಷಣ್ಮುಖಸ್ಯ ಗಣೇಶಸ್ಯ ಗಣಾನಾಂ ತು ಸಹಸ್ರಶಃ ॥೨೯॥

ಸುಯಶಾಯಾಃ ಸುನೇತ್ರಾಯಾಃ ಮಾತೄಣಾಂ ಮದನಸ್ಯ ಚ ।
ತಸ್ಯ ಜಂಬೂನದೀನಾಮ ಮೂಲಮಾವೇಷ್ಟ್ಯ ಸಂಸ್ಥಿತಾ ॥೩೦॥

ತಸ್ಯ ದಕ್ಷಿಣ ಪಾರ್ಶ್ವೇ ತು ಜಂಬೂವೃಕ್ಷಃ ಸುಶೋಭನಃ ।
ಅತ್ಯುಚ್ಛ್ರಿತಃ ಸುವಿಸ್ತೀರ್ಣಃ ಸರ್ವಕಾಲ ಫಲಪ್ರದಃ ॥೩೧॥

---

೨೮. ಆ ಮೇರುಪರ್ವತದಲ್ಲಿ ಕೆಲವೆಡೆಗಳಲ್ಲಿ ಯೋಗಾಭ್ಯಾಸ ಮಾಡುವವರ ವಾಸಯೋಗ್ಯವಾದ ಯೋಗಭೂಮಿಯೂ, ಸುಖಾನುಭವ ಮಾಡುವವರಿಗೆ ಯೋಗ್ಯವಾದ ಭೋಗಭೂಮಿಯೂ, ಇರುವುದು. ಅಲ್ಲಿ ಬಾಲಸೂರ್ಯನಂತೆ ಹೊಳೆಯುವ ಶಿಲಾದಪುತ್ರನಾದ ನಂದಿಯ ದಿವ್ಯವಾದ ವಿಮಾನವಿರುವುದು. ಅದರಲ್ಲಿ ಗಣೇಶ್ವರನಾದ ನಂದಿಯು ಕುಳಿತಿರುವನು.

೨೯. ಷಣ್ಮುಖ, ಗಣೇಶ, ಮುಂತಾದ ಸಾವಿರಾರು ಗಣಗಳ ಮತ್ತು ಸುಯಶ, ಸುನೇತ್ರ, ಎಂಬ ಪಾರ್ವತೀದೇವಿಯ ಸಖಿಯರ, ಸಪ್ತ ಮಾತೃಗಳ ಮತ್ತು ಮನ್ಮಥನ ವಿಮಾನಗಳೂ, ಇರುವುವು. ಆ ವಿಮಾನಗಳಲ್ಲಿ ಅವರವರು ಕುಳಿತಿರುವರು.

೩೦–೩೧. ಆ ಮೇರುಪರ್ವತದ ಬುಡವನ್ನು ಸುತ್ತಿಕೊಂಡು ಜಂಬೂ ನದಿಯು ಹರಿಯುತ್ತಿರುವುದು. ಆ ನದಿಯ ಬಲಗಡೆಯಲ್ಲಿ ಬಹಳ ಎತ್ತರವೂ ವಿಸ್ತಾರವೂ ಉಳ್ಳದ್ದಾಗಿ ಯಾವಾಗಲೂ ಹಣ್ಣಿನಿಂದ ತುಂಬಿ ಮನೋಹರವಾಗಿರುವ ಜಂಬೂವೃಕ್ಷವಿರುವುದು. (ನೇರಳೆಯ ಮರ)

ಮೇರೋಃ ಸಮಂತಾದ್ವಿಸ್ತೀರ್ಣಂ ಶುಭಂ ವರ್ಷಮಿಳಾವೃತಂ ।
ತತ್ರಜಂಬೂಫಲಾಹಾರಾಃ ಕೇಚಿಚ್ಚಾಮೃತಭೋಜನಾಃ ॥೩೨॥

ಜಂಬೂನದಸಮುಪ್ರಖ್ಯಾ ನಾನಾವರ್ಣಾಶ್ಚ ಭೋಗಿನಃ ।
ಮೇರುಪಾದಾಶ್ರಿತೋ ವಿಪ್ರಾ ದ್ವೀಪೋಽಯಂ ಮಧ್ಯಮಃ ಶುಭಃ ॥

ನವ ವರ್ಷಾನ್ವಿತ ಶ್ಚೈವ ನದೀನದ ಗಿರೀಶ್ವರೈಃ ।
ನವ ವರ್ಷಂ ತು ವಕ್ಷ್ಯಾಮಿ ಜಂಬೂ ದ್ವೀಪಂ ಯಥಾತಥಂ ॥೩೪॥
ವಿಸ್ತಾರಾನ್ಮಂಡಲಾಚ್ಚೈವ ಯೋಜನೈಶ್ಚ ನಿಭೋಧತ ॥೩೫॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಮೇರುಪರ್ವತಾದಿವರ್ಣನಂ ನಾಮ ಅಷ್ಟಾಚತ್ವಾರಿಂಶೋಽಧ್ಯಾಯಃ

---

೩೨. ಮೇರುಪರ್ವತದ ಸುತ್ತಲೂ, ಶುಭವಾದ ಇಳಾವೃತವೆಂಬ ವರ್ಷವು ವಿಸ್ತಾರವಾದುದಾಗಿರುವುದು. ಆ ದೇಶದಲ್ಲಿ ಜಂಬೂಫಲವನ್ನೇ ಆಹಾರವಾಗಿ ಉಪಯೋಗಿಸುವವರೂ, ಅಮೃತಪಾನ ಮಾಡಿದ ಕೆಲವರೂ, ಚಿನ್ನದ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದವರೂ, ಬಗೆಬಗೆಯ ಪುಣ್ಯದಫಲವನ್ನನುಭವಿಸುವ ಜನರೂ, ಇರುವರು.

೩೩–೩೫. ಎಲೈ ಋಷಿಗಳೇ, ಮೇರುಪರ್ವತದ ಪಾದದಲ್ಲಿರುವ ಈ ಜಂಬೂದ್ವೀಪವು ಮಧ್ಯದಲ್ಲಿದ್ದು ಮಂಗಳಕರವಾದುದಾಗಿರುವುದು. ಇದರಲ್ಲಿ, ನದಿಗಳೂ, ಪರ್ವತಗಳೂ, ಇವುಗಳಿಂದ ಕೂಡಿದ ಒಂಬತ್ತು ವರ್ಷಗಳೆಂಬ ಭಾಗಗಳಿರುವುವು. ಆ ಭಾಗಗಳನ್ನು ಮುಂದೆ ಹೇಳುವೆನು. ಈ ಜಂಬೂದ್ವೀಪದ ವಿಸ್ತಾರಗಳನ್ನೂ, ದೇಶಗಳನ್ನೂ, ಯೋಜನಗಳ ಲೆಕ್ಕದಿಂದ ಹೇಳುವೆನು, ಕೇಳಿರಿ.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಮೇರು ಪರ್ವತದವಿವರಗಳನ್ನು ವರ್ಣಿಸಿರುವ ನಲವತ್ತೆಂಟನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಏಕೋನಪಂಚಾಶತ್ತಮೋಽಧ್ಯಾಯಃ

**ಊನಪಂಚಾಶಕೇ ತ್ವಸ್ಮಿನ್ ಜಂಬೂದ್ವೀಪಸ್ಯ ವಿಗ್ರಹಃ ।**
**ವರ್ಷಾಕಾರಾಃ ಪರ್ವತಾಶ್ಚ ಕೀರ್ತ್ಯಂತೇ ವನವಾಸಿನಃ ॥**

**॥ ಸೂತ ಉವಾಚ ॥**

**ಶತಮೇಕಂ ಸಹಸ್ರಾಣಾಂ ಯೋಜನಾನಾಂ ಸ ತು ಸ್ಮೃತಃ ।**
**ಅನುದ್ವೀಪಂ ಸಹಸ್ರಾಣಾಂ ದ್ವಿಗುಣಂ ದ್ವಿಗುಣೋತ್ತರಂ ॥ ೧ ॥**
**ಪಂಚಾಶತ್ಕೋಟಿವಿಸ್ತೀರ್ಣಾ ಸಸಮುದ್ರಾ ಧರಾ ಸ್ಮೃತಾ ।**
**ದ್ವೀಪೈಶ್ಚ ಸಪ್ತಭಿರ್ಯುಕ್ತಾ ಲೋಕಾಲೋಕಾವೃತಾ ಶುಭಾ ॥ ೨ ॥**
**ನೀಲಸ್ತಥೋತ್ತರೇ ಮೇರೋಃ ಶ್ವೇತಸ್ತಸ್ಯೋತ್ತರೇ ಪುನಃ ।**
**ಶೃಂಗೀ ತಸ್ಯೋತ್ತರೇ ವಿಪ್ರಾ ಸ್ತ್ರಯಸ್ತೇ ವರ್ಷಪರ್ವತಾಃ ॥ ೩ ॥**

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನಲವತ್ತೊಂಬತ್ತನೆಯ ಅಧ್ಯಾಯವು.

(ನಲವತ್ತೊಂಬತ್ತನೆಯ ಅಧ್ಯಾಯದಲ್ಲಿ ಜಂಬೂದ್ವೀಪದ ಸ್ವರೂಪವೂ, ವರ್ಷಗಳ ಆಕಾರವೂ, ಪರ್ವತಗಳೂ, ಋಷಿಗಳೂ ಮುಂತಾದ ವಿಷಯಗಳನ್ನು ವರ್ಣನೆಮಾಡಲಾಗುವುದು.)

೧. ಆ ಜಂಬೂದ್ವೀಪವು ಲಕ್ಷಯೋಜನ ವಿಸ್ತೀರ್ಣವುಳ್ಳದ್ದು. ಅದರ ಸಮೀಪದಲ್ಲಿ ಪ್ಲಕ್ಷದ್ವೀಪವು ಅದರ ಎರಡರಷ್ಟು ವಿಸ್ತಾರ ಉಳ್ಳದ್ದು. ಮುಂದಿನ ದ್ವೀಪಗಳು ಹಿಂದಿನ ದ್ವೀಪದ ಎರಡರಷ್ಟು ವಿಸ್ತಾರಉಳ್ಳವುಗಳು.

೨. ಸಮುದ್ರಸಹಿತವಾದ ಭೂಮಿಯು ಐವತ್ತುಕೋಟಿ ಯೋಜನ ವಿಸ್ತಾರವಾದುದು. ಸಪ್ತದ್ವೀಪಗಳಿಂದ ಕೂಡಿ ಲೋಕಾಲೋಕವೆಂಬ ಪರ್ವತದಿಂದ ಸುತ್ತುವರಿಯಲ್ಪಟ್ಟಿರುವುದು.

೩. ಮೇರುವಿನ ಉತ್ತರದಿಕ್ಕಿನಲ್ಲಿ ನೀಲಪರ್ವತವೂ, ಅದಕ್ಕೆ ಉತ್ತರದಲ್ಲಿ ಶ್ವೇತಪರ್ವತವೂ, ಅದಕ್ಕೆ ಉತ್ತರದಲ್ಲಿ ಶೃಂಗಿಪರ್ವತವೂ, ಇರುವುವು. ಈ ಮೂರೂ ವರ್ಷಪರ್ವತಗಳು.

ಜಠರೋ ದೇವಕೂಟಶ್ಚ ಪೂರ್ವಸ್ಯಾಂ ದಿಶಿ ಪರ್ವತೌ ।
ನಿಷಧೋ ದಕ್ಷಿಣೇ ಮೇರೋಃ ತಸ್ಯ ದಕ್ಷಿಣತೋ ಗಿರಿಃ ।
ಹೇಮಕೂಟ ಇತಿ ಖ್ಯಾತೋ ಹಿಮವಾಂಸ್ತಸ್ಯ ದಕ್ಷಿಣೇ ॥ ೪ ॥
ಮೇರೋಃ ಪಶ್ಚಿಮತಶ್ಚೈವ ಪರ್ವತೌ ದ್ವೌ ಧರಾಧರೌ ।
ಮಾಲ್ಯವಾನ್ ಗಂಧಮಾದಶ್ಚ ದ್ವಾವೇತಾ ವುದಗಾಯತೌ ॥ ೫ ॥
ಏತೇ ಪರ್ವತರಾಜಾನಃ ಸಿದ್ಧಚಾರಣ ಸೇವಿತಾಃ ।
ತೇಷಾಮಂತರವಿಷ್ಕಂಭೋ ನವಸಾಹಸ್ರಮೇಕಶಃ ॥ ೬ ॥
ಇದಂ ಹೈಮವತಂ ವರ್ಷಂ ಭಾರತಂ ನಾಮ ವಿಶ್ರುತಂ ।
ಹೇಮಕೂಟಂ ಪರಂ ತಸ್ಮಾನ್ನಾಮ್ನಾ ಕಿಂಪುರುಷಂ ಸ್ಮೃತಂ ॥ ೭ ॥
ನೈಷಧಂ ಹೇಮಕೂಟಾತ್ತು ಹರಿವರ್ಷಂ ತದುಚ್ಯತೇ ।
ಹರಿವರ್ಷಾತ್ಪರಂ ಚೈವ ಮೇರೋಃ ಶುಭಮಿಲಾವೃತಂ ॥ ೮ ॥

---

೪. ಮೇರುವಿನ ಪೂರ್ವದಿಕ್ಕಿನಲ್ಲಿ ಜಠರ, ದೇವಕೂಟವೆಂಬ ಎರಡು ಪರ್ವತಗಳೂ, ದಕ್ಷಿಣದಿಕ್ಕಿನಲ್ಲಿ ನಿಷಧ, ಹೇಮಕೂಟ, ಹಿಮವಂತ ಎಂಬ ಪರ್ವತಗಳೂ ಇರುವುವು.

೫. ಮೇರುವಿನ ಪಶ್ಚಿಮದಿಕ್ಕಿನಲ್ಲಿ ಧರಾಧರ ಪರ್ವತಗಳೂ, ಮಾಲ್ಯವಂತ, ಗಂಧಮಾಧನ ವೆಂಬ ಎರಡು ಪರ್ವತಗಳು ಉತ್ತರ ದಿಕ್ಕಿನಲ್ಲಿಯೂ ವಿಸ್ತರಿಸಿಕೊಂಡಿರುವುವು.

೬. ಈ ದೊಡ್ಡ ಪರ್ವತಗಳಲ್ಲಿ ಸಿದ್ಧರೂ, ಚಾರಣರೂ ವಾಸ ವಾಗಿರುವರು. ಈ ಪರ್ವತಗಳ ಮಧ್ಯಪ್ರದೇಶವು ಪ್ರತಿಯೊಂದೂ ಒಂಬತ್ತುಸಾವಿರ ಯೋಜನ ವಿಸ್ತಾರ ಉಳ್ಳದ್ದಾಗಿರುವುದು.

೭–೮. ಹಿಮವತ್ಪರ್ವತದ ದಕ್ಷಿಣದಿಕ್ಕಿನ ಭೂ ಭಾಗವು ಭಾರತ ವರ್ಷವೆಂದು ಪ್ರಸಿದ್ಧವಾಗಿರುವುದು. ಇದರ ಉತ್ತರಕ್ಕೆ ಹೇಮಕೂಟ ಪರ್ವತಕ್ಕೆ ಸಂಬಂಧಿಸಿದ ಭೂಮಿಯು ಕಿಂಪುರುಷ ವರ್ಷವೆನಿಸುವುದು. ಇದರ ಉತ್ತರಕ್ಕೆ ನೈಷಧಪರ್ವತಕ್ಕೆ ಸಂಬಂಧಿಸಿದ ಭೂಭಾಗವು ಹರಿವರ್ಷ ವೆನಿಸುವುದು. ಈ ವರ್ಷದಿಂದ ಉತ್ತರಕ್ಕೆ ಮೇರುವಿಗೆ ಸಂಬಂಧಿಸಿದ ಭೂಮಿಯು ಇಲಾವೃತವರ್ಷವೆನಿಸುವುದು.

ಇಲಾವೃತಾತ್ಪರಂ ನೀಲಂ ರಮ್ಯಕಂ ನಾಮ ವಿಶ್ರುತಂ ।
ರಮ್ಯಾತ್ಪರತರಂ ಶ್ವೇತಂ ವಿಖ್ಯಾತಂ ತದ್ಧಿರಣ್ಮಯಂ ॥ ೯ ॥
ಹಿರಣ್ಮಯಾತ್ಪರಂ ಚಾಪಿ ಶೃಂಗೀ ಚೈವ ಕುರುಃ ಸ್ಮೃತಃ ।
ಧನುಃಸಂಸ್ಥೇ ತು ವಿಜ್ಞೇಯೇ ದ್ವೇ ವರ್ಷೇ ದಕ್ಷಿಣೋತ್ತರೇ ॥೧೦॥
ದೀರ್ಘಾಣಿ ತತ್ರ ಚತ್ವಾರಿ ಮಧ್ಯತಸ್ತದಿಲಾವೃತಂ ।
ಮೇರೋಃ ಪಶ್ಚಿಮಪೂರ್ವೇಣ ದ್ವೇ ತು ದೀರ್ಘೇತರೇ ಸ್ಮೃತೇ ॥
ಅರ್ವಾಕ್ತು ನಿಷಧಸ್ಯಾಥ ವೇದ್ಯರ್ಧಂ ಚೋತ್ತರಂ ಸ್ಮೃತಂ ।
ವೇದ್ಯರ್ಧೇ ದಕ್ಷಿಣೇ ತ್ರೀಣಿ ವರ್ಷಾಣಿ ತ್ರೀಣಿ ಚೋತ್ತರೇ ॥೧೨॥
ತಯೋರ್ಮಧ್ಯೇ ಚ ವಿಜ್ಞೇಯಂ ಮೇರುಮಧ್ಯಮಿಳಾವೃತಂ ।
ದಕ್ಷಿಣೇನ ತು ನೀಲಸ್ಯ ನಿಷಧಸ್ಯೋತ್ತರೇಣ ತು ॥೧೩॥

---

೯. ಇಲಾವೃತವರ್ಷದಿಂದ ಮುಂದೆ ನೀಲಪರ್ವತ ಸಂಬಂಧಿಯಾದ ಭೂಮಿಗೆ ರಮ್ಯಕವರ್ಷವೆಂದೂ, ರಮ್ಯಕವರ್ಷದಿಂದ ಮುಂದೆ ಶ್ವೇತಪರ್ವತದ ಸಂಬಂಧಿಯಾದ ಭೂಮಿಗೆ ಹಿರಣ್ಮಯವರ್ಷವೆಂದೂ, ಹಿರಣ್ಮಯವರ್ಷದಿಂದ ಮುಂದೆ ಶೃಂಗಪರ್ವತ ಸಂಬಂಧಿಯಾದ ಭೂಮಿಗೆ ಕುರುವರ್ಷವೆಂದೂ ಹೆಸರಿರುವುದು.

೧೦–೧೧. ಮೇರುವಿನ ದಕ್ಷಿಣ, ಮತ್ತು ಉತ್ತರದಲ್ಲಿರುವ ಎರಡು ವರ್ಷಗಳು ಧನುಸ್ಸಿನ ಆಕಾರವಾಗಿರುವುವು. ಮಧ್ಯದಲ್ಲಿರುವ ಇಲಾವೃತವರ್ಷವೂ, ಮಿಕ್ಕ ನಾಲ್ಕುವರ್ಷಗಳೂ, ಉದ್ದವಾಗಿರುವುವು. ಪಶ್ಚಿಮ ಮತ್ತು ಪೂರ್ವಗಳಲ್ಲಿರುವ ಎರಡುವರ್ಷಗಳು ಉದ್ದವಿಲ್ಲದವುಗಳಾಗಿರುವುವು. ( ತುಂಡಾಗಿರುವುವು. )

೧೨. ನಿಷಧಪರ್ವತದ ದಕ್ಷಿಣಕ್ಕೂ ಉತ್ತರಕ್ಕೂ ಇರುವ ಪ್ರದೇಶಗಳಿಗೆ ಅರ್ಧವೇದಿ ಎಂದು ಹೆಸರು. ಆ ಅರ್ಧವೇದಿಯಲ್ಲಿ ದಕ್ಷಿಣದಿಕ್ಕಿನಲ್ಲಿ ಮೂರುವರ್ಷಗಳೂ, ಉತ್ತರದಿಕ್ಕಿನಲ್ಲಿ ಮೂರುವರ್ಷಗಳೂ ಇರುವುವು.

೧೩. ಆ ಅರ್ಧವೇದಿಗಳ ನಡುವೆ ಮೇರುಪರ್ವತದ ಮಧ್ಯಭಾಗಕ್ಕೆ ಇಳಾವೃತವರ್ಷವೆಂದು ಹೆಸರಿರುವುದು. ಈ ಇಳಾವೃತವರ್ಷವೆಂಬುದು ನೀಲಪರ್ವತಕ್ಕೆ ದಕ್ಷಿಣದಿಕ್ಕಿನಲ್ಲಿಯೂ ನಿಷಧಪರ್ವತಕ್ಕೆ ಉತ್ತರದಿಕ್ಕಿನಲ್ಲಿಯೂ, ಇರುವುದು.

ಉದಗಾಯತೋ ಮಹಾಶೈಲೋ ಮಾಲ್ಯವಾನ್ನಾಮ ಪರ್ವತಃ ।
ಯೋಜನಾನಾಂ ಸಹಸ್ರೇ ದ್ವೇ ಉಪರಿಷ್ಟಾತ್ತು ವಿಸ್ತೃತಃ ॥೧೪॥
ಆಯಾಮತ ಶ್ಚತುಸ್ತ್ರಿಂಶ ತ್ಸಹಸ್ರಾಣಿ ಪ್ರಕೀರ್ತಿತಃ ।
ತಸ್ಯ ಪ್ರತೀಚ್ಯಾಂ ವಿಜ್ಞೇಯಃ ಪರ್ವತೋ ಗಂಧಮಾದನಃ ॥೧೫॥
ಆಯಾಮತಃ ಸ ವಿಜ್ಞೇಯೋ ಮಾಲ್ಯವಾನಿವ ವಿಸ್ತೃತಃ ।
ಜಂಬೂದ್ವೀಪಸ್ಯ ವಿಸ್ತಾರಾತ್ ಸಮೇನ ತು ಸಮಂತತಃ ॥೧೬॥
ಪ್ರಾಗಾಯತಾಃ ಸುಪರ್ವಾಣಃ ಷಡೇತೇ ವರ್ಷಪರ್ವತಾಃ ।
ಅವಗಾಢಾ ಶ್ಚೋಭಯತಃ ಸಮುದ್ರೌ ಪೂರ್ವಪಶ್ಚಿಮೌ ॥೧೭॥
ಹಿಮಪ್ರಾಯಸ್ತು ಹಿಮವಾನ್ ಹೇಮಕೂಟಸ್ತು ಹೇಮವಾನ್ ।
ತರುಣಾದಿತ್ಯಸಂಕಾಶೋ ಹೈರಣ್ಯೋ ನಿಷಧಃ ಸ್ಮೃತಃ ॥೧೮॥

---

೧೪. ಮಾಲ್ಯವಂತಪರ್ವತವು ಉತ್ತರದಿಕ್ಕಿಗೆ ಹಬ್ಬಿಕೊಂಡಿರುವುದು. ಅದರ ಮೇಲಿನ ಭಾಗವು ಎರಡು ಸಾವಿರ ಯೋಜನಗಳುಳ್ಳದ್ದಾಗಿರುವುದು. ಅಗಲದಲ್ಲಿ ಮೂವತ್ತನಾಲ್ಕುಸಾವಿರ ಯೋಜನಗಳುಳ್ಳದ್ದಾಗಿರುವುದು.

೧೫–೧೬. ಮಾಲ್ಯವಂತಪರ್ವತಕ್ಕೆ ಪಶ್ಚಿಮದಿಕ್ಕಿನಲ್ಲಿ ಗಂಧಮಾಧನ ಪರ್ವತವಿರುವುದು. ಅದು ಮಾಲ್ಯವತ್ಪರ್ವತದಷ್ಟೇ ವಿಸ್ತಾರವಾದುದು. ಜಂಬೂದ್ವೀಪದ ವಿಸ್ತಾರವನ್ನು ಈ ಪರ್ವತಗಳು ಸಮವಾಗಿ ಭಾಗ ಮಾಡಿಕೊಂಡು ಸುತ್ತಲೂ ಇರುವುವು.

೧೭. ಈ ಆರು ವರ್ಷಪರ್ವತಗಳೂ ಪೂರ್ವದಿಕ್ಕಿಗೆ ವಿಸ್ತರಿಸಿಕೊಂಡು ಒಳ್ಳೆಯ ಭಾಗಗಳುಳ್ಳವುಗಳಾಗಿ ಎರಡು ಕಡೆಗಳಲ್ಲೂ ಪೂರ್ವಪಶ್ಚಿಮ ಸಮುದ್ರಗಳಿಗೆ ಚಾಚಿಕೊಂಡಿರುವುವು.

೧೮–೨೦. ಹಿಮವತ್ಪರ್ವತದಲ್ಲಿ ಹಿಮವು ತುಂಬಿರುವುದು. ಹೇಮಕೂಟಪರ್ವದಲ್ಲಿ ಚಿನ್ನವಿರುವುದು. ನಿಷಧಪರ್ವತವು ಬಾಲಸೂರ್ಯನಂತೆ ಪ್ರಕಾಶಿಸುತ್ತಾ ಸುವರ್ಣಮಯವಾಗಿರುವುದು. ಮೇರುಪರ್ವತವು ಪದ್ಮರಾಗ, ಚಿನ್ನ, ನೀಲ, ರತ್ನ, ಹವಳ, ಈ ನಾಲ್ಕು ಬಣ್ಣಗಳಿಂದ

ಚತುರ್ವರ್ಣಃ ಸ ಸೌವರ್ಣೋ ಮೇರುಶ್ಶೋಧ್ವಾಯತಃ ಸ್ಮೃತಃ
ವೃತ್ತಾಕೃತಿಪರೀಣಾಹ ಶ್ಚತುರಸ್ರಃ ಸಮುತ್ಥಿತಃ ॥೧೯॥

ನೀಲಶ್ಚ ವೈಡೂರ್ಯಮಯಃ ಶ್ವೇತಃ ಶುಕ್ಲೋ ಹಿರಣ್ಮಯಃ ।
ಮಯೂರಬರ್ಹವರ್ಣಸ್ತು ಶಾತಕುಂಭ ಸ್ತ್ರಿಶೃಂಗವಾನ್ ॥೨೦॥

ಏವಂ ಸಂಕ್ಷೇಪತಃ ಪ್ರೋಕ್ತಾಃ ಪುನಃ ಶೃಣು ಗಿರೀಶ್ವರಾನ್ ।
ಮಂದರೋ ದೇವಕೂಟಶ್ಚ ಪೂರ್ವಸ್ಯಾಂ ದಿಶಿ ಪರ್ವತೌ ॥೨೧॥

ಕೈಲಾಸೋ ಗಂಧಮಾದಶ್ಚ ಹೇಮವಾಂ ಶ್ಚೈವ ಪರ್ವತೌ ।
ಪೂರ್ವತಶ್ಚಾಯತಾ ವೇತಾ ವರ್ಣವಾಂತರ್ವ್ಯವಸ್ಥಿತೌ ॥೨೨॥

ನಿಷಧಃ ಪಾರಿಯಾತ್ರಶ್ಚ ದ್ವಾವೇತೌ ವರಪರ್ವತೌ ।
ಯಥಾಪೂರ್ವೌ ತಥಾ ಯಾಮ್ಯಾ ವೇತೌ ಪಶ್ಚಿಮತಃ ಶ್ರಿತೌ ॥

ತ್ರಿಶೃಂಗೋ ಜಾರುಚಿಶ್ಚೈವ ಉತ್ತರೌ ವರಪರ್ವತೌ ।
ಪೂರ್ವತಶ್ಚಾ ಯತಾವೇತಾ ವರ್ಣವಾಂತರ್ವ್ಯವಸ್ಥಿತೌ ॥೨೪॥

---

ಕೂಡಿ ವಿಶೇಷ ಚಿನ್ನ ಉಳ್ಳದ್ದಾಗಿ ಎತ್ತರವಾಗಿರುವುದು. ಗುಂಡಾದ ಆಕೃತಿಯಿಂದ ಹಬ್ಬಿ ಮೇಲುಭಾಗದಲ್ಲಿ ಚಚ್ಚೌಕವಾಗಿ ವಿಸ್ತರಿಸಿರುವುದು. ನೀಲಪರ್ವತವು ವೈಡೂರ್ಯ ರತ್ನಗಳಿಂದ ತುಂಬಿರುವುದು. ಶ್ವೇತಪರ್ವತವು ಬೆಳ್ಳಗಿರುವುದಲ್ಲದೆ ಸುವರ್ಣವನ್ನು ವಿಶೇಷವಾಗಿ ಉಳ್ಳದ್ದಾಗಿರುವುದು. ತ್ರಿಶೃಂಗಪರ್ವತವು ನವಿಲಿನಗರಿಯ ಬಣ್ಣ ಉಳ್ಳದ್ದಾಗಿರುವುದು.

೨೧–೨೩. ಈ ರೀತಿಯಲ್ಲಿ ಸಂಕ್ಷೇಪವಾಗಿ ಪರ್ವತಗಳ ವಿಚಾರಗಳನ್ನು ಹೇಳಿದೆನು. ಮತ್ತೆ ಕೆಲವು ಪರ್ವತಗಳನ್ನು ಹೇಳುವೆನು. ಮಂದರ, ದೇವಕೂಟ ಈ ಎರಡೂ ಪೂರ್ವದಿಕ್ಕಿನ ಪರ್ವತಗಳು. ಕೈಲಾಸ, ಗಂಧಮಾದನಪರ್ವತಗಳೆರಡೂ ದಕ್ಷಿಣದಿಕ್ಕಿನವು. ನಿಷಧ, ಪಾರಿಯಾತ್ರಪರ್ವತಗಳೆರಡೂ ಪಶ್ಚಿಮದಿಕ್ಕಿನ ಪರ್ವತಗಳು.

೨೪. ತ್ರಿಶೃಂಗ, ಜಾರುಜಿ, ಎಂಬೆರಡು ಪರ್ವತಗಳು ಉತ್ತರದಿಕ್ಕಿನವು. ಪೂರ್ವದಿಕ್ಕಿನ ಪರ್ವತಗಳಂತೆ ಎಲ್ಲವೂ ಸಮುದ್ರದೊಳಕ್ಕೆ ಚಾಚಿಕೊಂಡಿರುವುವು. ಈ ಎಂಟು ಪರ್ವತಗಳನ್ನೂ ಎಲ್ಲೆಕಟ್ಟಿನ ಪರ್ವತಗಳೆಂದು ಬುದ್ಧಿವಂತರು ಹೇಳುವರು.

ಮರ್ಯಾದಾಪರ್ವತಾನೇತಾ ನಷ್ಟಾವಾಹುರ್ಮನೀಷಿಣಃ ।
ಯೋऽಸೌ ಮೇರುರ್ದ್ವಿಜಶ್ರೇಷ್ಠಾಃ ಪ್ರಾಂಶುಃ ಕನಕಪರ್ವತಃ ॥
ತಸ್ಯ ಪಾದಾಸ್ತು ಚತ್ವಾರಃ ಚತುರ್ದಿಕ್ಷು ನಗೋತ್ತಮಾಃ ।
ಯೈರ್ವಿಷ್ಟಬ್ಧಾ ನ ಚಲತಿ ಸಪ್ತದ್ವೀಪವತೀ ಮಹೀ ॥೨೬॥
ದಶಯೋಜನಸಾಹಸ್ರಮಾಯಾಮಸ್ತೇಷು ಪಠ್ಯತೇ ।
ಪೂರ್ವೇ ತು ಮಂದರೋ ನಾಮ ದಕ್ಷಿಣೇ ಗಂಧಮಾದನಃ ॥೨೭॥
ವಿಪುಲಃ ಪಶ್ಚಿಮೇ ಪಾರ್ಶ್ವೇ ಸುಪಾರ್ಶ್ವಶ್ಚೋತ್ತರೇ ಸ್ಮೃತಃ ।
ಮಹಾವೃಕ್ಷಾಃ ಸಮುತ್ಪನ್ನಾ ಶ್ಚತ್ವಾರೋ ದ್ವೀಪಕೇತವಃ ॥೨೮॥
ಮಂದರಸ್ಯ ಗಿರೇಃ ಶೃಂಗೇ ಮಹಾವೃಕ್ಷಃ ಸ ಕೇತುರಾಟ್ ।
ಪ್ರಲಂಬಶಾಖಾಶಿಖರಃ ಕದಂಬಶ್ಚೈತ್ಯಪಾದಪಃ ॥೨೯॥

---

೨೫–೨೬. ಎಲೈ ಋಷಿಗಳೇ, ಕೇಳಿರಿ: ಮೇರುಪರ್ವತವೆಂಬುದು ಎತ್ತರವಾದ ದೊಡ್ಡ ಚಿನ್ನದ ಪರ್ವತವು. ಅದರ ಪಾದದಲ್ಲಿ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ದೊಡ್ಡ ಪರ್ವತಗಳಿರುವುವು. ಅವುಗಳ ಸಂಬಂಧ ದಿಂದ ಸಪ್ತದ್ವೀಪಗಳಿಂದ ಕೂಡಿದ ಭೂಮಿಯು ಚಲಿಸದೇ ಸ್ಥಿರವಾಗಿರುವುದು.

೨೭. ಆ ನಾಲ್ಕುಪರ್ವತಗಳಲ್ಲಿ ಪ್ರತಿಯೊಂದು ಪರ್ವತವೂ ಹತ್ತು ಸಾವಿರ ಯೋಜನ ವಿಸ್ತಾರವುಳ್ಳದ್ದು. ಆ ಪರ್ವತಗಳಾವುವು? ಎಂದರೆ, ಪೂರ್ವದಲ್ಲಿ ಮಂದರ, ದಕ್ಷಿಣದಲ್ಲಿ ಗಂಧಮಾಧನ, ಪಶ್ಚಿಮದಲ್ಲಿ ವಿಪುಲ, ಉತ್ತರದಲ್ಲಿ ಸುಪಾರ್ಶ್ವ.

೨೮–೨೯. ನಾಲ್ಕು ದಿಕ್ಕಿನಲ್ಲಿರುವ ನಾಲ್ಕು ದ್ವೀಪಗಳಿಗೂ, ಧ್ವಜ ದಂತೆ ನಾಲ್ಕು ಮಹಾವೃಕ್ಷಗಳು ಹುಟ್ಟಿರುವುವು. ಪೂರ್ವದಿಕ್ಕಿನ ಮಂದರ ಪರ್ವತದಲ್ಲಿ ಕದಂಬವೆಂಬ ವೃಕ್ಷವು ದೊಡ್ಡ ಕೊಂಬೆಗಳಿಂದ ಕೂಡಿ ವೃಕ್ಷರಾಜನಾಗಿರುವುದು.

ದಕ್ಷಿಣಸ್ಯಾಪಿ ಶೈಲಸ್ಯ ಶಿಖರೇ ದೇವಸೇವಿತಾ ।
ಜಂಬೂಃ ಸದಾ ಪುಣ್ಯಫಲಾ ಸದಾ ಮಾಲ್ಯೋಪಶೋಭಿತಾ ॥೩೦॥

ಸಕೇತುರ್ದಕ್ಷಿಣೇ ದ್ವೀಪೇ ಜಂಬೂರ್ಲೋಕೇಷು ವಿಶ್ರುತಾ ।
ವಿಪುಲಸ್ಯಾಪಿ ಶೈಲಸ್ಯ ಪಶ್ಚಿಮೇ ಚ ಮಹಾತ್ಮನಃ ॥೩೧॥

ಸಂಜಾತಃ ಶಿಖರೇಽಶ್ವತ್ಥಃ ಸ ಮಹಾನ್ ಚೈತ್ಯಪಾದಪಃ ।
ಸುಪಾರ್ಶ್ವಸ್ಯೋತ್ತರಸ್ಯಾಪಿ ಶೃಂಗೇ ಜಾತೋ ಮಹಾದ್ರುಮಃ ॥

ನ್ಯಗ್ರೋಧೋ ವಿಪುಲಸ್ಕಂಧೋಽನೇಕಯೋಜನಮಂಡಲಃ ।
ತೇಷಾಂ ಚತುರ್ಣಾಂ ವಕ್ಷ್ಯಾಮಿ ಶೈಲೇಂದ್ರಾಣಾಂ ಯಥಾಕ್ರಮಂ॥

ಅಮಾನುಷ್ಯಾಣಿ ರಮ್ಯಾಣಿ ಸರ್ವಕಾಲರ್ತುಕಾನಿ ಚ ।
ಮನೋಹರಾಣಿ ಚತ್ವಾರಿ ದೇವಕ್ರೀಡನಕಾನಿ ಚ ॥೩೪॥

ವನಾನಿ ವೈ ಚತುರ್ದಿಕ್ಷು ನಾಮತಸ್ತು ನಿಬೋಧತ ।
ಪೂರ್ವೇ ಚೈತ್ರರಥಂ ನಾಮ ದಕ್ಷಿಣೇ ಗಂಧಮಾದನಂ ॥೩೫॥

---

೩೦. ದಕ್ಷಿಣದಿಕ್ಕಿನ ಗಂಧಮಾದನಪರ್ವತದ ಶಿಖರದಲ್ಲಿ ದೇವತೆಗಳು ಉಪಯೋಗಿಸುವ ಜಂಬೂವೃಕ್ಷವು ಪುಣ್ಯವಂತರಿಗೆ ಫಲವನ್ನು ಕೊಡುವುದಕ್ಕಾಗಿ ಯಾವಾಗಲೂ ಹೂ ಕಾಯಿ ಹಣ್ಣುಗಳಿಂದ ತುಂಬಿದುದಾಗಿ ದಕ್ಷಿಣದಿಕ್ಕಿನ ಜಂಬೂದ್ವೀಪದಲ್ಲಿ ಪ್ರಸಿದ್ಧವಾಗಿರುವುದು.

೩೧–೩೨. ಪಶ್ಚಿಮದಿಕ್ಕಿನ ವಿಪುಲಪರ್ವತದಲ್ಲಿ ದೇವವೃಕ್ಷವಾದ ದೊಡ್ಡ ಅರಳಿಯ ಮರವು ಹುಟ್ಟಿರುವುದು. ಉತ್ತರದಿಕ್ಕಿನ ಸುಪಾರ್ಶ್ವಪರ್ವತದಲ್ಲಿ ಅನೇಕ ಯೋಜನ ವಿಸ್ತಾರವಾದ ದೊಡ್ಡ ಕೊಂಬೆಗಳುಳ್ಳ ಆಲದ ಮರವು ಹುಟ್ಟಿರುವುದು,

೩೩–೩೪. ಆ ನಾಲ್ಕುಪರ್ವತಗಳನ್ನು ಸಂಬಂಧಿಸಿ ಎಲ್ಲ ಋತುಗಳ ಗುಣವೂ ಉಳ್ಳ, ದೇವತೆಗಳ ಕ್ರೀಡೆಗೆ ಯೋಗ್ಯವಾದ, ಮನುಷ್ಯರ ಸಂಬಂಧವಿಲ್ಲದ, ಸುಂದರವಾದ ನಾಲ್ಕು ವನಗಳಿರುವುವು. ಅವುಗಳ ಹೆಸರುಗಳನ್ನು ಕೇಳಿರಿ?

೩೫. ಪೂರ್ವದಲ್ಲಿ ಚೈತ್ರರಥವನ; ದಕ್ಷಿಣದಲ್ಲಿ ಗಂಧಮಾದನವನ; ಪಶ್ಚಿಮದಲ್ಲಿ ವೈಭ್ರಾಜವನ; ಉತ್ತರದಲ್ಲಿ ಸವಿತೃವನ ಅಥವಾ ಶಿವವನ.

ವೈಭ್ರಾಜಂ ಪಶ್ಚಿಮೇ ವಿದ್ಯಾದುತ್ತರೇ ಸವಿತುರ್ವನಂ ।
ಮಿತ್ರೇಶ್ವರಂ ತು ಪೂರ್ವೇ ತು ಷಷ್ಠೇಶ್ವರಮತಃ ಪರಂ ॥೩೬॥

ವರ್ಯೇಶ್ವರಂ ಪಶ್ಚಿಮೇ ತು ಉತ್ತರೇ ಚಾಮ್ರಕೇಶ್ವರಂ ।
ಮಹಾಸರಾಂಸಿ ಚ ತಥಾ ಚತ್ವಾರಿ ಮುನಿಪುಂಗವಾಃ ॥೩೭॥

ಯತ್ರ ಕ್ರೀಡಂತಿ ಮುನಯಃ ಪರ್ವತೇಷು ವನೇಷು ಚ ।
ಅರುಣೋದಂ ಸರಃ ಪೂರ್ವಂ ದಕ್ಷಿಣಂ ಮಾನಸಂ ಸ್ಮೃತಂ ॥೩೮॥

ಸಿತೋದಂ ಪಶ್ಚಿಮಸರೋ ಮಹಾಭದ್ರಂ ತಥೋತ್ತರಂ ।
ಶಾಖಸ್ಯ ದಕ್ಷಿಣೇ ಕ್ಷೇತ್ರಂ ವಿಶಾಖಸ್ಯ ಚ ಪಶ್ಚಿಮೇ ॥೩೯॥

ಉತ್ತರೇ ನೈಗಮೇಯಸ್ಯ ಕುಮಾರಸ್ಯ ಚ ಪೂರ್ವತಃ ।
ಅರುಣೋದಸ್ಯ ಪೂರ್ವೇಣ ಶೈಲೇಂದ್ರಾ ನಾಮತಃ ಸ್ಮೃತಾಃ ॥೪೦॥

---

೩೬. ಪೂರ್ವದಲ್ಲಿ ಮಿತ್ರೇಶ್ವರಲಿಂಗವೂ, ದಕ್ಷಿಣದಲ್ಲಿ ಷಷ್ಠೇಶ್ವರ ಲಿಂಗವೂ, ಪಶ್ಚಿಮದಲ್ಲಿ ವರ್ಯೇಶ್ವರಲಿಂಗವೂ, ಉತ್ತರದಲ್ಲಿ ಆಮ್ರಕೇಶ್ವರ ಲಿಂಗವೂ, ಇರುವುದು.

೩೭–೩೮. ಪೂರ್ವದಲ್ಲಿ ಅರುಣೋದ ಸರೋವರ, ದಕ್ಷಿಣದಲ್ಲಿ ಮಾನಸಸರೋವರ, ಪಶ್ಚಿಮದಲ್ಲಿ ಸಿತೋದಸರೋವರ, ಉತ್ತರದಲ್ಲಿ ಮಹಾಭದ್ರಸರೋವರ, ಈ ಸರೋವರಗಳಲ್ಲಿಯೂ, ಪರ್ವತಗಳಲ್ಲಿಯೂ, ವನಗಳಲ್ಲಿಯೂ ಮುನಿಗಳು ಕ್ರೀಡಿಸುತ್ತಿರುವರು.

೩೯. ಕಾರ್ತಿಕೇಯನಾದ ಷಣ್ಮುಖಸ್ವಾಮಿಗೆ ಮೂರ್ತಿಭೇದದಿಂದ ಬೇರೆಬೇರೆ ಕ್ಷೇತ್ರಗಳಿರುವುವು. ದಕ್ಷಿಣದಲ್ಲಿ ಶಾಖಕ್ಷೇತ್ರ, ವಿಶಾಖನಿಗೆ ಪಶ್ಚಿಮಕ್ಷೇತ್ರ, ನೈಗಮೇಯನಿಗೆ ಉತ್ತರಕ್ಷೇತ್ರ, ಕುಮಾರಸ್ವಾಮಿಗೆ ಪೂರ್ವದಿಕ್ಕಿನಕ್ಷೇತ್ರ.

೪೦. ಅರುಣೋದ ಸರೋವರದ ಪೂರ್ವದಿಕ್ಕಿನಲ್ಲಿ ಪರ್ವತಗಳ ಹೆಸರುಗಳನ್ನು ಸಂಕ್ಷೇಪವಾಗಿ ಹೇಳುವೆನು. ವಿಸ್ತಾರವಾಗಿ ಹೇಳಲು ನನ್ನಿಂದಾಗದು.

ತಾಂಸ್ತು ಸಂಕ್ಷೇಪತೋ ವಕ್ಷ್ಯೇ ನ ಶಕ್ಯಂ ವಿಸ್ತರೇಣ ತು ।
ಸಿತಾಂತಶ್ಚ ಕುರಂಡಶ್ಚ ಕುರರಶ್ಚಾಚಲೋತ್ತಮಃ ॥೪೧॥

ವಿಕರೋ ಮಣಿಶೈಲಶ್ಚ ವೃಕ್ಷವಾಂ ಶ್ಚಾಚಲೋತ್ತಮಃ ।
ಮಹಾನೀಲೋಽಥ ರುಚಕಃ ಸಬಿಂದುರ್ದರ್ದುರಸ್ತಥಾ ॥೪೨॥

ವೇಣುಮಾಂಶ್ಚ ಸಮೇಘಶ್ಚ ನಿಷಧೋ ದೇವಪರ್ವತಃ ।
ಇತ್ಯೇತೇ ಪರ್ವತವರಾ ಹ್ಯನ್ಯೇ ಚ ಗಿರಯಸ್ತಥಾ ॥೪೩॥

ಪೂರ್ವೇಣ ಮಂದರಸ್ಯೈತೇ ಸಿದ್ಧಾವಾಸಾ ಉದಾಹೃತಾಃ ।
ತೇಷು ತೇಷು ಗಿರೀಂದ್ರೇಷು ಗುಹಾಸು ಚ ವನೇಷು ಚ ॥೪೪॥

ರುದ್ರಕ್ಷೇತ್ರಾಣಿ ದಿವ್ಯಾನಿ ವಿಷ್ಣೋರ್ನಾರಾಯಣಸ್ಯ ಚ ।
ಸರಸೋ ಮಾನಸಸ್ಯೇಹ ದಕ್ಷಿಣೇನ ಮಹಾಚಲಾಃ ॥೪೫॥

ಯೇ ಕೀರ್ತ್ಯಮಾನಾಸ್ತಾನ್ಸರ್ವಾನ್ ಸಂಕ್ಷಿಪ್ಯ ಪ್ರವದಾಮ್ಯಹಂ ।
ಶೈಲಶ್ಚ ವಿಶಿರಾಶ್ಚೈವ ಶಿಖರಶ್ಚಾಚಲೋತ್ತಮಃ ॥೪೬॥

ಏಕಶೃಂಗೋ ಮಹಾಶೂಲೋ ಗಜಶೈಲಃ ಪಿಶಾಚಕಃ ।
ಪಂಚಶೈಲೋಽಥ ಕೈಲಾಸೋ ಹಿಮವಾಂಶ್ಚಾಚಲೋತ್ತಮಃ ॥೪೭॥

---

೪೧–೪೩, ಸಿತಾಂತ, ಕುರಂಡ, ಕುರುರ, ವಿಕರ, ಮಣಿಶೈಲ, ವೃಕ್ಷಪರ್ವತ, ಮಹಾನೀಲ, ರುಚಕ, ಸಬಿಂದು, ದರ್ದುರ, ವೇಣುಮಂತ, ಸಮೇಘ, ನಿಷಧ, ದೇವಪರ್ವತ, ಇವೂ ಅಲ್ಲದೆ ಇನ್ನೂ ಸಣ್ಣ ಬೆಟ್ಟಗಳೂ ಇರುವುವು.

೪೪. ಮಂದರ ಪರ್ವತದ ಪೂರ್ವದಿಕ್ಕಿನ ಈ ಪರ್ವತಗಳೆಲ್ಲವೂ ಸಿದ್ಧಾಶ್ರಮಗಳು. ಆ ಪರ್ವತಗಳಲ್ಲಿಯೂ, ಗುಹೆಗಳಲ್ಲಿಯೂ, ವನಗಳಲ್ಲಿಯೂ, ರುದ್ರಕ್ಷೇತ್ರಗಳೂ, ಸರ್ವವ್ಯಾಪಿಯಾದ ನಾರಾಯಣನ ಕ್ಷೇತ್ರಗಳೂ ಇರುವುವು.

೪೫. ದಕ್ಷಿಣದಿಕ್ಕಿನ ಮಾನಸ ಸರೋವರವನ್ನನುಸರಿಸಿದ ಪರ್ವತಗಳನ್ನು ಸಂಕ್ಷೇಪವಾಗಿ ಹೇಳುವೆನು.

೪೬–೪೯. ವಿಶಿರಪರ್ವತ, ಶಿಖರಪರ್ವತ, ಏಕಶೃಂಗ, ಮಹಾಶೂಲ, ಗಜಶೈಲ, ಪಿಶಾಚಕ, ಪಂಚಶೈಲ, ಕೈಲಾಸ, ಹಿಮವಂತ,

ಇತ್ಯೇತೇ ದೇವಚರಿತಾ ಉತ್ಕಟಾಃ ಪರ್ವತೋತ್ತಮಾಃ ।
ತೇಷು ತೇಷು ಚ ಸರ್ವೇಷು ಪರ್ವತೇಷು ವನೇಷು ಚ ॥೪೮॥
ರುದ್ರಕ್ಷೇತ್ರಾಣಿ ದಿವ್ಯಾನಿ ಸ್ಥಾಪಿತಾನಿ ಸುರೋತ್ತಮೈಃ ।
ದಿಗ್ಭಾಗೇ ದಕ್ಷಿಣೇ ಪ್ರೋಕ್ತಾಃ ಪಶ್ಚಿಮೇ ಚ ವದಾಮಿ ವಃ ॥೪೯॥
ಅಪರೇಣ ಸಿತೋದಶ್ಚ ಸುರಪಶ್ಚ ಮಹಾಬಲಃ ।
ಕುಮುದೋ ಮಧುಮಾಂ ಶ್ಚೈವ ಹ್ಯಂಜನೋ ಮುಕುಟಸ್ತಥಾ ॥
ಕೃಷ್ಣಶ್ಚ ಪಾಂಡುರ ಶ್ಚೈವ ಸಹಸ್ರಶಿಖರ ಶ್ಚ ಯಃ ।
ಪಾರಿಜಾತಶ್ಚ ಶೈಲೇಂದ್ರಃ ಶ್ರೀಶೃಂಗ ಶ್ಚಾಚಲೋತ್ತಮಃ ॥೫೦॥
ಇತ್ಯೇತೇ ದೇವಚರಿತಾ ಉತ್ಕಟಾಃ ಪರ್ವತೋತ್ತಮಾಃ ।
ಸರ್ವೇ ಪಶ್ಚಿಮದಿಗ್ಭಾಗೇ ರುದ್ರಕ್ಷೇತ್ರಸಮನ್ವಿತಾಃ ॥೫೧॥
ಮಹಾಭದ್ರಸ್ಯ ಸರಸ ಶ್ಚೋತ್ತರೇ ಚ ಮಹಾಬಲಾಃ ।
ಯೇ ಸ್ಥಿತಾಃ ಕೀರ್ತ್ಯಮಾನಾಂ ಸ್ತಾನ್ಸಂಕ್ಷಿಪ್ಯೇಹ ನಿಬೋಧತ ॥೫೩॥
ಶಂಖಕೂಟೋ ಮಹಾಶೈಲೋ ವೃಷಭೋ ಹಂಸಪರ್ವತಃ ।
ನಾಗಶ್ಚ ಕಪಿಲಶ್ಚೈವ ಇಂದ್ರಶೈಲ ಶ್ಚ ಸಾನುಮಾನ್ ॥೫೪॥

---

ಈ ಪರ್ವತಗಳಲ್ಲಿಯೂ, ವನಗಳಲ್ಲಿಯೂ, ದೇವತೆಗಳು ಸಂಚರಿಸುವರು. ಆ ದೇವಶ್ರೇಷ್ಠರು ಅವುಗಳಲ್ಲೆಲ್ಲಾ ರುದ್ರಕ್ಷೇತ್ರಗಳನ್ನು ಸ್ಥಾಪಿಸಿರುವರು. ದಕ್ಷಿಣದಿಕ್ಕಿನ ಪರ್ವತಗಳನ್ನು ಹೇಳಿಯಾಯಿತು. ಇನ್ನು ಮುಂದೆ ಪಶ್ಚಿಮದಿಕ್ಕಿನ ಪರ್ವತಗಳನ್ನು ಹೇಳುವೆನು.

೫೦–೫೧. ಸಿತೋದ ಸರೋವರಕ್ಕೆ ಸಂಬಂಧಿಸಿದ ಶಕ್ರಪರ್ವತ, ಮಹಾಬಲ, ಕುಮುದ, ಮಧುಮಂತ, ಅಂಜನ, ಮುಕುಟ, ಕೃಷ್ಣ, ಪಾಂಡುರ, ಸಹಸ್ರಶಿಖರ, ಪಾರಿಜಾತ, ಶ್ರೀಶೃಂಗ, ಎಂಬ ಪರ್ವತಗಳು ದೇವತೆಗಳ ಸಂಚಾರ ಉಳ್ಳದ್ದಾಗಿ ಪಶ್ಚಿಮದಿಕ್ಕಿನಲ್ಲಿ ರುದ್ರಕ್ಷೇತ್ರಗಳಿಂದ ಕೂಡಿದುದಾಗಿರುವುವು.

೫೩. ಉತ್ತರದಿಕ್ಕಿನ ಮಹಾಭದ್ರ ಸರೋವರಕ್ಕೆ ಸಂಬಂಧಿಸಿರುವ ಪರ್ವತಗಳನ್ನು ಸಂಕ್ಷೇಪಿಸಿ ಹೇಳುವೆನು, ಕೇಳಿರಿ.

೫೪–೫೭. ಶಂಖಕೂಟ, ವೃಷಭ, ಹಂಸಪರ್ವತ, ನಾಗ, ಕಪಿಲ, ಇಂದ್ರಶೈಲ, ಸಾನುಮತ್ಪರ್ವತ, ನೀಲ, ಕಂಟಕಶೃಂಗ, ಶತಶೃಂಗ,

ನೀಲಃ ಕಂಟಕಶೃಂಗಶ್ಚ ಶತಶೃಂಗಶ್ಚ ಪರ್ವತಃ ।
ಪುಷ್ಪಕೋಶಃ ಪ್ರಶೈಲಶ್ಚ ವಿರಜಶ್ಚಾಚಲೋತ್ತಮಃ ॥೩೩॥

ವರಾಹಪರ್ವತಶ್ಚೈವ ಮಯೂರಶ್ಚಾಚಲೋತ್ತಮಃ ।
ಜಾರುಧಿ ಶ್ಚೈವ ಶೈಲೇಂದ್ರ ಏತ ಉತ್ತರಸಂಸ್ಥಿತಾಃ ॥೩೬॥

ತೇಷು ಶೈಲೇಷು ದಿವ್ಯೇಷು ದೇವದೇವಸ್ಯ ಶೂಲಿನಃ ।
ಅಸಂಖ್ಯಾತಾನಿ ದಿವ್ಯಾನಿ ವಿಮಾನಾನಿ ಸಹಸ್ರಶಃ ॥೩೭॥

ಏತೇಷಾಂ ಶೈಲಮುಖ್ಯಾನಾ ಮಂತರೇಷು ಯಥಾಕ್ರಮಂ ।
ಸಂತಿ ಚೈವಾಂತರದ್ರೋಣ್ಯಃ ಸರಾಂಸ್ಯುಪವನಾನಿ ಚ ॥೩೮॥

ವಸಂತಿ ದೇವಾ ಮುನಯಃ ಸಿದ್ಧಾಶ್ಚ ಶಿವಭಾವಿತಾಃ ।
ಕೃತವಾಸಾಃ ಸಪತ್ನೀಕಾಃ ಪ್ರಸಾದಾತ್ಪರಮೇಷ್ಠಿನಃ ॥೩೯॥

ಲಕ್ಷ್ಮ್ಯಾದ್ಯಾನಾಂ ಬಿಲ್ವವನೇ ಕಕುಭೇ ಕಶ್ಯಪಾದಯಃ ।
ತಥಾ ತಾಲವನೇ ಪ್ರೋಕ್ತ ಮಿಂದ್ರೋಪೇಂದ್ರೋರಗಾತ್ಮನಾಂ ॥

---

ಪುಷ್ಪಕೋಶ, ಪ್ರಶೈಲ, ವಿರಜ, ವರಾಹಪರ್ವತ, ಮಯೂರ, ಜಾರುಧಿ, ಇವುಗಳೆಲ್ಲವೂ ಉತ್ತರದಿಕ್ಕಿನಲ್ಲಿರುವ ಪರ್ವತಗಳು. ಆ ದಿವ್ಯಪರ್ವತಗಳಲ್ಲಿ ದೇವದೇವನಾದ ಶಿವನ ಲೆಕ್ಕವಿಲ್ಲದಷ್ಟು ವಿಮಾನಗಳು ಇರುವುವು.

೩೮–೩೯. ಈ ಮುಖ್ಯಪರ್ವತಗಳೊಳಗೆ ಗೋಪ್ಯವಾದ ಗವಿಗಳೂ, ಸರೋವರಗಳೂ, ಉಪವನಗಳೂ, ಇರುವುವು. ಅಲ್ಲಿ ದೇವತೆಗಳೂ, ಮುನಿಗಳೂ, ಸಿದ್ಧರೂ, ಪರಮೇಶ್ವರನ ಅನುಗ್ರಹದಿಂದ ಪತ್ನೀಸಹಿತರಾಗಿ ವಾಸಮಾಡಿಕೊಂಡಿರುವರು. ಅವರೆಲ್ಲರೂ ಭಕ್ತಿಯಿಂದ ತಮ್ಮ ಮನಸ್ಸಿನಲ್ಲಿ ಶಿವನ ಧ್ಯಾನವನ್ನು ಮಾಡುತ್ತಿರುವರು.

೬೦–೬೧. ಲಕ್ಷ್ಮೀದೇವಿಯೇ ಮುಂತಾದವರು ಬಿಲ್ವವನದಲ್ಲಿಯೂ ಕಕುಭ (ಮತ್ತಿಮರ) ವನದಲ್ಲಿ ಕಶ್ಯಪಾದಿಗಳೂ, ಕಾಲವನದಲ್ಲಿ ಇಂದ್ರ, ಉಪೇಂದ್ರರೂ, ಉರಗರೂ, ಅತ್ತಿಯಮರದ ವನದಲ್ಲಿ ಕರ್ದಮ

ಉದುಂಬರೇ ಕರ್ದಮಸ್ಯ ತಥಾಽನ್ಯೇಷಾಂ ಮಹಾತ್ಮನಾಂ ।
ವಿದ್ಯಾಧರಾಣಾಂ ಸಿದ್ಧಾನಾಂ ಪುಣ್ಯೇ ತ್ವಾಮ್ರವನೇ ಶುಭೇ ॥೬೦॥

ನಾಗಾನಾಂ ಸಿದ್ಧಸಂಘಾನಾಂ ತಥಾ ನಿಂಬವನೇ ಸ್ಥಿತಿಃ ।
ಸೂರ್ಯಸ್ಯ ಕಿಂಶುಕವನೇ ತಥಾ ರುದ್ರಗಣಸ್ಯ ಚ ॥೬೨॥

ಬೀಜಪೂರವನೇ ಪುಣ್ಯೇ ದೇವಾಚಾರ್ಯೋ ವ್ಯವಸ್ಥಿತಃ ।
ಕೌಸುಂಬೇ ತು ವನೇ ವಿಷ್ಣುಪ್ರಮುಖಾನಾಂ ಮಹಾತ್ಮನಾಂ ॥೬೩॥

ಸ್ಥಲಪದ್ಮವನಾಂತಸ್ಥ ನ್ಯಗ್ರೋಧೇಽಶೇಷಭೋಗಿನಃ ।
ಶೇಷಸ್ತ್ವಶೇಷಜಗತಾಂ ಪತಿರಾಸ್ತೇಽತಿಗರ್ವಿತಃ ॥೬೪॥

ಸ ಏವ ಜಗತಾಂ ಕಾಲಃ ಪಾತಾಲೇ ಚ ವ್ಯವಸ್ಥಿತಃ ।
ವಿಷ್ಣೋರ್ವಿಶ್ವಗುರೋಃ ಮೂರ್ತಿ ರ್ದಿವ್ಯಃ ಸಾಕ್ಷಾದ್ಧಲಾಯುಧಃ ॥

ಶಯನಂ ದೇವದೇವಸ್ಯ ಸ ಹರೇಃ ಕಂಕಣಂ ವಿಭೋಃ ।
ವನೇ ಪನಸವೃಕ್ಷಾಣಾಂ ಸ ಶುಕ್ರಾದಾನವಾದಯಃ ॥೬೬॥

---

ಮುಂತಾದ ಮಹಾತ್ಮರೂ, ಮಾವಿನ ವನದಲ್ಲಿ ವಿದ್ಯಾಧರರೂ ಸಿದ್ಧರೂ, ವಾಸಮಾಡುವರು.

೬೨–೬೫. ಬೇವಿನಗಿಡದ ವನದಲ್ಲಿ ನಾಗರೂ, ಸಿದ್ಧರೂ, ಮುತ್ತುಗದ ವನದಲ್ಲಿ ಸೂರ್ಯನೂ, ರುದ್ರಗಣಗಳೂ, ಮಾದಲದ ಹಣ್ಣಿನ ಗಿಡಗಳಿರುವ ವನದಲ್ಲಿ ದೇವತೆಗಳ ಗುರುವಾದ ಬೃಹಸ್ಪತಿಯೂ, ನೈದಿಲೆಯ ವನದಲ್ಲಿ ವಿಷ್ಣುವೇ ಮುಂತಾದ ಮಹಾತ್ಮರೂ, ನೆಲದಾವರೆಯ ವನದಲ್ಲಿರುವ ಆಲದಮರದಲ್ಲಿ ಆದಿಶೇಷನಲ್ಲದ ಮಿಕ್ಕ ಸರ್ಪಗಳೂ, ವಾಸವಾಗಿರುವರು. ಆದಿಶೇಷನು ಕಾಲಸ್ವರೂಪನಾಗಿ ಸಕಲ ಲೋಕಾಧಿಪತಿಯಾಗಿ ಗರ್ವದಿಂದ ಕೂಡಿ ಪಾತಾಲಲೋಕದಲ್ಲಿರುವನು. ಅವನು ವಿಷ್ಣುವಿನ ಅವತಾರವಾದ ಹಲಾಯುಧನಾದ ಬಲರಾಮನ ಬೇರೊಂದು ಅವತಾರಮೂರ್ತಿಯಾಗಿರುವನು.

೬೬–೬೭. ಆ ಆದಿಶೇಷನು ದೇವದೇವನಾದ ಹರಿಗೆ ಹಾಸಿಗೆಯಾಗಿಯೂ, ಶಿವನಿಗೆ ಕಂಕಣವಾಗಿಯೂ, ಇರುವನು. ಹಲಸಿನಮರದ ವನದಲ್ಲಿ ಶುಕ್ರಾಚಾರ್ಯ ಸಹಿತರಾದ ದಾನವರೂ, ಕೊಂಬೆಗಳಿಲ್ಲದ, ಅಡಿಕೆ,

ಕಿನ್ನರೈರುರುಗಾಶ್ಚೈವ ವಿಶಾಖಕ ವನೇ ಸ್ಥಿತಾಃ ।
ಮನೋಹರವನೇ ವೃಕ್ಷಾಃ ಸರ್ವಕೋಟಿ ಸಮನ್ವಿತಾಃ ॥೬೭॥
ನಂದೀಶ್ವರೋ ಗಣವರೈಃ ಸ್ತೂಯಮಾನೋ ವ್ಯವಸ್ಥಿತಃ ।
ಸಂತಾನಕಸ್ಥಲೀಮಧ್ಯೇ ಸಾಕ್ಷಾದ್ದೇವೀ ಸರಸ್ವತೀ ॥೬೮॥
ಏವಂ ಸಂಕ್ಷೇಪತಃ ಪ್ರೋಕ್ತಾ ವನೇಷು ವಸವಾಸಿನಃ ।
ಅಸಂಖ್ಯಾತಾ ಮಯಾಽಪ್ಯತ್ರ ವಕ್ತುಂ ನೋ ವಿಸ್ತರೇಣ ತು ॥೬೯॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ನವವರ್ಷವರ್ಣನಂ ನಾಮ
ಏಕೋನಪಂಚಾಶತ್ತಮೋಽಧ್ಯಾಯಃ

---

ತೆಂಗು, ಮುಂತಾದ ಮರಗಳಿರುವ ವನಗಳಲ್ಲಿ ಕಿನ್ನರರೂ, ಉರಗರೂ, ವಾಸವಾಗಿರುವರು. ಎಲ್ಲ ವಿಧವಾದಮರಗಳೂ ಅನೇಕವಾಗಿರುವ ಮನೋಹರವೆಂಬ ವನದಲ್ಲಿ ನಂದೀಶ್ವರನು ತನ್ನ ಗಣಗಳಿಂದ ಹೊಗಳಿಸಿಕೊಳ್ಳುತ್ತಾ ವಾಸವಾಗಿರುವನು.

೬೮–೬೯. ಸಂತಾನಕವೆಂಬ ಕಲ್ಪವೃಕ್ಷವನದಲ್ಲಿ ಸರಸ್ವತೀದೇವಿಯು ವಾಸವಾಗಿರುವಳು. ಈ ರೀತಿಯಲ್ಲಿ ಈ ವನಗಳಲ್ಲಿ ವಾಸಮಾಡುವವರನ್ನು ಸಂಗ್ರಹವಾಗಿ ಹೇಳಿರುವೆನು. ಇದೆಲ್ಲವೂ ಲೆಕ್ಕವಿಲ್ಲದಷ್ಟು ಇರುವುದರಿಂದ ವಿಸ್ತರಿಸಿ ಹೇಳಲು ನನ್ನಿಂದಾಗದು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನವವರ್ಷಗಳ ವರ್ಣನೆಯನ್ನು ತಿಳಿಸುವ ನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
ಪಂಚಾಶತ್ತಮೋಽಧ್ಯಾಯಃ

ಲೈಂಗಪಂಚಾಶಕೇಽಧ್ಯಾಯೇ ನಾನಾಗಿರಿವರೇಷು ವೈ ।
ಶಕ್ರಾದೀನಾಂ ಹಿ ಕೀರ್ತ್ಯಂತೇ ಪುರಾಣ್ಯಾಯುತನಾನಿ ಚ ॥

॥ ಸೂತ ಉವಾಚ ॥

ಶಿತಾಂತ ಶಿಖರೇ ಶಕ್ರಃ ಪಾರಿಜಾತವನೇ ಶುಭೇ ।
ತಸ್ಯ ಪ್ರಾಚ್ಯಾಂ ಕುಮುದಾದ್ರಿ ಕೂಟೋಽಸೌ ಬಹುವಿಸ್ತರಃ ॥ ೧ ॥

ಅಷ್ಟೌಪುರಾಣ್ಯುದೀರ್ಣಾನಿ ದಾನವಾನಾಂ ದ್ವಿಜೋತ್ತಮಾಃ ।
ಸುವರ್ಣ ಕೋಟರೇ ಪುಣ್ಯೇ ರಾಕ್ಷಸಾನಾಂ ಮಹಾತ್ಮನಾಂ ॥ ೨ ॥

ನೀಲಕಾನಾಂ ಪುರಾಣ್ಯಾಹು ರಷ್ಟ ಷಷ್ಟಿ ರ್ದ್ವಿಜೋತ್ತಮಾಃ ।
ಮಹಾನೀಲೇಽಪಿ ಶೈಲೇಂದ್ರೇ ಪುರಾಣಿ ದಶಪಂಚ ಚ ॥ ೩ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಐವತ್ತನೆಯ ಅಧ್ಯಾಯವು.

( ಐವತ್ತನೆಯ ಅಧ್ಯಾಯದಲ್ಲಿ ಬೇರೆಬೇರೆ ಪರ್ವತಗಳಲ್ಲಿ ದೇವೇಂದ್ರನೇ ಮೊದಲಾದವರ ಪಟ್ಟಣಗಳೂ, ಮನೆಗಳೂ, ಇವನ್ನು ವರ್ಣಿಸಲಾಗುವುದು. )

೧. ಸೂತನು ಹೇಳಿದನು: ಶಿತಾಂತವೆಂಬ ಪರ್ವತ ಶಿಖರದಲ್ಲಿರುವ ಪಾರಿಜಾತನವದಲ್ಲಿ ದೇವೇಂದ್ರನಿರುವನು. ಅದರ ಪೂರ್ವದಿಕ್ಕಿನಲ್ಲಿ ಕುಮುದಾದ್ರಿಯೆಂಬ ಪರ್ವತಗಳ ಗುಂಪು ಅತ್ಯಂತ ವಿಸ್ತಾರವಾಗಿರುವುದು.

೨. ಎಲೈ ಬ್ರಾಹ್ಮಣಶ್ರೇಷ್ಠರೇ, ಸುವರ್ಣಕೋಟರವೆಂಬ ಪರ್ವತದಲ್ಲಿ ಮಹಾತ್ಮರಾದ ದನುದೇವಿಯ ಮಕ್ಕಳಾದ ರಾಕ್ಷಸರ ಎಂಟು ಪಟ್ಟಣಗಳೂ ಇರುವುವು.

೩. ನೀಲಪರ್ವತದಲ್ಲಿ ರಾಕ್ಷಸರ ಅರವತ್ತೆಂಟು ಪಟ್ಟಣಗಳಿರುವುವು. ಮಹಾನೀಲಪರ್ವತದಲ್ಲಿ ಹದಿನೈದು ಪಟ್ಟಣಗಳಿರುವುವು.

ಹಯಾನನಾನಾಂ ಮುಖ್ಯಾನಾಂ ಕಿನ್ನರಾಣಾಂ ಚ ಸುವ್ರತಾಃ ।
ವೇಣುಸೌಧೇ ಮಹಾಶೈಲೇ ವಿದ್ಯಾಧರ ಪುರತ್ರಯಂ ॥ ೪ ॥

ವೈಕುಂಠೇ ಗರುಡಃ ಶ್ರೀಮಾನ್ ಕರಂಜೇ ನಿಲಲೋಹಿತಃ ।
ವಸುಧಾರೇ ವಸೂನಾಂ ತು ನಿವಾಸಃ ಪರಿಕೀರ್ತಿತಃ ॥ ೫ ॥

ರತ್ನಧಾರೇ ಗಿರಿವರೇ ಸಪ್ತರ್ಷೀಣಾಂ ಮಹಾತ್ಮನಾಂ ।
ಸಪ್ತಸ್ಥಾನಾನಿ ಪುಣ್ಯಾನಿ ಸಿದ್ಧಾವಾಸಯುತಾನಿ ಚ ॥ ೬ ॥

ಮಹತ್ಪ್ರಜಾಪತೇಃ ಸ್ಥಾನಮೇಕಶೃಂಗೇ ನಗೋತ್ತಮೇ ।
ಗಜಶೈಲೇ ತು ದುರ್ಗಾದ್ಯಾಃ ಸುಮೇಧೇ ವಸವಸ್ತಥಾ ॥ ೭ ॥

ಆದಿತ್ಯಾಶ್ಚ ತಥಾರುದ್ರಾಃ ಕೃತಾವಾಸಾ ಸ್ತಥಾಽ ಶ್ವಿನೌ ।
ಅಶೀತಿರ್ದೇವ ಪುರ್ಯಸ್ತು ಹೇಮ ಕಕ್ಷೇ ನಗೋತ್ತಮೇ ॥ ೮ ॥

---

೪. ಅವು ಕುದುರೆಯ ಮುಖದ ಕಿನ್ನರರೆಂಬ ದೇವತೆಗಳ ಪಟ್ಟಣಗಳು. ವೇಣುಸೌಧವೆಂಬ ದೊಡ್ಡ ಪರ್ವತದಲ್ಲಿ ವಿದ್ಯಾಧರರ ಮೂರು ಪಟ್ಟಣಗಳಿರುವುವು.

೫. ವೈಕುಂಠವೆಂಬ ಪರ್ವತದಲ್ಲಿ ಗರುಡನೂ, ಕರಂಜಪರ್ವತದಲ್ಲಿ ನೀಲಲೋಹಿತನೆಂಬ ರುದ್ರನೂ, ವಸುಧಾರಾಪರ್ವತದಲ್ಲಿ ಅಷ್ಟವಸುಗಳೂ, ವಾಸವಾಗಿರುವರು.

೬. ರತ್ನಧಾರಪರ್ವತದಲ್ಲಿ ಸಪ್ತರ್ಷಿಗಳ ಪುಣ್ಯಕರವಾದ ಸಪ್ತಸ್ಥಳಗಳೂ, ಸಿದ್ಧರ ವಾಸಸ್ಥಾನಗಳೂ, ಇರುವುವು. ಏಕಶೃಂಗಪರ್ವತದಲ್ಲಿ ಬ್ರಹ್ಮನ ದೊಡ್ಡ ಮನೆಯು ಇರುವುದು.

೭–೮. ಗಜಪರ್ವತದಲ್ಲಿ ದುರ್ಗಾದಿ ದೇವಿಯರೂ, ಅಷ್ಟವಸುಗಳೂ, ದ್ವಾದಶಾದಿತ್ಯರೂ, ಏಕಾದಶ ರುದ್ರರೂ, ಅಶ್ವಿನೀ ದೇವತೆಗಳೂ, ಮನೆ ಮಾಡಿಕೊಂಡಿರುವರು. ಹೇಮಕಕ್ಷಪರ್ವತದಲ್ಲಿ ಎಂಭತ್ತು ದೇವತೆಗಳ ಪಟ್ಟಣಗಳಿರುವುವು.

ಸುನೀಲೇ ರಕ್ಷಸಾಂ ವಾಸಾಃ ಪಂಚಕೋಟಿ ಶತಾನಿ ಚ ।
ಪಂಚಕೂಟೇ ಪುರಾಣ್ಯಾಸನ್ ಪಂಚಕೋಟಿ ಪ್ರಮಾಣತಃ ॥ ೯ ॥

ಶತಶೃಂಗೇ ಪುರಶತಂ ಯಕ್ಷಾಣಾ ಮಮಿತೌಜಸಾಂ ।
ತಾಮ್ರಾಭೇ ಕಾದ್ರವೇಯಾಣಾಂ ವಿಶಾಖೇ ತು ಗುಹಸ್ಯ ವೈ ॥೧೦॥

ಶ್ವೇತೋದರೇ ಮುನಿಶ್ರೇಷ್ಠಾಃ ಸುಪರ್ಣಸ್ಯ ಮಹಾತ್ಮನಃ ।
ಪಿಶಾಚ ಕೇ ಕುಬೇರಸ್ಯ ಹರಿಕೂಟೇ ಹರೇರ್ಗೃಹಂ ॥೧೧॥

ಕುಮುದೇ ಕಿನ್ನರಾವಾಸ ಸ್ತ್ವಂಜನೇ ಚಾರಣಾಲಯಃ ।
ಕೃಷ್ಣೇ ಗಂಧರ್ವ ನಿಲಯಃ ಪಾಂಡುರೇ ಪುರಸಪ್ತಕಂ ॥೧೨॥

ವಿದ್ಯಾಧರಾಣಾಂ ವಿಪ್ರೇಂಪ್ರಾ ವಿಶ್ವಭೋಗ ಸಮನ್ವಿತಂ ।
ಸಹಸ್ರ ಶಿಖರೇ ಶೈಲೇ ದೈತ್ಯಾಸಾ ಮುಗ್ರ ಕರ್ಮಣಾಂ ॥೧೩॥

---

೯. ಸುನೀಲಪರ್ವತದಲ್ಲಿ ಐನೂರು ಕೋಟಿ ರಾಕ್ಷಸರು ವಾಸ ಮಾಡುವರು. ಪಂಚಕೂಟಪರ್ವತದಲ್ಲಿ ಐದುಕೋಟಿ ಪಟ್ಟಣಗಳಿರುವುವು.

೧೦–೧೧. ಶತಶೃಂಗಪರ್ವತದಲ್ಲಿ ಪರಾಕ್ರಮಶಾಲಿಗಳಾದ ನೂರು ಯಕ್ಷರ ಮನೆಗಳೂ, ತಾಮ್ರಪರ್ವತದಲ್ಲಿ ಕದ್ರುದೇವಿಯ ಪುತ್ರರಾದ ನಾಗರಮನೆಗಳೂ, ವಿಶಾಖಪರ್ವತದಲ್ಲಿ ಕುಮಾರಸ್ವಾಮಿಯ ಮನೆಯೂ, ಶ್ವೇತೋದರ ಪರ್ವತದಲ್ಲಿ ಮಹಾತ್ಮನಾದ ಗರುಡನ ಮನೆಯೂ, ಪಿಶಾಚಪರ್ವತದಲ್ಲಿ ಕುಬೇರನ ಮನೆಯೂ, ಹರಿಕೂಟವೆಂಬ ಪರ್ವತದಲ್ಲಿ ಹರಿಯ ಮನೆಯೂ ಇರುವುವು.

೧೨. ಕುಮುದಪರ್ವತದಲ್ಲಿ ಕಿನ್ನರರ ಮನೆಗಳೂ, ಅಂಜನಪರ್ವತದಲ್ಲಿ ಚಾರಣರ ಮನೆಗಳೂ, ಕೃಷ್ಣಪರ್ವತದಲ್ಲಿ ಗಂಧರ್ವರ ಮನೆಗಳೂ, ಪಾಂಡುರಪರ್ವತದಲ್ಲಿ ಸಮಸ್ತ ಪ್ರಪಂಚದ ಸುಖಕರವಾದ ವಸ್ತುಗಳಿಂದ ತುಂಬಿದ ವಿದ್ಯಾಧರರ ಏಳು ಪಟ್ಟಣಗಳೂ ಇರುವುವು.

೧೩–೧೪. ಎಲೈ ಬ್ರಾಹ್ಮಣರೇ, ಸಹಸ್ರ ಶಿಖರವೆಂಬ ಪರ್ವತದಲ್ಲಿ ದೇವೇಂದ್ರನ ಶತ್ರುಗಳಾದ ಕ್ರೂರವಾದ ಕಾರ್ಯಗಳನ್ನು ಮಾಡುವ

ಪುರಾಣಾಂ ತು ಸಹಸ್ರಾಣಿ ಸಪ್ತ ಶಕ್ರಾರಿಣಾಂ ದ್ವಿಜಾಃ ।
ಮುಕುಟೇ ಪನ್ನಗಾವಾಸಃ ಪುಷ್ಪಕೇತೌ ಮುನೀಶ್ವರಾಃ ॥೧೪॥

ವೈವಸ್ವತಸ್ಯ ಸೋಮಸ್ಯ ವಾಯೋರ್ನಾಗಾಧಿಪಸ್ಯ ಚ ।
ತಕ್ಷಕೇ ಚೈವ ಶೈಲೇಂದ್ರೇ ಚತ್ವಾರ್ಯಾಯತನಾನಿ ಚ ॥೧೫॥

ಬ್ರಹ್ಮೇಂದ್ರ ವಿಷ್ಣು ರುದ್ರಾಣಾಂ ಗುಹಸ್ಯ ಚ ಮಹಾತ್ಮನಃ ।
ಕುಬೇರಸ್ಯ ಚ ಸೋಮಸ್ಯ ತಥಾಽನ್ಯೇಷಾಂ ಮಹಾತ್ಮನಾಂ ॥೧೬॥

ಸಂತ್ಯಾಯತನ ಮುಖ್ಯಾನಿ ಮರ್ಯಾದಾ ಪರ್ವತೇಷ್ವಪಿ ।
ಶ್ರೀಕಂಠಾದ್ರಿ ಗುಹಾವಾಸೀ ಸರ್ವಾವಾಸಃ ಸಹೋಮಯಾ ॥೧೭॥

ಶ್ರೀಕಂಠಸ್ಯಾಧಿಪತ್ಯಂ ವೈ ಸರ್ವದೇವೇಶ್ವರಸ್ಯ ಚ ।
ಅಂಡಸ್ಯಾಸ್ಯ ಪ್ರವೃತ್ತಿಸ್ತು ಶ್ರೀಕಂಠೇನ ನ ಸಂಶಯಃ ॥೧೮॥

---

ರಾಕ್ಷಸರ ಏಳುಸಾವಿರ ಪಟ್ಟಣಗಳಿರುವುವು. ಮುಕುಟಪರ್ವತವು ಪನ್ನಗರ ವಾಸಸ್ಥಾನವಾಗಿರುವುದು. ಪುಷ್ಪಕೇತುಪರ್ವತವು ವೈವಸ್ವತಮನು, ಸೋಮ, ವಾಯು, ನಾಗರಾಜ, ಇವರ ವಾಸಸ್ಥಾನವಾಗಿರುವುದು.

೧೫-೧೬. ತಕ್ಷಕವೆಂಬ ಪರ್ವತದಲ್ಲಿ ಬ್ರಹ್ಮ, ಇಂದ್ರ, ವಿಷ್ಣು, ರುದ್ರರ ನಾಲ್ಕು ಮನೆಗಳೂ, ಕುಮಾರಸ್ವಾಮೀ, ಕುಬೇರ, ಸೋಮ, ಮುಂತಾದ ಇನ್ನೂ ಕೆಲವು ಮಹಾಮಹಿಮರ ಮನೆಗಳೂ ಇರುವುವು.

೧೭. ಎಲ್ಲೆಕಟ್ಟಿನ ಪರ್ವತಗಳಲ್ಲಿಯೂ, ಕೆಲವು ಮುಖ್ಯವಾದ ಮನೆಗಳಿರುವುವು. ಶ್ರೀಕಂಠವೆಂಬ ಪರ್ವತದ ಗುಹೆಯಲ್ಲಿ ಸಮಸ್ತ ಪ್ರಪಂಚಗಳಿಗೂ ಆಶ್ರಯಸ್ಥಾನನಾದ ಶಿವನು ಉಮಾದೇವಿಯೊಡನೆ ವಾಸವಾಗಿರುವನು.

೧೮. ಶ್ರೀಕಂಠಪರ್ವತಕ್ಕೆ ಸಮಸ್ತ ದೇವತೆಗಳಿಗೂ ಅಧಿಪತಿಯಾದ ಶಿವನೇ ಒಡೆಯನು. ಈ ಬ್ರಹ್ಮಾಂಡದ ಕಾರ್ಯಗಳೂ ಕೂಡ ಆ ಶಿವನಿಂದಲೇ ನಡೆಯುತ್ತಿರುವುವು. ಈ ವಿಷಯದಲ್ಲಿ ಸಂದೇಹವಿಲ್ಲ.

ಅನಂತೇಶಾದಯುಸ್ತ್ವೇವಂ ಪ್ರತ್ಯೇಕಂ ಚಾಂಡಪಾಲಕಾಃ ।
ಚಕ್ರವರ್ತಿನ ಇತ್ಯುಕ್ತಾಸ್ತದೋ ವಿದ್ಯೇಶ್ವರಾಸ್ತ್ವಿಹ ॥೧೯॥
ಶ್ರೀಕಂಠಾಧಿಷ್ಠಿತಾನ್ಯತ್ರ ಸ್ಥಾನಾನಿ ಚ ಸಮಾಸತಃ ।
ಮರ್ಯಾದಾ ಪರ್ವತೇ ಷ್ವದ್ಯ ಶೃಣ್ವಂತು ಪ್ರವದಾಮ್ಯಹಂ ॥೨೦॥
ಶ್ರೀಕಂಠಾಧಿಷ್ಠಿತಂ ವಿಶ್ವಂ ಚರಾಚರ ಮಿದಂ ಜಗತ್ ।
ಕಾಲಾಗ್ನಿ ಶಿವಪರ್ಯಂತಂ ಕಥಂ ವಕ್ಷ್ಯೇ ಸವಿಸ್ತರಂ ॥೨೧॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಭುವನವಿನ್ಯಾಸೋದ್ದೇಶ
ಸ್ಥಾನವರ್ಣನಂನಾಮ ಪಂಚಾಶತ್ತಮೋಧ್ಯಾಯಃ

---

೧೯. ವಿಷ್ಣು, ರುದ್ರ, ಬ್ರಹ್ಮ, ಮುಂತಾದ ದೇವತೆಗಳು ಬೇರೆ ಬೇರೆಯಾಗಿ ಒಂದೊಂದು ಬ್ರಹ್ಮಾಂಡಕ್ಕೆ ಅಧಿಪತಿಗಳಾಗಿರುವರಲ್ಲದೆ ಮಾಯೆಗೂ ಅಧಿಪತಿಗಳಾಗಿರುವರು. ಆ ಕಾರಣದಿಂದ ಅವರು ಈ ಬ್ರಹ್ಮಾಂಡಕ್ಕೆ ಚಕ್ರವರ್ತಿಗಳೆನಿಸಿಕೊಂಡು ತಡೆಯಿಲ್ಲದ ಆಜ್ಞೆಯುಳ್ಳವರಾಗಿರುವರು.

೨೦. ಈ ಭೂಲೋಕದಲ್ಲಿರುವ ಎಲ್ಲೆಕಟ್ಟಿನ ಪರ್ವತಗಳಲ್ಲಿ ಶಿವನು ನೆಲಸಿರುವ ಸ್ಥಳಗಳನ್ನೂ ಸಂಗ್ರಹವಾಗಿ ಹೇಳಿರುವೆನು. ಇದನ್ನು ನೀವೆಲ್ಲರೂ ಕೇಳಿರುವಿರಿ.

೨೧. ಸಮಸ್ತ ಚರಾಚರ ಪ್ರಪಂಚವೂ ಶಿವನಲ್ಲಿಯೇ ಇರುವುದು. ಕಾಲಾಗ್ನಿರುದ್ರ ಪರ್ಯಂತವಾದ ಸಕಲ ಶಿವಾವತಾರಗಳೂ ಈ ಪ್ರಪಂಚದಲ್ಲಿ ಎಲ್ಲೆಲ್ಲಿಯೂ ಇರುವುದರಿಂದ ವಿಸ್ತಾರವಾಗಿ ಆ ಶಿವನ ನೆಲೆಯನ್ನು ವಿವರಿಸಲು ನನ್ನಿಂದ ಸಾಧ್ಯವಾಗಲಾರದು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಬ್ರಹ್ಮಾಂಡದರಚನೆ, ಸ್ಥಳ ವಿಶೇಷಗಳನ್ನು ವರ್ಣಿಸುವ ಐವತ್ತನೆಯಅಧ್ಯಾಯವು ಮುಗಿದುದು.

ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
ಏಕಪಂಚಾಶತ್ತಮೋಽಧ್ಯಾಯಃ

ಏಕಪಂಚಾಶಕೇಽಧ್ಯಾಯೇ ಸುರಮ್ಯಾಣಿ ಶಿವಸ್ಯ ಚ ।
ಚತುಃ ಸ್ಥಾನಾನಿ ಪ್ರಾಧಾನ್ಯಾ ತ್ಕೀರ್ತ್ಯಂತೇಽನ್ಯಾನಿ ಸರ್ವಶಃ ॥

॥ ಸೂತ ಉವಾಚ ॥

ದೇವಕೂಟೇ ಗಿರೌ ಮಧ್ಯೇ ಮಹಾಕೂಟೇ ಸುಶೋಭನೇ ।
ಹೇಮ ವೈಡೂರ್ಯ ಮಾಣಿಕ್ಯ ನೀಲ ಗೋಮೇದ ಕಾಂತಿಭಿಃ ॥ ೧ ॥

ತಥಾಽನ್ಯೈರ್ಮಣಿ ಮುಖ್ಯೈಶ್ಚ ನಿರ್ಮಿತೇ ನಿರ್ಮಲೇ ಶುಭೇ ।
ಶಾಖಾ ಶತಸಹಸ್ರಾಢ್ಯೇ ಸರ್ವದ್ರುಮ ವಿಭೂಷಿತೇ ॥ ೨ ॥

ಚಂಪಕಾಶೋಕ ಪುನ್ನಾಗ ವಕುಳಾಸನ ಮಂಡಿತೇ ।
ಪಾರಿಜಾತಕ ಸಂಪೂರ್ಣೇ ನಾನಾ ಪಕ್ಷಿಗಣಾನ್ವಿತೇ ॥ ೩ ॥

ನೈಕಧಾತು ಶತೈಶ್ಚಿತ್ರೇ ವಿಚಿತ್ರ ಕುಸುಮಾಕುಲೇ ।
ನಿತಂಬ ಪುಷ್ಪ ಸಾಲಂಬೇ ನೈಕ ಸತ್ವಗಣಾನ್ವಿತೇ ॥ ೪ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಐವತ್ತೊಂದನೆಯ ಅಧ್ಯಾಯವು.

(ಐವತ್ತೊಂದನೆಯ ಅಧ್ಯಾಯದಲ್ಲಿ ಮನೋಹರಗಳಾದ ಶಿವನ ಸ್ಥಾನಗಳಲ್ಲಿ ಮುಖ್ಯವಾದ ನಾಲ್ಕು ಸ್ಥಾನಗಳನ್ನು ಹೇಳುವುದಲ್ಲದೇ ಇತರ ಕೆಲವು ಸ್ಥಾನಗಳನ್ನೂ ಸಂಪೂರ್ಣವಾಗಿ ಹೇಳಲಾಗುವುದು.)

೧-೩. ದೇವಕೂಟವೆಂಬ ಪರ್ವತದಲ್ಲಿರುವ ಮಹಾಕೂಟವೆಂಬ ಪರ್ವತಶಿಖರದಲ್ಲಿ, ಚಿನ್ನ, ವೈಡೂರ್ಯ, ಕೆಂಪು, ನೀಲ, ಗೋಮೇದ, ಮುಂತಾದ ರತ್ನಗಳಿಂದ ಮಾಡಿದ, ಸಂಪಿಗೆ, ಅಶೋಕ, ಪುನ್ನಾಗ, ಬಕುಳ, ಮುಂತಾದ ಸಕಲ ಮರಗಳಿಂದಲೂ, ಪಾರಿಜಾತವೆಂಬ ಕಲ್ಪ ವೃಕ್ಷದಿಂದಲೂ ತುಂಬಿರುವ, ಅನೇಕ ಪಕ್ಷಿಗಳುಳ್ಳ,

೪-೫. ಅನೇಕ ಧಾತುಗಳಿಂದ ವಿಚಿತ್ರವಾದ, ಬಗೆಬಗೆಯ ಹೂಗಳಿಂದ ತುಂಬಿ ತಪ್ಪಲು ಪ್ರದೇಶಗಳಿಂದ ಕೂಡಿದ, ಅನೇಕ ಪ್ರಾಣಿಗಳ

ವಿಮಲ ಸ್ವಾದು ಪಾನೀಯೇ ನೈಕಪ್ರಸ್ರವಣೈರ್ಯುತೇ ।
ನಿರ್ಝರೈಃ ಕುಸುಮಾಕೀರ್ಣೈ ರನೇಕೈಶ್ಚ ವಿಭೂಷಿತೇ ॥ ೫ ॥

ಪುಷ್ಪೋಡುಪವಹಾಭಿಶ್ಚ ಸ್ರವಂತೀಭಿರಲಂಕೃತೇ ।
ಸ್ನಿಗ್ಧವರ್ಣಂ ಮಹಾಮೂಲ ಮನೇಕಸ್ಕಂದ ಪಾದಪಂ ॥ ೬ ॥

ರಮ್ಯಂ ಹ್ಯವಿರಲಚ್ಛಾಯಂ ದಶಯೋಜನ ಮಂಡಲಂ ।
ತತ್ರ ಭೂತ ವನಂ ನಾಮ ನಾನಾ ಭೂತ ಗಣಾಲಯಂ ॥ ೭ ॥

ಮಹಾದೇವಸ್ಯ ದೇವಸ್ಯ ಶಂಕರಸ್ಯ ಮಹಾತ್ಮನಃ ।
ದೀಪ್ತಮಾಯತನಂ ತತ್ರ ಮಹಾಮಣಿ ವಿಭೂಷಿತಂ ॥ ೮ ॥

ಹೇಮಪ್ರಾಕಾರ ಸಂಯುಕ್ತಂ ಮಣಿತೋರಣ ಮಂಡಿತಂ ।
ಸ್ಫಾಟಿಕೈಶ್ಚ ವಿಚಿತ್ರೈಶ್ಚ ಗೋಪುರೈಶ್ಚ ಸಮನ್ವಿತಂ ॥ ೯ ॥

---

ಗುಂಪಿನಿಂದಲೂ, ನಿರ್ಮಲವಾದ, ರುಚಿಯಾದ ನೀರುಳ್ಳ ಝರಿಗಳಿಂದಲೂ, ಹೂಗಳಿಂದ ಕೂಡಿದ ನೀರು ಹರಿಯುತ್ತಿರುವ ಹೊಳೆಗಳಿಂದಲೂ, ಅಲಂಕಾರವಾಗಿರುವ,

೬–೭. ಹೂಗಳೆಂಬ ತೆಪ್ಪಗಳುಳ್ಳ ಗಿರಿನದಿಗಳಿಂದ ಅಲಂಕೃತವಾದ, ದೊಡ್ಡ ಬುಡವೂ, ಅನೇಕ ಕೊಂಬೆಗಳೂ, ಮರಗಳ ಒತ್ತಾದ ನೆರಳಿನಿಂದ ಮನೋಹರವಾಗಿರುವ, ಹತ್ತು ಗಾವುದ ವಿಸ್ತಾರವಾದ ಭೂತವನವೆಂಬ ಅರಣ್ಯವು ಅನೇಕ ಪ್ರಾಣಿಗಳಿಗೆ ವಾಸಸ್ಥಾನವಾಗಿರುವುದು.

೮. ಆ ಭೂತವನದಲ್ಲಿ ದೊಡ್ಡ ದೇವನೂ, ಮಹಾಮಹಿಮನೂ, ಸುಖಕರನೂ, ಆದ ಶಿವನ ಪ್ರಕಾಶವಾದ ಆಲಯವು ಉತ್ತಮವಾದ ರತ್ನಾಲಂಕಾರಗಳಿಂದ ಕೂಡಿರುವುದು.

೯–೧೦. ಆ ಆಲಯಕ್ಕೆ ಚಿನ್ನದ ಪ್ರಾಕಾರದ ಗೋಡೆಗಳೂ, ರತ್ನದ ಬಾಗಿಲುಗಳೂ, ಸ್ಫಟಿಕದ ಚಿತ್ರಕೆಲಸಮಾಡಿದ ಗೋಪುರಗಳೂ, ಇರುವುವು. ಆ ಆಲಯದೊಳಗೆ ರತ್ನಖಚಿತವಾದ ಸಿಂಹಾಸನಗಳೂ, ಭೂಮಿ

ಸಿಂಹಾಸನೈ ರ್ಮಣಿಮಯೈಃ ಶುಭಾಸ್ತರಣ ಸಂಯುತೈಃ ।
ಕ್ಷಿತಾವಿತಸ್ತತಃ ಸಮ್ಯಕ್ ಶರ್ವೇಣಾಧಿಷ್ಠಿತೈಃ ಶುಭೈಃ ॥೧೦॥
ಅಮ್ಲಾನ ಮಾಲಾನಿಚಿತೈ ರ್ನಾನಾವರ್ಣೈ ರ್ಗೃಹೋತ್ತಮೈಃ ।
ಮಂಡಪೈಃ ಸುವಿಚಿತ್ರೈಸ್ತು ಸ್ಫಾಟಿಕ ಸ್ತಂಭ ಸಂಯುತೈಃ ॥೧೧॥
ಸಂಯುತಂ ಸರ್ವಭೂತೇಂದ್ರೈ ರ್ಬ್ರಹ್ಮೇಂದ್ರೋಪೇಂದ್ರ ಪೂಜಿತೈಃ ।
ವರಾಹ ಗಜ ಸಿಂಹರ್ಕ್ಷ ಶಾರ್ದೂಲ ಕರಭಾನನೈಃ ॥೧೨॥
ಗೃಧ್ರೋಲೂಕ ಮುಖೈಶ್ಚಾನ್ಯೈ ರ್ಮೃಗೋಷ್ಟ್ರಾಜ ಮುಖೈರಪಿ ।
ಪ್ರಮಥೈ ರ್ವಿವಿಧೈಃ ಸ್ಥೂಲೈ ರ್ಗಿರಿಕೂಟೋಪಮೈಃ ಶುಭೈಃ ॥೧೩॥
ಕರಾಲೈ ರ್ಹರಿಕೇಶೈಶ್ಚ ರೋಮಶೈಶ್ಚ ಮಹಾಭುಜೈಃ ।
ನಾನಾ ವರ್ಣಾಕೃತಿಧರೈಃ ನಾನಾಸಂಸ್ಥಾನ ಸಂಸ್ಥಿತೈಃ ॥೧೪॥

---

ಯಮೇಲೆ ಹಾಸಿದ ರತ್ನಕಂಬಳೀ ಮುಂತಾದವುಗಳೂ, ಇರುವುವು. ಅಲ್ಲಿರುವ ಶುಭಕರವಾದ ಆ ಪೀಠವೇ ಮೊದಲಾದವುಗಳಲ್ಲಿ ಶಿವನು ಕುಳಿತಿರುವನು.

೧೧–೧೩. ಬಾಡದಿರುವ ಹೂಮಾಲೆಗಳಿಂದ ತುಂಬಿರುವ ಬಗೆಬಗೆಯ ಬಣ್ಣದ ಉತ್ತಮವಾದ ಮನೆಗಳು, ಮಂಟಪಗಳು, ಸ್ಫಟಿಕದ ಕಂಬ ಗಳು, ಇವುಗಳಿಂದ ಕೂಡಿದ, ಬ್ರಹ್ಮನೇ ಮೊದಲಾದ ದೇವತೆಗಳೂ ಪೂಜಿಸುತ್ತಿರುವ, ಹಂದಿ, ಸಿಂಹ, ಕರಡಿ, ಜಿಂಕೆ, ಹುಲಿ, ಹದ್ದು, ಗೂಬೆ, ಒಂಟೆ, ಆಡು, ಇವುಗಳ ಮುಖಗಳುಳ್ಳ, ಪರ್ವತಶಿಖರದಂತೆ ಎತ್ತರವಾದ, ಮತ್ತು ದೊಡ್ಡ ಶರೀರವುಳ್ಳ ಪ್ರಮಥ ಗಣಗಳಿಂದ ತುಂಬಿದ,

೧೪–೧೫. ಕ್ರೂರವಾದ, ಕಪ್ಪಾದ ಕೂದಲುಗಳು ಮೈಯ್ಯಲ್ಲೆಲ್ಲಾ ತುಂಬಿದ ಮಹಾಶೂರರಿಂದಲೂ, ಬಗೆಬಗೆಯ ಬಣ್ಣಗಳು ಆಕಾರಗಳು ಉಳ್ಳವರಾಗಿ ವಿಚಿತ್ರವಾದ ಸ್ಥಳಗಳಲ್ಲಿ ಕುಳಿತು ಪ್ರಕಾಶವಾದ ಮುಖ ವುಳ್ಳವರಾಗಿ, ಲೋಕಪ್ರಕಾಶವಾದ ಕಾರ್ಯಗಳನ್ನು ಮಾಡುತ್ತಿರುವ ನಂದೀ ಶ್ವರನೇ ಮೊದಲಾದ, ಬ್ರಹ್ಮ, ದೇವೇಂದ್ರ, ವಿಷ್ಣು, ಇವರುಗಳಿಗೆ

ದೀಪ್ತಾಸ್ಯೈ ರ್ದೀಪ್ತ ಚರಿತೈ ರ್ನಂದೀಶ್ವರ ಮುಖೈಃ ಶುಭೈಃ ।
ಬ್ರಹೇಂದ್ರ ವಿಷ್ಣು ಸಂಕಾಶೈ ರಣಿಮಾದಿ ಗುಣಾನ್ವಿತೈಃ ॥೧೫॥

ಅಶೂನ್ಯ ಮಮರೈರ್ನಿತ್ಯಂ ಮಹಾಪರಿಷದೈಸ್ತಥಾ ।
ತತ್ರ ಭೂತಪತೇ ರ್ದೇವಾಃ ಪೂಜಾಂ ನಿತ್ಯಂ ಪ್ರಯುಂಜತೇ ॥೧೬॥

ಝುರ್ಝುರೈಃ ಶಂಖಪಟಹೈಃ ಭೇರೀ ಡಿಂಡಿಮ ಗೋಮುಖೈಃ ।
ಲಲಿತಾವಸಿತೋದ್ಗೀತೈರ್ನೃತ್ತ ವಲ್ಗಿತ ಗರ್ಜಿತೈಃ ॥೧೭॥

ಪೂಜಿತೋ ವೈ ಮಹಾದೇವಃ ಪ್ರಮಥೈಃ ಪ್ರಮಥೇಶ್ವರಃ ।
ಸಿದ್ಧರ್ಷಿ ದೇವಗಂಧ ರ್ವೈಃ ಬ್ರಹ್ಮಣಾ ಚ ಮಹಾತ್ಮನಾ ॥೧೮॥

ಉಪೇಂದ್ರ ಪ್ರಮುಖೈಶ್ಚಾನ್ಯೈಃ ಪೂಜಿತಸ್ತತ್ರ ಶಂಕರಃ ।
ವಿಭಕ್ತಚಾರು ಶಿಖರಂ ಯತ್ರತಚ್ಛಂಖ ವರ್ಚಸಂ ॥೧೯॥
ಕೈಲಾಸೋ ಯಕ್ಷರಾಜಸ್ಯ ಕುಬೇರಸ್ಯ ಮಹಾತ್ಮನಃ ।
ನಿವಾಸಃ ಕೋಟಿಯಕ್ಷಾಣಾಂ ತಥಾಽನ್ಯೇಷಾಂ ಮಹಾತ್ಮನಾಂ॥೨೦॥

---

ಸಮಾನರಾದ ಅಣಿಮಾದಿ ಅಷ್ಟಸಿದ್ಧಿಗಳಿಂದ ಕೂಡಿರುವ, ದೇವತೆಗಳಿಂದ ತುಂಬಿರುವ ದೊಡ್ಡ ಸಭೆಯು ಇರುವುದು.

೧೬–೧೭. ಆ ಸಭೆಯಲ್ಲಿ ದೇವತೆಗಳು ಪ್ರತಿದಿನವೂ ಝುರ್ಝುರ, ಶಂಖ, ತಮಟೆ, ನಗಾರಿ, ಡಿಂಡಿಮ, ಗೋಮುಖ, ಮುಂತಾದ ವಾದ್ಯ ಗಳಿಂದಲೂ, ಬಗೆಬಗೆಯ ನಾಟ್ಯಗಳಿಂದಲೂ, ಕೂಡಿ ಭೂತಪತಿಯಾದ ಶಿವನ ಪೂಜೆಯನ್ನು ಮಾಡುತ್ತಿರುವರು.

೧೮. ಪ್ರಮಥಗಣಗಳಿಗೆ ಅಧಿಪತಿಯಾದ ಮಹಾದೇವನನ್ನು ಸಿದ್ಧರೂ, ಗಂಧರ್ವರೂ, ದೇವತೆಗಳೂ, ಋಷಿಗಳೂ, ಬ್ರಹ್ಮನೂ, ಉಪೇಂದ್ರನೇ ಮೊದಲಾದ ದೇವತೆಗಳೂ, ಆ ಭೂತವನಾಲಯದಲ್ಲಿ ಪೂಜಿಸುತ್ತಿರುವರು.

೧೯–೨೦. ಬೇರೆಬೇರೆಯಾಗಿ ಮನೋಹರವಾಗಿರುವ ಶಂಖದಂತೆ ಬಿಳಿಯ ಕಾಂತಿಯಿಂದ ಕೂಡಿದ ಶಿಖರವುಳ್ಳ ಕೈಲಾಸ ಪರ್ವತವು ಯಕ್ಷರ ರಾಜನಾದ ಮಹಾಮಹಿಮನಾದ ಕುಬೇರನ ಅನೇಕ ಯಕ್ಷರ ಮತ್ತು ಮಹಾತ್ಮರ ವಾಸಸ್ಥಾನವಾಗಿರುವುದು.

ಸಿಂಹಾಸನೈ ರ್ವರ್ಣಿಮಯೈಃ ಶುಭಾಸ್ತರಣ ಸಂಯುತೈಃ ।
ಕ್ಷಿತಾವಿತಸ್ತತಃ ಸಮ್ಯಕ್ ಶರ್ವೇಣಾಧಿಷ್ಠಿತೈಃ ಶುಭೈಃ ॥೧೦॥

ಅಮ್ಲಾನ ಮಾಲಾನಿಚಿತೈ ರ್ನಾನಾವರ್ಣೈ ರ್ಗೃಹೋತ್ತಮೈಃ ।
ಮಂಡಪೈಃ ಸುವಿಚಿತ್ರೈಸ್ತು ಸ್ಫಾಟಿಕ ಸ್ತಂಭ ಸಂಯುತೈಃ ॥೧೧॥

ಸಂಯುತಂ ಸರ್ವಭೂತೇಂದ್ರೈ ಬ್ರ್ರಹ್ಮೇಂದ್ರೋಪೇಂದ್ರ ಪೂಜಿತೈಃ ।
ವರಾಹ ಗಜ ಸಿಂಹರ್ಕ್ಷ ಶಾರ್ದೂಲ ಕರಭಾನನೈಃ ॥೧೨॥

ಗೃಧ್ರೋಲೂಕ ಮುಖೈಶ್ಚಾನ್ಯೈ ರ್ಮೃಗೋಷ್ಟ್ರಾಜ ಮುಖೈರಪಿ ।
ಪ್ರಮಥೈ ರ್ವಿವಿಧೈಃ ಸ್ಥೂಲೈ ರ್ಗಿರಿಕೂಟೋಪಮೈಃ ಶುಭೈಃ ॥೧೩॥

ಕರಾಳೈ ರ್ಹರಿಕೇಶೈಶ್ಚ ರೋಮಶೈಶ್ಚ ಮಹಾಭುಜೈಃ ।
ನಾನಾ ವರ್ಣಾಕೃತಿಧರೈಃ ನಾನಾಸಂಸ್ಥಾನ ಸಂಸ್ಥಿತೈಃ ॥೧೪॥

---

ಯಮೇಲೆ ಹಾಸಿದ ರತ್ನಕಂಬಳೀ ಮುಂತಾದವುಗಳೂ, ಇರುವುವು. ಅಲ್ಲಿರುವ ಶುಭಕರವಾದ ಆ ಪೀಠವೇ ಮೊದಲಾದವುಗಳಲ್ಲಿ ಶಿವನು ಕುಳಿತಿರುವನು.

೧೧–೧೩. ಬಾಡದಿರುವ ಹೂಮಾಲೆಗಳಿಂದ ತುಂಬಿರುವ ಬಗೆಬಗೆಯ ಬಣ್ಣದ ಉತ್ತಮವಾದ ಮನೆಗಳು, ಮಂಟಪಗಳು, ಸ್ಫಟಿಕದ ಕಂಬಗಳು, ಇವುಗಳಿಂದ ಕೂಡಿದ, ಬ್ರಹ್ಮನೇ ಮೊದಲಾದ ದೇವತೆಗಳೂ ಪೂಜಿಸುತ್ತಿರುವ, ಹಂದಿ, ಸಿಂಹ, ಕರಡಿ, ಜಿಂಕೆ, ಹುಲಿ, ಹದ್ದು, ಗೂಬೆ, ಒಂಟೆ, ಆಡು, ಇವುಗಳ ಮುಖಗಳುಳ್ಳ, ಪರ್ವತಶಿಖರದಂತೆ ಎತ್ತರವಾದ, ಮತ್ತು ದೊಡ್ಡ ಶರೀರವುಳ್ಳ ಪ್ರಮಥ ಗಣಗಳಿಂದ ತುಂಬಿದ,

೧೪–೧೫. ಕ್ರೂರವಾದ, ಕಪ್ಪಾದ ಕೂದಲುಗಳು ಮೈಯ್ಯಲ್ಲೆಲ್ಲಾ ತುಂಬಿದ ಮಹಾಶೂರರಿಂದಲೂ, ಬಗೆಬಗೆಯ ಬಣ್ಣಗಳು ಆಕಾರಗಳು ಉಳ್ಳವರಾಗಿ ವಿಚಿತ್ರವಾದ ಸ್ಥಳಗಳಲ್ಲಿ ಕುಳಿತು ಪ್ರಕಾಶವಾದ ಮುಖವುಳ್ಳವರಾಗಿ, ಲೋಕಪ್ರಕಾಶವಾದ ಕಾರ್ಯಗಳನ್ನು ಮಾಡುತ್ತಿರುವ ನಂದೀಶ್ವರನೇ ಮೊದಲಾದ, ಬ್ರಹ್ಮ, ದೇವೇಂದ್ರ, ವಿಷ್ಣು, ಇವರುಗಳಿಗೆ

ದೀಪ್ತಾಸ್ಯೈ ರ್ದೀಪ್ತ ಚರಿತೈ ರ್ನಂದೀಶ್ವರ ಮುಖೈಃ ಶುಭೈಃ ।
ಬೃಹೇಂದ್ರ ವಿಷ್ಣು ಸಂಕಾಶೈ ರಣಿಮಾದಿ ಗುಣಾನ್ವಿತೈಃ ॥೧೫॥

ಅಶೂನ್ಯ ಮುಮರ್ಯೈರ್ನಿತ್ಯಂ ಮುಹಾಪರಿಷದ್ಯೈಸ್ತಥಾ ।
ತತ್ರ ಭೂತಪತೇ ರ್ದೇವಾಃ ಪೂಜಾಂ ನಿತ್ಯಂ ಪ್ರಯುಂಜತೇ ॥೧೬॥

ಝರ್ಝರೈಃ ಶಂಖಪಟಹೈಃ ಭೇರೀ ಡಿಂಡಿಮ ಗೋಮುಖೈಃ ।
ಲಲಿತಾವಸಿತೋದ್ಗೀತೈರ್ವೃತ್ತ ವಲ್ಗಿತ ಗರ್ಜಿತೈಃ ॥೧೭॥

ಪೂಜಿತೋ ವೈ ಮಹಾದೇವಃ ಪ್ರಮಥೈಃ ಪ್ರಮಥೇಶ್ವರಃ ।
ಸಿದ್ಧರ್ಷಿ ದೇವಗಂಧ ರ್ವೈಃ ಬ್ರಹ್ಮಣಾ ಚ ಮಹಾತ್ಮನಾ ॥೧೮॥

ಉಪೇಂದ್ರ ಪ್ರಮುಖೈಶ್ಚಾನ್ಯೈಃ ಪೂಜಿತಸ್ತತ್ರ ಶಂಕರಃ ।
ವಿಭಕ್ತಚಾರು ಶಿಖರಂ ಯತ್ರತಚ್ಛಂಖ ವರ್ಚಸಂ ॥೧೯॥
ಕೈಲಾಸೋ ಯಕ್ಷರಾಜಸ್ಯ ಕುಬೇರಸ್ಯ ಮಹಾತ್ಮನಃ ।
ನಿವಾಸಃ ಕೋಟಿಯಕ್ಷಾಣಾಂ ತಥಾಽನ್ಯೇಷಾಂ ಮಹಾತ್ಮನಾಂ॥೨೦॥

---

ಸಮಾನರಾದ ಅಣಿಮಾದಿ ಅಷ್ಟಸಿದ್ಧಿಗಳಿಂದ ಕೂಡಿರುವ, ದೇವತೆಗಳಿಂದ ತುಂಬಿರುವ ದೊಡ್ಡ ಸಭೆಯು ಇರುವುದು.

೧೬–೧೭. ಆ ಸಭೆಯಲ್ಲಿ ದೇವತೆಗಳು ಪ್ರತಿದಿನವೂ ಝರ್ಝರ, ಶಂಖ, ತಮಟೆ, ನಗಾರಿ, ಡಿಂಡಿಮ, ಗೋಮುಖ, ಮುಂತಾದ ವಾದ್ಯಗಳಿಂದಲೂ, ಬಗೆಬಗೆಯ ನಾಟ್ಯಗಳಿಂದಲೂ, ಕೂಡಿ ಭೂತಪತಿಯಾದ ಶಿವನ ಪೂಜೆಯನ್ನು ಮಾಡುತ್ತಿರುವರು.

೧೮. ಪ್ರಮಥಗಣಗಳಿಗೆ ಅಧಿಪತಿಯಾದ ಮಹಾದೇವನನ್ನು ಸಿದ್ಧರೂ, ಗಂಧರ್ವರೂ, ದೇವತೆಗಳೂ, ಋಷಿಗಳೂ, ಬ್ರಹ್ಮನೂ, ಉಪೇಂದ್ರನೇ ಮೊದಲಾದ ದೇವತೆಗಳೂ, ಆ ಭೂತವನಾಲಯದಲ್ಲಿ ಪೂಜಿಸುತ್ತಿರುವರು.

೧೯–೨೦. ಬೇರೆಬೇರೆಯಾಗಿ ಮನೋಹರವಾಗಿರುವ ಶಂಖದಂತೆ ಬಿಳಿಯ ಕಾಂತಿಯಿಂದ ಕೂಡಿದ ಶಿಖರವುಳ್ಳ ಕೈಲಾಸ ಪರ್ವತವು ಯಕ್ಷರ ರಾಜನಾದ ಮಹಾಮಹಿಮನಾದ ಕುಬೇರನ ಅನೇಕ ಯಕ್ಷರ ಮತ್ತು ಮಹಾತ್ಮರ ವಾಸಸ್ಥಾನವಾಗಿರುವುದು.

ತತ್ರಾಪಿ ದೇವದೇವಸ್ಯ ಭವಸ್ಯಾಯತನಂ ಮಹತ್ ।
ತಸ್ಮಿನ್ನಾಯತನೇ ಸೋಮಃ ಸದಾಽಽಸ್ತೇ ಸಗಣೋ ಹರಃ ॥೨೧॥

ಯತ್ರ ಮಂದಾಕಿನೀ ನಾಮ ನಲಿನೀ ವಿಪುಲೋದಕಾ ।
ಸುವರ್ಣಮಣಿ ಸೋಪಾನಾ ಕುಬೇರ ಶಿಖರೇ ಶುಭೇ ॥೨೨॥

ಜಾಂಬೂನದ ಮಯೈಃ ಪದ್ಮೈಃ ಗಂಧ ಸ್ಪರ್ಶ ಗುಣಾನ್ವಿತೈಃ ।
ನೀಲ ವೈಡೂರ್ಯ ಪತ್ರೈಶ್ಚ ಗಂಧೋಪೇತೈ ರ್ಮಹೋತ್ಪಲೈಃ ॥೨೩॥

ತಥಾ ಕುಮುದ ಖಂಡೈಶ್ಚ ಮಹಾಪದ್ಮೈ ರಲಂಕೃತಾ ।
ಯಕ್ಷಗಂಧರ್ವ ನಾರೀಭಿ ರಪ್ಸರೋಭಿಶ್ಚ ಶೋಭಿತಾ ॥೨೪॥

ದೇವದಾನವ ಗಂಧರ್ವೈ ರ್ಯಕ್ಷರಾಕ್ಷಸ ಕಿನ್ನರೈಃ ।
ಉಪಸ್ಪೃಷ್ಟ ಜಲಾ ಪುಣ್ಯಾ ನದೀ ಮಂದಾಕಿನೀ ಶುಭಾ ॥೨೫॥

---

೨೧. ಆ ಕೈಲಾಸ ಪರ್ವತದಲ್ಲಿಯೂ ದೇವದೇವನಾದ ಶಿವನ ದೊಡ್ಡದಾದ ಆಲಯವಿರುವುದು. ಆ ಆಲಯದಲ್ಲಿ ಉಮಾದೇವೀ ಸಹಿತನಾದ ಶಿವನು ಸಮಸ್ತ ಗಣಗಳೊಡನೆ ಯಾವಾಗಲೂ ವಾಸವಾಗಿರುವನು.

೨೨–೨೩. ಆ ಕುಬೇರನ ಕೈಲಾಸ ಶಿಖರದಲ್ಲಿ ನೀರಿನಿಂದ ತುಂಬಿದ ದೇವಗಂಗಾನದಿಯೂ, ಮಂದಾಕಿನೀ, ಎಂಬ ಹೆಸರಿನಿಂದ ಹರಿಯುತ್ತಿರುವುದು. ಆ ನದಿಗೆ ಚಿನ್ನದಿಂದಲೂ, ರತ್ನದಿಂದಲೂ, ಮೆಟ್ಟಿಲನ್ನು ಕಟ್ಟಿರುವರು. ಸುವಾಸನೆಯಿಂದ ಕೂಡಿ ಮೃದುವಾಗಿರುವ ಚಿನ್ನದ ಬಣ್ಣದ ಕಮಲಗಳೂ, ನೀಲ, ಪಚ್ಚೆ, ಈ ರತ್ನದ ಕಾಂತಿಯ ಎಲೆಗಳೂ ಉಳ್ಳ, ಸುವಾಸನೆಯಿಂದ ಕೂಡಿದ ದೊಡ್ಡದಾದ ಉತ್ಪಲವೆಂಬ ಹೂಗಳೂ, ನೀಲಿಬಣ್ಣದ ಕಮಲಗಳೂ, ಮಹಾಪದ್ಮಗಳು ಇವುಗಳಿಂದ ಆ ನದಿಯು ಅಲಂಕಾರವಾಗಿರುವುದು.

೨೪–೨೫. ಪುಣ್ಯಕರವೂ, ಮಂಗಳಕರವೂ, ಆದ ಆ ಮಂದಾಕಿನೀ ನದಿಯಲ್ಲಿ ಯಕ್ಷರು, ಗಂಧರ್ವರು, ದೇವತೆಗಳು, ದಾನವರು, ಕಿನ್ನರರು, ರಾಕ್ಷಸರೂ, ಯಕ್ಷರೂ, ಗಂಧರ್ವಸ್ತ್ರೀಯರೂ, ಅಪ್ಸರಸ್ತ್ರೀಯರೂ, ಸ್ನಾನಮಾಡುವರು.

ತಸ್ಯಾಶ್ಚೋತ್ತರ ಪಾರ್ಶ್ವೇ ತು ಭವಸ್ಯಾಯತನಂ ಶುಭಂ ।
ವೈಡೂರ್ಯ ಮಣಿ ಸಂಪನ್ನಂ ತತ್ರಾಸ್ತೇ ಶಂಕರೋಽವ್ಯಯಃ ॥೨೬॥

ದ್ವಿಜಾಃ ಕನಕನಂದಾಯಾಸ್ತೀರೇ ವೈ ಪ್ರಾಚಿ ದಕ್ಷಿಣೇ ।
ವನಂ ದ್ವಿಜಸಹಸ್ರಾಢ್ಯಂ ಮೃಗಪಕ್ಷಿ ಸಮಾಕುಲಂ ॥೨೭॥

ತತ್ರಾಪಿ ಸಗಣಃ ಸಾಂಬಃ ಕ್ರೀಡತೇಽದ್ರಿ ಸಮೇ ಗೃಹೇ ।
ನಂದಾಯಾಃ ಪಶ್ಚಿಮೇ ತೀರೇ ಕಿಂಚಿದ್ವೈ ದಕ್ಷಿಣಾಶ್ರಿತೇ ॥೨೮॥

ಪುರಂ ರುದ್ರಪುರೀ ನಾಮ ನಾನಾಪ್ರಾಸಾದ ಸಂಕುಲಂ ।
ತತ್ರಾಪಿ ಶತಧಾ ಕೃತ್ವಾ ಹ್ಯಾತ್ಮಾನಂ ಚಾಂಬಯಾ ಸಹ ॥೨೯॥

---

೨೬. ಆ ಮಂದಾಕಿನೀ ನದಿಯ ಉತ್ತರದಿಕ್ಕಿನ ದಡದಲ್ಲಿ ವೈಡೂರ್ಯ ರತ್ನಗಳಿಂದ ಕಟ್ಟಿದ ಮಂಗಲಕರವಾದ ಶಿವನ ಆಲಯವು ಇರುವುದು. ಅಲ್ಲಿ ನಾಶರಹಿತನೂ, ಅದ್ವಿತೀಯನೂ, ಆದ ಶಂಕರನು ಇರುವನು.

೨೭. ಶೌನಕಾದಿ ಋಷಿಗಳೇ, ಕೇಳಿ. ಕನಕ ನಂದಾನದಿಯ ಆಗ್ನೇಯ ತೀರದಲ್ಲಿ ಅನೇಕ ತಪಸ್ವಿಗಳಾದ ಬ್ರಾಹ್ಮಣರಿಂದ ಕೂಡಿ ಪಕ್ಷಿಗಳಿಂದಲೂ, ಮೃಗಗಳಿಂದಲೂ, ತುಂಬಿರುವ ಒಂದು ವನವಿರುವುದು.

೨೮-೨೯. ಆ ವನದಲ್ಲಿಯೂ, ಎತ್ತರವಾದ ಆಲಯದಲ್ಲಿ ದೇವೀ ಸಹಿತನಾದ ಶಿವನು ಕ್ರೀಡಿಸುತ್ತಿರುವನು. ಆ ಕನಕನಂದಾನದಿಯ ನೈರುತ್ಯದಿಕ್ಕಿನ ತೀರದಲ್ಲಿ ಅನೇಕ ಉಪ್ಪರಿಗೆಯ ಮನೆಗಳಿಂದ ಕೂಡಿದ ರುದ್ರಪುರಿ ಎಂಬ ಪಟ್ಟಣವಿರುವುದು. ಅಲ್ಲಿಯೂ ಶಿವನು ದೇವೀಸಹಿತನಾಗಿ ನೂರಾರು ರೂಪಗಳಿಂದ ತನ್ನ ಗಣಗಳೊಡನೆ ಕ್ರೀಡಿಸುತ್ತಿರುವನು. ಅದನ್ನೂ ಒಂದು ಶಿವಕ್ಷೇತ್ರವೆಂಬುದಾಗಿ ಹೇಳುವರು.

ಕ್ರೀಡತೇ ಸಗಣಃ ಸಾಂಬಸ್ತಚ್ಛಿವಾಲಯ ಮುಚ್ಯತೇ ।
ಏವಂ ಶತಸಹಸ್ರಾಣಿ ಶರ್ವಸ್ಯಾಯತನಾನಿ ತು ॥೩೦॥

ಪ್ರತಿದ್ವೀಪೇ ಮುನಿಶ್ರೇಷ್ಠಾಃ ಪರ್ವತೇಷು ವನೇಷು ಚ ।
ನದೀನದ ತಟಾಕಾನಾಂ ತೀರೇ ಷ್ವರ್ಣವಸಂಧಿಷು ॥೩೧॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ದೇವಕೋಟಾದಿ ಪರ್ವತೇಷು ಶಿವಾಲಯ ವರ್ಣನಂ ನಾಮ ಏಕಪಂಚಾಶತ್ತಮೋಽಧ್ಯಾಯಃ

---

೩೦–೩೧. ಎಲೈ ಋಷಿಶ್ರೇಷ್ಠರೇ, ಪ್ರತಿಯೊಂದು ದ್ವೀಪದಲ್ಲಿಯೂ ಪರ್ವತಗಳಲ್ಲಿಯೂ, ವನಗಳಲ್ಲಿಯೂ, ಕೆರೆ ಮತ್ತು ಹೊಳೆಗಳ ದಡಗಳಲ್ಲಿಯೂ, ಸಮುದ್ರಸಂಗಮ ಸ್ಥಳಗಳಲ್ಲಿಯೂ, ಅನೇಕ ಸಾವಿರ ಶಿವಾಲಯಗಳಿರುವುವು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ದೇವಕೋಟ ಮುಂತಾದ ಪರ್ವತಗಳಲ್ಲಿ ಶಿವಾಲಯಗಳನ್ನು ವಿವರಿಸಿರುವ ಐವತ್ತೊಂದನೆಯ ಅಧ್ಯಾಯವು ಮುಗಿದುದು.



## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ.
## ದ್ವಿಪಂಚಾಶತ್ತಮೋಽಧ್ಯಾಯಃ

ದ್ವಿಪಂಚಾಶತ್ತಮೋಽಧ್ಯಾಯೇ ಗಂಗಾಯಾ ಶ್ಚೋದ್ಭವಃ ಶುಭಃ ।
ನವವರ್ಷ ಮನುಷ್ಯಾಣಾಂ ವರ್ಣಾದಿ ನಗವಾಸಿನಃ ।

॥ ಸೂತ ಉವಾಚ ॥

ನದ್ಯ ಶ್ಚ ಬಹವಃ ಪ್ರೋಕ್ತಾಃ ಸದಾ ಬಹುಜಲಾಃ ಶುಭಾಃ ।
ಸರೋ ವರೇಭ್ಯಃ ಸಂಭೂತಾ ಸ್ತ್ವ ಸಂಖ್ಯಾತಾ ದ್ವಿಜೋತ್ತಮಾಃ ॥
ಪ್ರಾಙ್ಮು ಖಾ ದಕ್ಷಿಣಾಸ್ಯಾಸ್ತು ಚೋತ್ತರ ಪ್ರಭವಾಃ ಶುಭಾಃ ।
ಪಶ್ಚಿಮಾಗ್ರಾಃ ಪವಿತ್ರಾಶ್ಚ ಪ್ರತಿವರ್ಷಂ ಪ್ರಕೀರ್ತಿತಾಃ ॥ ೨ ॥
ಆಕಾಶಾಂಭೋ ನಿಧಿರ್ಯೋಽಸೌ ಸೋಮ ಇತ್ಯ ಭಿಧೀಯತೇ ।
ಆಧಾರಃ ಸರ್ವಭೂತಾನಾಂ ದೇವಾನಾ ಮಮೃತಾಕರಃ ॥ ೩ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಐವತ್ತೆರಡನೆಯ ಅಧ್ಯಾಯವು.

(ಐವತ್ತೆರಡನೆಯ ಅಧ್ಯಾಯದಲ್ಲಿ ಗಂಗೆಯ ಉತ್ಪತ್ತಿಯೂ, ಒಂಬತ್ತು ವರ್ಷಭಾಗಗಳಲ್ಲಿರುವ ಮನುಷ್ಯರ ವರ್ಣಾದಿಗಳೂ, ಪರ್ವತಗಳಲ್ಲಿವಾಸಮಾಡುವವರ ವಿಷಯವೂ, ಇವನ್ನು ವರ್ಣಿಸಲಾಗಿದೆ.)

೧–೨. ಸೂತನು ಹೇಳಿದನು: ಎಲೈ ಬ್ರಾಹ್ಮಣಶ್ರೇಷ್ಠರೇ, ಸರೋವರಗಳಿಂದ ಹುಟ್ಟಿದ ಲೆಕ್ಕವಿಲ್ಲದಷ್ಟು ನದಿಗಳು ಹೆಚ್ಚು ನೀರುಳ್ಳವುಗಳಾಗಿ ಪ್ರತಿಯೊಂದು ವರ್ಷಭಾಗದಲ್ಲಿಯೂ, ಪೂರ್ವಾದಿ ನಾಲ್ಕುದಿಕ್ಕುಗಳಿಗೂ ಹರಿಯುತ್ತಿರುವುವು.

೩–೪. ಉಮಾದೇವೀ ಸಹಿತನಾದ ಪರಮೇಶ್ವರನನ್ನೇ ಆಕಾಶಸಮುದ್ರವೆಂದು ವೇದವು ಹೇಳುವುದು. ಪರಮೇಶ್ವರನೇ ಸಮಸ್ತ ಪ್ರಾಣಿಗಳಿಗೂ ಆಶ್ರಯನಾಗಿ, ದೇವತೆಗಳಿಗೆ ಅಮೃತದ ಗಣಿಯಾಗಿರು

ಅಸ್ಮಾತ್ಪ್ರವೃತ್ತಾ ಪುಣ್ಯೋದಾ ನದೀ ತ್ವಾಕಾಶಗಾಮಿನೀ ।
ಸಪ್ತಮೇನಾನಿಲ ಪಥಾ ಪ್ರವೃತ್ತಾ ಚಾಮೃತೋದಕಾ ॥ ೪ ॥

ಸಾ ಜ್ಯೋತೀಂ ಷ್ಯನುವರ್ತಂತೀ ಜ್ಯೋತಿರ್ಗಣ ನಿಷೇವಿತಾ ।
ತಾರಾಕೋಟಿ ಸಹಸ್ರಾಣಾಂ ನಭಸಶ್ಚ ಸಮಾಯುತಾ ॥ ೫ ॥

ಪರಿವರ್ತತ್ಯ ಹರಹೋ ಯಥಾ ಸೋಮಸ್ತಥೈವ ಸಾ ।
ಚತ್ವಾರ್ಯ ಶೀತಿಶ್ಚ ತಥಾ ಸಹಸ್ರಾಣಾಂ ಸಮುಚ್ಛ್ರಿತಃ ॥ ೬ ॥

ಯೋಜನಾನಾಂ ಮಹಾಮೇರುಃ ಶ್ರೀಕಂಠಾ ಕ್ರೀಡ ಕೋಮಲಃ ॥
ತತ್ರಾಸೀನೋ ಯತಃ ಶರ್ವಃ ಸಾಂಬಃ ಸಹ ಗಣೇಶ್ವರೈಃ ॥ ೭ ॥

ಕ್ರೀಡತೇ ಸುಚಿರಂ ಕಾಲಂ ತಸ್ಮಾತ್ಪುಣ್ಯ ಜಲಾ ಶಿವಾ ।
ಗಿರಿಂ ಮೇರುಂ ನದೀ ಪುಣ್ಯಾ ಸಾ ಪ್ರಯಾತಿ ಪ್ರದಕ್ಷಿಣಂ ॥ ೮ ॥

---

ವನು. ಇಂತಹ ಪರಮೇಶ್ವರನಿಂದ ಆಕಾಶದಲ್ಲಿ ಹರಿಯುವ ಅಮೃತದ ನೀರುಳ್ಳ ಪುಣ್ಯಕರವಾದ ನದಿಯೂ ಏಳನೆಯ ವಾಯುಮಾರ್ಗದಿಂದ ಹೊರಟಿರುವುದು.

೫. ಆ ಆಕಾಶಗಂಗೆಯು ಪ್ರಕಾಶವುಳ್ಳ ಗ್ರಹಗಳನ್ನು ಅನುಸರಿಸಿ ಅವುಗಳಿಗೂ ಉಪಯೋಗವನ್ನು ಮಾಡಿಕೊಟ್ಟು ಆಕಾಶದಲ್ಲಿರುವ ಅನೇಕ ಕೋಟಿ ನಕ್ಷತ್ರಗಳಿಂದ ಕೂಡಿ ಉಮಾಸಹಿತನಾದ ಪರಮೇಶ್ವರನು ಹೇಗೆ ಸರ್ವವ್ಯಾಪಿಯೋ ಹಾಗೆ ಸಮಸ್ತ ದಿಕ್ಕುಗಳಲ್ಲಿಯೂ ವ್ಯಾಪಿಸಿ ಯಾವಾಗಲೂ ಹರಿಯುತ್ತಲಿರುವುದು.

೬-೮. ಎಂಬತ್ತು ನಾಲ್ಕುಸಾವಿರ ಯೋಜನ ವಿಸ್ತಾರವಾದ ಮತ್ತು ಎತ್ತರವಾದ ಮಹಾಮೇರು ಪರ್ವತವು ಶಿವನ ಕ್ರೀಡೆಗೆ ಮನೋಹರವಾದ ಪ್ರದೇಶವಾಗಿರುವುದು. ಅಲ್ಲಿಯೇ ದೇವೀಸಹಿತನಾದ ಶಿವನು ತನ್ನ ಗಣೇಶ್ವರರೊಡನೆ ಬಹಳಕಾಲದಿಂದ ಕ್ರೀಡಿಸುತ್ತಿರುವನು. ಆ ಕಾರಣದಿಂದ ಪುಣ್ಯಕರವಾದ ನೀರುಳ್ಳ ಶುಭವಾದ ಆ ದೇವಗಂಗಾ ನದಿಯು ಮೇರುಪರ್ವತವನ್ನು ಪ್ರದಕ್ಷಿಣೆಯಾಗಿ ಸುತ್ತಿಕೊಂಡು ಹರಿಯುತ್ತಿರುವುದು.

ವಿಭಜ್ಯಮಾನಸಲಿಲಾ ಸಾ ಜವೇನಾನಿಲೇನ ಚ ।
ಮೇರೋರಂತರ ಕೂಟೇಷು ನಿಪಪಾತ ಚತುರ್ಷ್ವಪಿ ॥ ೯ ॥

ಸಮಂತಾತ್ಸ ಮತಿಕ್ರಮ್ಯ ಸರ್ವಾದ್ರೀನ್ ಪ್ರವಿಭಾಗಶಃ ।
ನಿಯೋಗಾ ದ್ದೇವದೇವಸ್ಯ ಪ್ರವಿಷ್ಟಾ ಸಾ ಮಹಾರ್ಣವಂ ॥೧೦॥

ಅಸ್ಯಾ ವಿನಿರ್ಗತಾ ನದ್ಯಃ ಶತ ಶೋಽಥ ಸಹಸ್ರಶಃ ।
ಸರ್ವದ್ವೀಪಾದ್ರಿ ವರ್ಷೇಷು ಬಹವಃ ಪರಿಕೀರ್ತಿತಾಃ ॥೧೧॥

ಕ್ಷುದ್ರ ನದ್ಯಸ್ತ್ವಸಂಖ್ಯಾತಾ ಗಂಗಾ ಯದ್ಗಾಂ ಗತಾಽಂಬರಾತ್ ।
ಕೇತು ಮಾಲೇ ನರಾಃ ಕಾಲಾಃ ಸರ್ವೇ ಪನ ಸ ಭೋಜಿನಃ ॥೧೨॥

ಸ್ತ್ರಿಯಶ್ಚೋತ್ಪಲ ವರ್ಣಾಭಾ ಜೀವಿತಂ ಚಾಯುತಂ ಸ್ಮೃತಂ ।
ಭದ್ರಾಶ್ವೇ ಶುಕ್ಲವರ್ಣಾಶ್ಚ ಸ್ತ್ರಿಯಶ್ಚಂದ್ರಾಂಶು ಸನ್ನಿಭಾಃ ॥೧೪॥

---

೯. ಆ ದೇವಗಂಗಾನದಿಯು ವಾಯುವಿನ ವೇಗದಿಂದಲೂ, ತನ್ನ ವೇಗದಿಂದಲೂ, ನೀರನ್ನು ವಿಭಾಗಮಾಡಿಕೊಂಡು ಮೇರುಪರ್ವತದ ನಾಲ್ಕು ಶಿಖರಗಳ ನಡುವೆ ಬಿದ್ದಿತು.

೧೦. ಆ ಪ್ರವಾಹವು ಭಾಗವಾಗಿ ಆ ಪರ್ವತವನ್ನೆಲ್ಲವನ್ನೂ ಸುತ್ತಲೂ ಬಳಸಿ ದೇವದೇವನಾದ ಶಿವನ ಅಪ್ಪಣೆಯಿಂದ ಸಮುದ್ರವನ್ನು ಪ್ರವೇಶಿಸಿತು.

೧೧. ಈ ದೇವಗಂಗಾನದಿಯಿಂದ ಹೊರಟ ನದಿಗಳು ಸಕಲ ದ್ವೀಪಗಳಲ್ಲಿಯೂ, ಪರ್ವತಗಳಲ್ಲಿಯೂ, ವರ್ಷಭಾಗಗಳಲ್ಲಿಯೂ, ಲೆಕ್ಕವಿಲ್ಲದಷ್ಟು ಇರುವುವು. ಇವುಗಳಲ್ಲದೇ ಸಣ್ಣನದಿಗಳು ಲೆಕ್ಕವಿಲ್ಲದಷ್ಟು ಇರುವುವು. ಆಕಾಶದಿಂದ ಭೂಮಿಗೆ ಬಂದುದರಿಂದ ಈ ನದಿಗೆ ಗಂಗೆ ಎಂದು ಹೆಸರಾಯಿತು.

೧೨-೧೪. ಕೇತುಮಾಲ ವರ್ಷದಲ್ಲಿರುವ ಜನರೆಲ್ಲರೂ ಕಪ್ಪುಬಣ್ಣದವರು. ಸ್ತ್ರೀಯರು ಕರಿಯ ನೈದಿಲೆಯ ಬಣ್ಣದವರು. ಎಲ್ಲರೂ ಹಲಸಿನ ಹಣ್ಣನ್ನೇ ಆಹಾರ ಮಾಡುವರು. ಅವರ ಆಯುಸ್ಸು ಹತ್ತು ಸಾವಿರ ವರ್ಷಗಳು. ಭದ್ರಾಶ್ವವರ್ಷದಲ್ಲಿರುವ ಜನರು ಬಿಳಿಯಬಣ್ಣದವರು. ಸ್ತ್ರೀಯರು ಬೆಳದಿಂಗಳ ಕಾಂತಿಯಂತಿರುವರು. ಕಾಲದಲ್ಲಿ

ಕಾಲಾಮ್ರಭೋಜನಾಃ ಸರ್ವೇ ನಿರಾತಂಕಾ ರತಿ ಪ್ರಿಯಾಃ ।
ದಶವರ್ಷ ಸಹಸ್ರಾಣಿ ಜೀವಂತಿ ಶಿವಭಾವಿತಾಃ ॥೧೪॥

ಹಿರಣ್ಮಯಾ ಇವಾತ್ಯರ್ಥ ಮೀಶ್ವರಾರ್ಪಿತ ಚೇತಸಃ ।
ತಥಾ ರಮಣಕೇ ಜೀವಾ ನ್ಯಗ್ರೋಧ ಫಲಭೋಜನಾಃ ॥೧೫॥

ದಶವರ್ಷ ಸಹಸ್ರಾಣಿ ಶತಾನಿ ದಶಪಂಚ ಚ ।
ಜೀವಂತಿ ಶುಕ್ಲಾಸ್ತೇ ಸರ್ವೇ ಶಿವಧ್ಯಾನ ಪರಾಯಣಾಃ ॥೧೬॥

ಹೈರಣ್ಮಯಾ ಮಹಾಭಾಗಾ ಹಿರಣ್ಮಯ ವನಾಶ್ರಯಾಃ ।
ಏಕಾದಶ ಸಹಸ್ರಾಣಿ ಶತಾನಿ ದಶ ಪಂಚ ಚ ॥೧೭॥

ವರ್ಷಾಣಾಂ ತತ್ರ ಜೀವಂತಿ ಅಶ್ವತ್ಥಾಶನ ಜೀವನಾಃ ।
ಹಿರಣ್ಮಯಾ ಇವಾತ್ಯರ್ಥ ಮೀಶ್ವರಾರ್ಪಿತ ಮಾನಸಾಃ ॥೧೮॥

---

ಪಕ್ವವಾದ ಮಾವಿನ ಹಣ್ಣನ್ನು ತಿಂದು ಜೀವಿಸುತ್ತಿರುವರು. ಅವರು ಮನಸ್ಸಿನ ಆತಂಕವಿಲ್ಲದೆ ಸ್ತ್ರೀಪುರುಷರು ಕ್ರೀಡಾಸಕ್ತರಾಗಿ ಶಿವನನ್ನು ಧ್ಯಾನಿಸುತ್ತಾ ಹತ್ತುಸಾವಿರ ವರ್ಷ ಬದುಕುವರು. ಹೆಚ್ಚು ಸುವರ್ಣವುಳ್ಳವರಾಗಿ ಈಶ್ವರಾರ್ಪಣ ಬುದ್ಧಿಯಿಂದ ಸಕಲ ಕಾರ್ಯವನ್ನೂ ಮಾಡುವರು.

೧೫–೧೬. ರಮಣಕ ದ್ವೀಪದಲ್ಲಿ ಪ್ರಾಣಿಗಳೆಲ್ಲರೂ ಆಲದಹಣ್ಣನ್ನು ತಿಂದು ಜೀವಿಸುತ್ತಿರುವರು. ಅಲ್ಲಿರುವ ಮನುಜರಿಗೆ ಹನ್ನೊಂದುಸಾವಿರದ ಐನೂರು ವರ್ಷಗಳು ಆಯುಸ್ಸಿರುವುದು. ಎಲ್ಲರೂ ಪರಿಶುದ್ಧರಾಗಿ ಶಿವನ ಧ್ಯಾನದಲ್ಲಾಸಕ್ತರಾಗಿರುವರು.

೧೭–೧೮. ಹಿರಣ್ಮಯ ವರ್ಷದ ಮಹಾಪುಣ್ಯವಂತರಾದ ಜನರು ಹಿರಣ್ಮಯವೆಂಬ ವನದಲ್ಲಿ ವಾಸಮಾಡುತ್ತಾ ಹನ್ನೆರಡುಸಾವಿರದ ಐನೂರು ವರ್ಷ ಬದುಕುವರು. ಅವರು ಅರಳಿಯ ಹಣ್ಣನ್ನು ತಿಂದು ಜೀವಿಸುತ್ತಿರುವರು. ಹೆಚ್ಚು ಚಿನ್ನಗಳುಳ್ಳವರಾಗಿದ್ದರೂ, ಈಶ್ವರಾರ್ಪಣ ಬುದ್ಧಿಯುಳ್ಳವರಾಗಿ, ಆಸೆಯಿಲ್ಲದವರಾಗಿ ಕರ್ಮವನ್ನು ಮಾಡುತ್ತಿರುವರು.

ಕುರುವರ್ಷೇ ತು ಕುರವಃ ಸ್ವರ್ಗಲೋಕಾತ್ಪರಿಚ್ಯುತಾಃ ।
ಸರ್ವೇ ಮೈಥುನ ಜಾತಾಶ್ಚ ಕ್ಷೀರಿಣಃ ಕ್ಷೀರಭೋಜನಾಃ ॥೧೯॥
ಅನ್ಯೋನ್ಯ ಮನುರಕ್ತಾಶ್ಚ ಚಕ್ರವಾಕ ಸಧರ್ಮಿಣಃ ।
ಅನಾಮಯಾ ಹ್ಯಶೋಕಾಶ್ಚ ನಿತ್ಯಂ ಸುಖ ನಿಷೇವಿಣಃ ॥೨೦॥
ತ್ರಯೋದಶ ಸಹಸ್ರಾಣಿ ಶತಾನಿ ದಶ ಪಂಚ ಚ ।
ಜೀವಂತಿ ತೇ ಮಹಾವೀರ್ಯಾ ನಚಾನ್ಯಸ್ತ್ರೀ ನಿಷೇವಿಣಃ ॥೨೧॥
ಸಹೈವ ಮರಣಂ ತೇಷಾಂ ಕುರೂಣಾಂ ಸ್ವರ್ಗವಾಸಿನಾಂ ।
ಹೃಷ್ಟಾನಾಂ ಸುಪ್ರವೃದ್ಧಾನಾಂ ಸರ್ವಾನ್ನಾ ಮೃತ ಭೋಜಿನಾಂ ॥
ಸದಾ ತು ಚಂದ್ರ ಕಾಂತಾನಾಂ ಸದಾ ಯೌವನ ಶಾಲಿನಾಂ ।
ಶ್ಯಾಮಾಂಗಾನಾಂ ಸದಾ ಸರ್ವ ಭೂಷಣಾ ಸ್ಪದ ದೇಹಿನಾಂ ॥೨೩॥

---

೧೯–೨೦. ಕುರುವರ್ಷದಲ್ಲಿ ವಾಸವಾಗಿರುವ ಕುರುಗಳು ಸ್ವರ್ಗ ಲೋಕದಲ್ಲಿ ಸುಖವನ್ನನುಭವಿಸಿ ಬಂದು ಜನ್ಮವನ್ನೆತ್ತಿದವರು. ಅವರು ಸ್ತ್ರೀಪುರುಷ ಸಂಬಂಧದಿಂದ ಹುಟ್ಟಿದವರು. ವಿಶೇಷವಾಗಿ ಹಾಲುಳ್ಳವರು. ಹಾಲೇ ಇವರ ಆಹಾರವು. ಆ ಪ್ರದೇಶದಲ್ಲಿ ಸ್ತ್ರೀಪುರುಷರು ಪರಸ್ಪರ ಪ್ರೀತಿಯುಳ್ಳವರಾಗಿ ಚಕ್ರವಾಕ ಪಕ್ಷಿಗಳಂತೆ ಅಗಲದೇ ಇರುವರು. ರೋಗ ದುಃಖಗಳಿಲ್ಲದೇ ಯಾವಾಗಲೂ ಸುಖಾನುಭವವುಳ್ಳವರಾಗಿರುವರು.

೨೧–೨೩. ಅವರು ಹದಿನಾಲ್ಕೂವರೆಸಾವಿರ ವರ್ಷ ಬದುಕುವರು. ಅತ್ಯಂತ ಶಕ್ತರಾಗಿ ಪರಸ್ತ್ರೀಯರ ಸಹವಾಸವಿಲ್ಲದವರಾಗಿರುವರು. ಸ್ವರ್ಗವಾಸಿಗಳಾದ ಆ ಕುರುಗಳು ಸ್ತ್ರೀಪುರುಷರಿಬ್ಬರೂ ಜೊತೆಯಲ್ಲಿ ಮರಣಹೊಂದುವರು. ಅವರು ಜೀವಿಸಿರುವವರೆಗೂ ಸಂತೋಷಚಿತ್ತರಾಗಿ ಸಮಸ್ತ ಅಮೃತಾನ್ನವನ್ನೂ ಭೋಜನಮಾಡುತ್ತಾ ಯಾವಾಗಲೂ ಯೌವನವಂತರಾಗಿ ಚಂದ್ರನಂತೆ ಕಾಂತಿಯುಕ್ತರಾಗಿ ಸಕಲಾಭರಣಗಳಿಂದಲೂ ಮೇಘದಂತೆ ಕಪ್ಪಾದ ತಮ್ಮ ಶರೀರವನ್ನು ಅಲಂಕರಿಸಿಕೊಂಡಿರುವರು.

ಜಂಬೂದ್ವೀಪೇ ತು ತತ್ರಾಪಿ ಕುರುವರ್ಷಂ ಸುಶೋಭನಂ ।
ತತ್ರ ಚಂದ್ರಪ್ರಭಂ ಶಂಭೋ ರ್ವಿಮಾನಂ ಚಂದ್ರಮೌಳಿನಃ ॥೨೪॥
ವರ್ಷೇ ತು ಭಾರತೇ ಮರ್ತ್ಯಾಃ ಪುಣ್ಯಾಃ ಕರ್ಮವಶಾಯುಷಃ ।
ಶತಾಯುಷಃ ಸಮಾಖ್ಯಾತಾ ನಾನಾವರ್ಣಾಲ್ಪ ದೇಹಿನಃ ॥೨೫॥
ನಾನಾ ದೇವಾರ್ಚನೇ ಯುಕ್ತಾ ನಾನಾಕರ್ಮ ಫಲಾಶಿನಃ ।
ನಾನಾ ಜ್ಞಾನಾರ್ಥ ಸಂಪನ್ನಾ ದುರ್ಬಲಾ ಶ್ಚಾಲ್ಪಭೋಗಿನಃ ॥೨೬॥
ಇಂದ್ರದ್ವೀಪೇ ತಥಾ ಕೇಚಿತ್ತ್ರಥೈವಚ ಕಸೇರುಕೇ ।
ತಾಮ್ರ ದ್ವೀಪಂ ಗತಾಃ ಕೇಚಿತ್ಕೇಚಿದ್ದೇಶಂ ಗಭಸ್ತಿಮತ್ ॥೨೭॥
.ನಾಗದ್ವೀಪಂ ತಥಾ ಸೌಮ್ಯಂ ಗಾಂಧರ್ವಂ ವಾರುಣಂ ಗತಾಃ ।
ಕೇಚಿನ್ಮ್ಲೇ ಚ್ಛಾಃ ಪುಲಿಂದಾಶ್ಚ ನಾನಾಜಾತಿ ಸಮುದ್ಭವಾಃ ॥೨೮॥

---

೨೪. ಜಂಬೂದ್ವೀಪದಲ್ಲಿರುವ ಕುರುವರ್ಷವೆಂಬ ಭಾಗವು ಅತ್ಯಂತ ಪುಣ್ಯಕರವಾದುದಾಗಿರುವುದು (ಮಂಗಳಕರವಾದುದಾಗಿರುವುದು.) ಅಲ್ಲಿ ಚಂದ್ರಪ್ರಭವೆಂಬ ಚಂದ್ರಶೇಖರನಾದ ಶಿವನ ವಿಮಾನವಿರುವುದು.

೨೫-೨೬. ಭಾರತವರ್ಷದಲ್ಲಿರುವ ಮನುಷ್ಯರು ಪುಣ್ಯವಂತರು. ಅವರವರ ಕರ್ಮಫಲಾನುಸಾರವಾಗಿ ಆಯುಸ್ಸನ್ನು ಪಡೆದವರಾಗಿರುವರು. ಸಾಮಾನ್ಯವಾಗಿ ನೂರುವರ್ಷ ಆಯುಸ್ಸು ಎಲ್ಲರಿಗೂ ಇರುವುದು. ಜನರು ಬಗೆಬಗೆಯ ಬಣ್ಣದ ಚಿಕ್ಕ ಶರೀರ ಉಳ್ಳವರಾಗಿರುವರು. ಅನೇಕ ದೇವತೆಗಳನ್ನು ಪೂಜಿಸುತ್ತಿರುವರು. ತಾವು ಮಾಡಿದ ಕರ್ಮಗಳ ಫಲವನ್ನು ಅನುಭವಿಸುವರು. ತಿಳಿವಳಿಕೆಯುಳ್ಳವರಾಗಿ ಅನೇಕ ಪ್ರಯೋಜನವನ್ನು ಪಡೆವರು. ಆದರೆ ಶರೀರದ ಬಲವು ಕಡಿಮೆಯಾಗಿ ಸ್ವಲ್ಪ ಸುಖಾನುಭವವುಳ್ಳವರಾಗಿರುವರು.

೨೭-೨೮. ಭರತಖಂಡದಲ್ಲಿ ಇಂದ್ರ, ಕಶೇರು, ತಾಮ್ರ, ಗಭಸ್ತಿಮಾನ್, ನಾಗ, ಸೌಮ್ಯ, ಗಾಂಧರ್ವ, ವಾರುಣ, ಎಂಬ ದ್ವೀಪಗಳಿರುವುವು. ಜನರು ಆ ದ್ವೀಪವಾಸಿಗಳಾಗಿರುವರಲ್ಲದೆ ಕೆಲವರು ಮ್ಲೇಚ್ಛರಾಗಿಯೂ,ಪುಲಿಂದರಾಗಿಯೂ, ನಾನಾ ವಿಧವಾದ ಜಾತಿಗಳಲ್ಲಿ ಹುಟ್ಟುವರು.

ಪೂರ್ವೇ ಕಿರಾತಾಸ್ತಸ್ಯಾಂತೇ ಪಶ್ಚಿಮೇ ಯವನಾಃ ಸ್ಮೃತಾಃ ।
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಮಧ್ಯೇ ಶೂದ್ರಾಶ್ಚ ಸರ್ವಶಃ ॥೨೯॥
ಇಜ್ಯಾಯುದ್ಧವಣಿಜ್ಯಾಭಿ ರ್ವರ್ತಯಂ ತೋ ವ್ಯವಸ್ಥಿತಾಃ ।
ತೇಷಾಂ ಸಂವ್ಯವಹಾರೋಽಯಂ ವರ್ತತೇಽತ್ರ ಪರಸ್ಪರಂ ॥೩೦॥
ಧರ್ಮಾರ್ಥಕಾಮ ಸಂಯುಕ್ತೋ ವರ್ಣಾನಾಂ ತು ಸ್ವಕರ್ಮಸು ।
ಸಂಕಲ್ಪ ಶ್ಚಾಭಿಮಾನಶ್ಚ ಆಶ್ರಮಾಣಾಂ ಯಥಾವಿಧಿ ॥೩೧॥
ಇಹಸ್ವರ್ಗಾ ಪವರ್ಗಾರ್ಥಂ ಪ್ರವೃತ್ತಿರ್ಯತ್ರ ಮಾನುಷೀ ।
ತೇಷಾಂ ಚ ಯುಗಕರ್ಮಾಣಿ ನಾನ್ಯ ತ್ರ ಮುನಿ ಪುಂಗವಾಃ ॥೩೨॥
ದಶವರ್ಷ ಸಹಸ್ರಾಣಿ ಸ್ಥಿತಿಃ ಕಿಂಪುರುಷೇ ನೃಣಾಂ ।
ಸುವರ್ಣ ವರ್ಣಾಶ್ಚ ನರಾಃ ಸ್ತ್ರಿಯಶ್ಚಾಪ್ಸರ ಸೋಪಮಾಃ ॥೩೩॥

---

೨೯. ಭರತಖಂಡದ ಪೂರ್ವದಿಕ್ಕಿನಲ್ಲಿ ಕಿರಾತರೂ, ಪಶ್ಚಿಮದಲ್ಲಿ ಯವನರೂ, ಮಧ್ಯದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೂ, ಎಲ್ಲಕಡೆಯಲ್ಲಿಯೂ, ಶೂದ್ರರೂ, ವಾಸವಾಗಿರುವರು.

೩೦. ಬ್ರಾಹ್ಮಣಾದಿ ಮೂರು ವರ್ಣದವರು ಕ್ರಮವಾಗಿ ಯಜ್ಞ, ಯುದ್ಧ, ವ್ಯಾಪಾರ ಇವುಗಳಿಂದ ಜೀವನವನ್ನು ನಡೆಸುತ್ತಾ, ಮೂರು ವರ್ಣದವರೂ ಪರಸ್ಪರ ಉಪಕಾರ ಪ್ರತ್ಯುಪಕಾರಗಳನ್ನು ಮಾಡುತ್ತಾ ಒಟ್ಟಿಗೆ ವ್ಯವಹರಿಸುತ್ತಿರುವರು.

೩೧. ಮೂರು ವರ್ಣದವರೂ, ಧರ್ಮ, ಅರ್ಥ, ಕಾಮ, ಎಂಬ ಪುರುಷಾರ್ಥಗಳ ಸಾಧನೆಗಾಗಿ ಕರ್ಮಗಳನ್ನು ಮಾಡುತ್ತಾ ಒಂದು ಉದ್ದೇಶವೂ, ಅಭಿಮಾನವೂ, ಉಳ್ಳವರಾಗಿ ತಂತಮ್ಮ ಆಶ್ರಮಗಳಿಗೆ ವಿಹಿತವಾದ ಕರ್ಮಗಳನ್ನು ನಡೆಸಿಕೊಂಡು ಬರುತ್ತಿರುವರು.

೩೨. ಈ ಭರತಖಂಡದಲ್ಲಿಯೇ ಸ್ವರ್ಗಫಲಾನುಭವಕ್ಕಾಗಿಯೂ, ಮೋಕ್ಷಕ್ಕಾಗಿಯೂ, ಮನುಷ್ಯರೆಲ್ಲರೂ ಕರ್ಮಗಳನ್ನು ಮಾಡುವರು. ಇವರಿಗೆ ಯುಗಧರ್ಮಗಳಿರುವುವು. ಮತ್ತೆಲ್ಲಿಯೂ ಯುಗಧರ್ಮವಾಗಲೀ ವಿಹಿತಕರ್ಮವಾಗಲೀ ಇರುವುದಿಲ್ಲ.

೩೩–೩೪. ಕಿಂಪುರುಷ ವರ್ಷದಲ್ಲಿ ಮನುಷ್ಯರು ಹತ್ತುಸಾವಿರ ವರ್ಷ ಜೀವಿಸುವರು. ಎಲ್ಲರೂ ಚಿನ್ನದಂತೆ ಮೈಬಣ್ಣ ಉಳ್ಳವರು.

ಅಸ್ಮಾತ್ಪ್ರವೃತ್ತಾ ಪುಣ್ಯೋದಾ ನದೀ ತ್ವಾಕಾಶಗಾಮಿನೀ ।
ಸಪ್ತಮೇನಾನಿಲ ಪಥಾ ಪ್ರವೃತ್ತಾ ಚಾಮೃತೋದಕಾ ॥ ೪ ॥

ಸಾ ಜ್ಯೋತೀಂ ಷ್ಯನುವರ್ತಂತೀ ಜ್ಯೋತಿರ್ಗಣ ನಿಷೇವಿತಾ ।
ತಾರಾಕೋಟಿ ಸಹಸ್ರಾಣಾಂ ನಭಸಶ್ಚ ಸಮಾಯುತಾ ॥ ೫ ॥

ಪರಿವರ್ತತ್ಯ ಹರಹೋ ಯಥಾ ಸೋಮಸ್ತಥೈವ ಸಾ ।
ಚತ್ವಾರ್ಯ ಶೀತಿಶ್ಚ ತಥಾ ಸಹಸ್ರಾಣಾಂ ಸಮುಚ್ಛ್ರಿತಃ ॥ ೬ ॥

ಯೋಜನಾನಾಂ ಮಹಾಮೇರುಃ ಶ್ರೀಕಂಠಾ ಕ್ರೀಡ ಕೋಮಲಃ ॥
ತತ್ರಾಸೀನೋ ಯತಃ ಶರ್ವಃ ಸಾಂಬಃ ಸಹ ಗಣೇಶ್ವರೈಃ ॥ ೭ ॥

ಕ್ರೀಡತೇ ಸುಚಿರಂ ಕಾಲಂ ತಸ್ಮಾತ್ಪುಣ್ಯ ಜಲಾ ಶಿವಾ ।
ಗಿರಿಂ ಮೇರುಂ ನದೀ ಪುಣ್ಯಾ ಸಾ ಪ್ರಯಾತಿ ಪ್ರದಕ್ಷಿಣಂ ॥ ೮ ॥

---

ವನು. ಇಂತಹ ಪರಮೇಶ್ವರನಿಂದ ಆಕಾಶದಲ್ಲಿ ಹರಿಯುವ ಅಮೃತದ ನೀರುಳ್ಳ ಪುಣ್ಯಕರವಾದ ನದಿಯೂ ಏಳನೆಯ ವಾಯುಮಾರ್ಗದಿಂದ ಹೊರಟಿರುವುದು.

೫. ಆ ಆಕಾಶಗಂಗೆಯು ಪ್ರಕಾಶವುಳ್ಳ ಗ್ರಹಗಳನ್ನು ಅನುಸರಿಸಿ ಅವುಗಳಿಗೂ ಉಪಯೋಗವನ್ನು ಮಾಡಿಕೊಟ್ಟು ಆಕಾಶದಲ್ಲಿರುವ ಅನೇಕ ಕೋಟಿ ನಕ್ಷತ್ರಗಳಿಂದ ಕೂಡಿ ಉಮಾಸಹಿತನಾದ ಪರಮೇಶ್ವರನು ಹೇಗೆ ಸರ್ವವ್ಯಾಪಿಯೋ ಹಾಗೆ ಸಮಸ್ತ ದಿಕ್ಕುಗಳಲ್ಲಿಯೂ ವ್ಯಾಪಿಸಿ ಯಾವಾಗಲೂ ಹರಿಯುತ್ತಲಿರುವುದು.

೬-೮. ಎಂಬತ್ತು ನಾಲ್ಕುಸಾವಿರ ಯೋಜನ ವಿಸ್ತಾರವಾದ ಮತ್ತು ಎತ್ತರವಾದ ಮಹಾಮೇರು ಪರ್ವತವು ಶಿವನ ಕ್ರೀಡೆಗೆ ಮನೋಹರವಾದ ಪ್ರದೇಶವಾಗಿರುವುದು. ಅಲ್ಲಿಯೇ ದೇವೀಸಹಿತನಾದ ಶಿವನು ತನ್ನ ಗಣೇಶ್ವರರೊಡನೆ ಬಹಳಕಾಲದಿಂದ ಕ್ರೀಡಿಸುತ್ತಿರುವನು. ಆ ಕಾರಣದಿಂದ ಪುಣ್ಯಕರವಾದ ನೀರುಳ್ಳ ಶುಭವಾದ ಆ ದೇವಗಂಗಾ ನದಿಯು ಮೇರುಪರ್ವತವನ್ನು ಪ್ರದಕ್ಷಿಣೆಯಾಗಿ ಸುತ್ತಿಕೊಂಡು ಹರಿಯುತ್ತಿರುವುದು.

ವಿಭಜ್ಯಮಾನಸಲಿಲಾ ಸಾ ಜವೇನಾನಿಲೇನ ಚ ।
ಮೇರೋರಂತರ ಕೂಟೇಷು ನಿಪಪಾತ ಚತುರ್ಷ್ವಪಿ ॥ ೯ ॥

ಸಮಂತಾತ್ಸ ಮತಿಕ್ರಮ್ಯ ಸರ್ವಾದ್ರೀನ್ ಪ್ರವಿಭಾಗಶಃ ।
ನಿಯೋಗಾ ದ್ದೇವದೇವಸ್ಯ ಪ್ರವಿಷ್ಟಾ ಸಾ ಮಹಾರ್ಣವಂ ॥೧೦॥

ಅಸ್ಯಾ ವಿನಿರ್ಗತಾ ನದ್ಯಃ ಶತ ಶೋಽಥ ಸಹಸ್ರಶಃ ।
ಸರ್ವದ್ವೀಪಾದ್ರಿ ವರ್ಷೇಷು ಬಹವಃ ಪರಿಕೀರ್ತಿತಾಃ ॥೧೧॥

ಕ್ಷುದ್ರ ನದ್ಯಸ್ತ್ವಸಂಖ್ಯಾತಾ ಗಂಗಾ ಯದ್ಗಾಂ ಗತಾಽಂಬರಾತ್ ।
ಕೇತು ಮಾಲೇ ನರಾಃ ಕಾಲಾಃ ಸರ್ವೇ ಪನ ಸ ಭೋಜಿನಃ ॥೧೨॥

ಸ್ತ್ರಿಯಶ್ಚೋತ್ಪಲ ವರ್ಣಾಭಾ ಜೀವಿತಂ ಚಾಯುತಂ ಸ್ಮೃತಂ ।
ಭದ್ರಾಶ್ವೇ ಶುಕ್ಲವರ್ಣಾಶ್ಚ ಸ್ತ್ರಿಯಶ್ಚಂದ್ರಾಂಶು ಸನ್ನಿಭಾಃ ॥೧೪॥

---

೯. ಆ ದೇವಗಂಗಾನದಿಯು ವಾಯುವಿನ ವೇಗದಿಂದಲೂ, ತನ್ನ ವೇಗದಿಂದಲೂ, ನೀರನ್ನು ವಿಭಾಗಮಾಡಿಕೊಂಡು ಮೇರುಪರ್ವತದ ನಾಲ್ಕು ಶಿಖರಗಳ ನಡುವೆ ಬಿದ್ದಿತು.

೧೦. ಆ ಪ್ರವಾಹವು ಭಾಗವಾಗಿ ಆ ಪರ್ವತವನ್ನೆಲ್ಲವನ್ನೂ ಸುತ್ತಲೂ ಬಳಸಿ ದೇವದೇವನಾದ ಶಿವನ ಅಪ್ಪಣೆಯಿಂದ ಸಮುದ್ರವನ್ನು ಪ್ರವೇಶಿಸಿತು.

೧೧. ಈ ದೇವಗಂಗಾನದಿಯಿಂದ ಹೊರಟ ನದಿಗಳು ಸಕಲ ದ್ವೀಪಗಳಲ್ಲಿಯೂ, ಪರ್ವತಗಳಲ್ಲಿಯೂ, ವರ್ಷಭಾಗಗಳಲ್ಲಿಯೂ, ಲೆಕ್ಕವಿಲ್ಲದಷ್ಟು ಇರುವುವು. ಇವುಗಳಲ್ಲದೇ ಸಣ್ಣನದಿಗಳು ಲೆಕ್ಕವಿಲ್ಲದಷ್ಟು ಇರುವುವು. ಆಕಾಶದಿಂದ ಭೂಮಿಗೆ ಬಂದುದರಿಂದ ಈ ನದಿಗೆ ಗಂಗೆ ಎಂದು ಹೆಸರಾಯಿತು.

೧೨–೧೪. ಕೇತುಮಾಲ ವರ್ಷದಲ್ಲಿರುವ ಜನರೆಲ್ಲರೂ ಕಪ್ಪುಬಣ್ಣದವರು. ಸ್ತ್ರೀಯರು ಕರಿಯ ನೈದಿಲೆಯ ಬಣ್ಣದವರು. ಎಲ್ಲರೂ ಹಲಸಿನ ಹಣ್ಣನ್ನೇ ಆಹಾರ ಮಾಡುವರು. ಅವರ ಆಯುಸ್ಸು ಹತ್ತು ಸಾವಿರ ವರ್ಷಗಳು. ಭದ್ರಾಶ್ವವರ್ಷದಲ್ಲಿರುವ ಜನರು ಬಿಳಿಯಬಣ್ಣದವರು. ಸ್ತ್ರೀಯರು ಬೆಳದಿಂಗಳ ಕಾಂತಿಯಂತಿರುವರು. ಕಾಲದಲ್ಲಿ

ಕಾಲಾಮ್ರಭೋಜನಾಃ ಸರ್ವೇ ನಿರಾತಂಕಾ ರತಿ ಪ್ರಿಯಾಃ ।
ದಶವರ್ಷ ಸಹಸ್ರಾಣಿ ಜೀವಂತಿ ಶಿವಭಾವಿತಾಃ ॥೧೪॥

ಹಿರಣ್ಮಯಾ ಇವಾತ್ಯರ್ಥ ಮೀಶ್ವರಾರ್ಪಿತ ಚೇತಸಃ ।
ತಥಾ ರಮಣಕೇ ಜೀವಾ ನ್ಯಗ್ರೋಧ ಫಲಭೋಜನಾಃ ॥೧೫॥

ದಶವರ್ಷ ಸಹಸ್ರಾಣಿ ಶತಾನಿ ದಶಪಂಚ ಚ ।
ಜೀವಂತಿ ಶುಕ್ಲಾಸ್ತೇ ಸರ್ವೇ ಶಿವಧ್ಯಾನ ಪರಾಯಣಾಃ ॥೧೬॥

ಹೈರಣ್ಮಯಾ ಮಹಾಭಾಗಾ ಹಿರಣ್ಮಯ ವನಾಶ್ರಯಾಃ ।
ಏಕಾದಶ ಸಹಸ್ರಾಣಿ ಶತಾನಿ ದಶ ಪಂಚ ಚ ॥೧೭॥

ವರ್ಷಾಣಾಂ ತತ್ರ ಜೀವಂತಿ ಅಶ್ವತ್ಥಾಶನ ಜೀವನಾಃ ।
ಹಿರಣ್ಮಯಾ ಇವಾತ್ಯರ್ಥ ಮೀಶ್ವರಾರ್ಪಿತ ಮಾನಸಾಃ ॥೧೮॥

---

ಪಕ್ವವಾದ ಮಾವಿನ ಹಣ್ಣನ್ನು ತಿಂದು ಜೀವಿಸುತ್ತಿರುವರು. ಅವರು ಮನಸ್ಸಿನ ಆತಂಕವಿಲ್ಲದೆ ಸ್ತ್ರೀಪುರುಷರು ಕ್ರೀಡಾಸಕ್ತರಾಗಿ ಶಿವನನ್ನು ಧ್ಯಾನಿಸುತ್ತಾ ಹತ್ತುಸಾವಿರ ವರ್ಷ ಬದುಕುವರು. ಹೆಚ್ಚು ಸುವರ್ಣವುಳ್ಳವರಾಗಿ ಈಶ್ವರಾರ್ಪಣ ಬುದ್ಧಿಯಿಂದ ಸಕಲ ಕಾರ್ಯವನ್ನೂ ಮಾಡುವರು.

೧೫–೧೬. ರಮಣಕ ದ್ವೀಪದಲ್ಲಿ ಪ್ರಾಣಿಗಳೆಲ್ಲರೂ ಆಲದಹಣ್ಣನ್ನು ತಿಂದು ಜೀವಿಸುತ್ತಿರುವರು. ಅಲ್ಲಿರುವ ಮನುಜರಿಗೆ ಹನ್ನೊಂದುಸಾವಿರದ ಐನೂರು ವರ್ಷಗಳು ಆಯುಸ್ಸಿರುವುದು. ಎಲ್ಲರೂ ಪರಿಶುದ್ಧರಾಗಿ ಶಿವನ ಧ್ಯಾನದಲ್ಲಾಸಕ್ತರಾಗಿರುವರು.

೧೭–೧೮. ಹಿರಣ್ಮಯ ವರ್ಷದ ಮಹಾಪುಣ್ಯವಂತರಾದ ಜನರು ಹಿರಣ್ಮಯವೆಂಬ ವನದಲ್ಲಿ ವಾಸಮಾಡುತ್ತಾ ಹನ್ನೆರಡುಸಾವಿರದ ಐನೂರು ವರ್ಷ ಬದುಕುವರು. ಅವರು ಅರಳಿಯ ಹಣ್ಣನ್ನು ತಿಂದು ಜೀವಿಸುತ್ತಿರುವರು. ಹೆಚ್ಚು ಚಿನ್ನಗಳುಳ್ಳವರಾಗಿದ್ದರೂ, ಈಶ್ವರಾರ್ಪಣ ಬುದ್ಧಿಯುಳ್ಳವರಾಗಿ, ಆಸೆಯಿಲ್ಲದವರಾಗಿ ಕರ್ಮವನ್ನು ಮಾಡುತ್ತಿರುವರು.

ಕುರುವರ್ಷೇ ತು ಕುರವಃ ಸ್ವರ್ಗಲೋಕಾತ್ಪರಿಚ್ಯುತಾಃ ।
ಸರ್ವೇ ಮೈಥುನ ಜಾತಾಶ್ಚ ಕ್ಷೀರಿಣಃ ಕ್ಷೀರಭೋಜನಾಃ ॥೧೯॥

ಅನ್ಯೋನ್ಯ ಮನುರಕ್ತಾಶ್ಚ ಚಕ್ರವಾಕ ಸಧರ್ಮಿಣಃ ।
ಅನಾಮಯಾ ಹ್ಯಶೋಕಾಶ್ಚ ನಿತ್ಯಂ ಸುಖ ನಿಷೇವಿಣಃ ॥೨೦॥

ತ್ರಯೋದಶ ಸಹಸ್ರಾಣಿ ಶತಾನಿ ದಶ ಪಂಚ ಚ ।
ಜೀವಂತಿ ತೇ ಮಹಾವೀರ್ಯಾ ನಚಾನ್ಯಸ್ತ್ರೀ ನಿಷೇವಿಣಃ ॥೨೧॥

ಸಹೈವ ಮರಣಂ ತೇಷಾಂ ಕುರೂಣಾಂ ಸ್ವರ್ಗವಾಸಿನಾಂ ।
ಹೃಷ್ಟಾನಾಂ ಸುಪ್ರಪೃಷ್ಟಾನಾಂ ಸರ್ವಾನ್ನಾ ಮೃತ ಭೋಜಿನಾಂ ॥

ಸದಾ ತು ಚಂದ್ರ ಕಾಂತಾನಾಂ ಸದಾ ಯೌವನ ಶಾಲಿನಾಂ ।
ಶ್ಯಾಮಾಂಗಾನಾಂ ಸದಾ ಸರ್ವ ಭೂಷಣಾ ಸ್ಪದ ದೇಹಿನಾಂ ॥೨೩॥

---

೧೯-೨೦. ಕುರುವರ್ಷದಲ್ಲಿ ವಾಸವಾಗಿರುವ ಕುರುಗಳು ಸ್ವರ್ಗ ಲೋಕದಲ್ಲಿ ಸುಖವನ್ನನುಭವಿಸಿ ಬಂದು ಜನ್ಮವನ್ನೆತ್ತಿದವರು. ಅವರು ಸ್ತ್ರೀಪುರುಷ ಸಂಬಂಧದಿಂದ ಹುಟ್ಟಿದವರು. ವಿಶೇಷವಾಗಿ ಹಾಲುಳ್ಳವರು. ಹಾಲೇ ಇವರ ಆಹಾರವು. ಆ ಪ್ರದೇಶದಲ್ಲಿ ಸ್ತ್ರೀಪುರುಷರು ಪರಸ್ಪರ ಪ್ರೀತಿಯುಳ್ಳವರಾಗಿ ಚಕ್ರವಾಕ ಪಕ್ಷಿಗಳಂತೆ ಅಗಲದೇ ಇರುವರು. ರೋಗ ದುಃಖಗಳಿಲ್ಲದೇ ಯಾವಾಗಲೂ ಸುಖಾನುಭವವುಳ್ಳವರಾಗಿರುವರು.

೨೧-೨೩. ಅವರು ಹದಿನಾಲ್ಕೂವರೆಸಾವಿರ ವರ್ಷ ಬದುಕುವರು. ಅತ್ಯಂತ ಶಕ್ತರಾಗಿ ಪರಸ್ತ್ರೀಯರ ಸಹವಾಸವಿಲ್ಲದವರಾಗಿರುವರು. ಸ್ವರ್ಗವಾಸಿಗಳಾದ ಆ ಕುರುಗಳು ಸ್ತ್ರೀಪುರುಷರಿಬ್ಬರೂ ಜೊತೆಯಲ್ಲಿ ಮರಣಹೊಂದುವರು. ಅವರು ಜೀವಿಸಿರುವವರೆಗೂ ಸಂತೋಷಚಿತ್ತರಾಗಿ ಸಮಸ್ತ ಅಮೃತಾನ್ನವನ್ನೂ ಭೋಜನಮಾಡುತ್ತಾ ಯಾವಾಗಲೂ ಯೌವನವಂತರಾಗಿ ಚಂದ್ರನಂತೆ ಕಾಂತಿಯುಕ್ತರಾಗಿ ಸಕಲಾಭರಣಗಳಿಂದಲೂ ಮೇಘದಂತೆ ಕಪ್ಪಾದ ತಮ್ಮ ಶರೀರವನ್ನು ಅಲಂಕರಿಸಿಕೊಂಡಿರುವರು.

ಜಂಬೂದ್ವೀಪೇ ತು ತತ್ರಾಪಿ ಕುರುವರ್ಷಂ ಸುಶೋಭನಂ ।
ತತ್ರ ಚಂದ್ರಪ್ರಭಂ ಶಂಭೋರ್ವಿಮಾನಂ ಚಂದ್ರಮೌಳಿನಃ ॥೨೪॥
ವರ್ಷೇ ತು ಭಾರತೇ ಮರ್ತ್ಯಾಃ ಪುಣ್ಯಾಃ ಕರ್ಮವಶಾಯುಷಃ ।
ಶತಾಯುಷಃ ಸಮಾಖ್ಯಾತಾ ನಾನಾವರ್ಣಾಲ್ಪ ದೇಹಿನಃ ॥೨೫॥
ನಾನಾ ದೇವಾರ್ಚನೇ ಯುಕ್ತಾ ನಾನಾಕರ್ಮ ಫಲಾಶಿನಃ ।
ನಾನಾ ಜ್ಞಾನಾರ್ಥ ಸಂಪನ್ನಾ ದುರ್ಬಲಾ ಶ್ಚಾಲ್ಪಭೋಗಿನಃ ॥೨೬॥
ಇಂದ್ರದ್ವೀಪೇ ತಥಾ ಕೇಚಿತ್ತಥೈವಚ ಕಸೇರುಕೇ ।
ತಾಮ್ರ ದ್ವೀಪಂ ಗತಾಃ ಕೇಚಿತ್ಕೇಚಿದ್ದೇಶಂ ಗಭಸ್ತಿಮತ್ ॥೨೭॥
ನಾಗದ್ವೀಪಂ ತಥಾ ಸೌಮ್ಯಂ ಗಾಂಧರ್ವಂ ವಾರುಣಂ ಗತಾಃ ।
ಕೇಚಿನ್ಮ್ಲೇಚ್ಛಾಃ ಪುಲಿಂದಾಶ್ಚ ನಾನಾಜಾತಿ ಸಮುದ್ಭವಾಃ ॥೨೮॥

---

೨೪. ಜಂಬೂದ್ವೀಪದಲ್ಲಿರುವ ಕುರುವರ್ಷವೆಂಬ ಭಾಗವು ಅತ್ಯಂತ ಪುಣ್ಯಕರವಾದುದಾಗಿರುವುದು (ಮಂಗಳಕರವಾದುದಾಗಿರುವುದು.) ಅಲ್ಲಿ ಚಂದ್ರಪ್ರಭವೆಂಬ ಚಂದ್ರಶೇಖರನಾದ ಶಿವನ ವಿಮಾನವಿರುವುದು.

೨೫-೨೬. ಭಾರತವರ್ಷದಲ್ಲಿರುವ ಮನುಷ್ಯರು ಪುಣ್ಯವಂತರು. ಅವರವರ ಕರ್ಮಫಲಾನುಸಾರವಾಗಿ ಆಯುಸ್ಸನ್ನು ಪಡೆದವರಾಗಿರುವರು. ಸಾಮಾನ್ಯವಾಗಿ ನೂರುವರ್ಷ ಆಯುಸ್ಸು ಎಲ್ಲರಿಗೂ ಇರುವುದು. ಜನರು ಬಗೆಬಗೆಯ ಬಣ್ಣದ ಚಿಕ್ಕ ಶರೀರ ಉಳ್ಳವರಾಗಿರುವರು. ಅನೇಕ ದೇವತೆಗಳನ್ನು ಪೂಜಿಸುತ್ತಿರುವರು. ತಾವು ಮಾಡಿದ ಕರ್ಮಗಳ ಫಲವನ್ನು ಅನುಭವಿಸುವರು. ತಿಳಿವಳಿಕೆಯುಳ್ಳವರಾಗಿ ಅನೇಕ ಪ್ರಯೋಜನವನ್ನು ಪಡೆವರು. ಆದರೆ ಶರೀರದ ಬಲವು ಕಡಿಮೆಯಾಗಿ ಸ್ವಲ್ಪ ಸುಖಾನುಭವವುಳ್ಳವರಾಗಿರುವರು.

೨೭-೨೮. ಭರತಖಂಡದಲ್ಲಿ ಇಂದ್ರ, ಕಶೇರು, ತಾಮ್ರ, ಗಭಸ್ತಿಮಾನ್, ನಾಗ, ಸೌಮ್ಯ, ಗಾಂಧರ್ವ, ವಾರುಣ, ಎಂಬ ದ್ವೀಪಗಳಿರುವುವು. ಜನರು ಆ ದ್ವೀಪವಾಸಿಗಳಾಗಿರುವರಲ್ಲದೆ ಕೆಲವರು ಮ್ಲೇಚ್ಛರಾಗಿಯೂ,ಪುಲಿಂದರಾಗಿಯೂ, ನಾನಾ ವಿಧವಾದ ಜಾತಿಗಳಲ್ಲಿ ಹುಟ್ಟುವರು.

ಪೂರ್ವೇ ಕಿರಾತಾಸ್ತಸ್ಯಾಂತೇ ಪಶ್ಚಿಮೇ ಯವನಾಃ ಸ್ಮೃತಾಃ ।
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಮಧ್ಯೇ ಶೂದ್ರಾಶ್ಚ ಸರ್ವಶಃ ॥೨೯॥
ಇಜ್ಯಾಯುದ್ಧವಣಿಜ್ಯಾಭಿ ರ್ವರ್ತಯಂ ತೋ ವ್ಯವಸ್ಥಿತಾಃ ।
ತೇಷಾಂ ಸಂವ್ಯವಹಾರೋಽಯಂ ವರ್ತತೇಽತ್ರ ಪರಸ್ಪರಂ ॥೩೦॥
ಧರ್ಮಾರ್ಥಕಾಮ ಸಂಯುಕ್ತೋ ವರ್ಣಾನಾಂ ತು ಸ್ವಕರ್ಮಸು ।
ಸಂಕಲ್ಪ ಶ್ಚಾಭಿಮಾನಶ್ಚ ಆಶ್ರಮಾಣಾಂ ಯಥಾವಿಧಿ ॥೩೧॥
ಇಹಸ್ವರ್ಗಾ ಪವರ್ಗಾರ್ಥಂ ಪ್ರವೃತ್ತಿರ್ಯತ್ರ ಮಾನುಷೀ ।
ತೇಷಾಂ ಚ ಯುಗಕರ್ಮಾಣಿ ನಾನ್ಯ ತ್ರ ಮುನಿ ಪುಂಗವಾಃ ॥೩೨॥
ದಶವರ್ಷ ಸಹಸ್ರಾಣಿ ಸ್ಥಿತಿಃ ಕಿಂಪುರುಷೇ ನೃಣಾಂ ।
ಸುವರ್ಣ ವರ್ಣಾಶ್ಚ ನರಾಃ ಸ್ತ್ರಿಯಶ್ಚಾಪ್ಸರ ಸೋಪಮಾಃ ॥೩೩॥

---

೨೯. ಭರತಖಂಡದ ಪೂರ್ವದಿಕ್ಕಿನಲ್ಲಿ ಕಿರಾತರೂ, ಪಶ್ಚಿಮದಲ್ಲಿ ಯವನರೂ, ಮಧ್ಯದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೂ, ಎಲ್ಲಕಡೆಯಲ್ಲಿಯೂ, ಶೂದ್ರರೂ, ವಾಸವಾಗಿರುವರು.

೩೦. ಬ್ರಾಹ್ಮಣಾದಿ ಮೂರು ವರ್ಣದವರು ಕ್ರಮವಾಗಿ ಯಜ್ಞ, ಯುದ್ಧ, ವ್ಯಾಪಾರ ಇವುಗಳಿಂದ ಜೀವನವನ್ನು ನಡೆಸುತ್ತಾ ಮೂರು ವರ್ಣದವರೂ ಪರಸ್ಪರ ಉಪಕಾರ ಪ್ರತ್ಯುಪಕಾರಗಳನ್ನು ಮಾಡುತ್ತಾ ಒಟ್ಟಿಗೆ ವ್ಯವಹರಿಸುತ್ತಿರುವರು.

೩೧. ಮೂರು ವರ್ಣದವರೂ, ಧರ್ಮ, ಅರ್ಥ, ಕಾಮ, ಎಂಬ ಪುರುಷಾರ್ಥಗಳ ಸಾಧನೆಗಾಗಿ ಕರ್ಮಗಳನ್ನು ಮಾಡುತ್ತಾ ಒಂದು ಉದ್ದೇಶವೂ, ಅಭಿಮಾನವೂ, ಉಳ್ಳವರಾಗಿ ತಂತಮ್ಮ ಆಶ್ರಮಗಳಿಗೆ ವಿಹಿತವಾದ ಕರ್ಮಗಳನ್ನು ನೆಡೆಸಿಕೊಂಡು ಬರುತ್ತಿರುವರು.

೩೨. ಈ ಭರತಖಂಡದಲ್ಲಿಯೇ ಸ್ವರ್ಗಫಲಾನುಭವಕ್ಕಾಗಿಯೂ, ಮೋಕ್ಷಕ್ಕಾಗಿಯೂ, ಮನುಷ್ಯರೆಲ್ಲರೂ ಕರ್ಮಗಳನ್ನು ಮಾಡುವರು. ಇವರಿಗೆ ಯುಗಧರ್ಮಗಳಿರುವುವು. ಮತ್ತೆಲ್ಲಿಯೂ ಯುಗಧರ್ಮವಾಗಲೀ ವಿಹಿತಕರ್ಮವಾಗಲೀ ಇರುವುದಿಲ್ಲ.

೩೩–೩೪. ಕಿಂಪುರುಷ ವರ್ಷದಲ್ಲಿ ಮನುಷ್ಯರು ಹತ್ತುಸಾವಿರ ವರ್ಷ ಜೀವಿಸುವರು. ಎಲ್ಲರೂ ಚಿನ್ನದಂತೆ ಮೈಬಣ್ಣ ಉಳ್ಳವರು.

ಅನಾಮಯಾ ಹ್ಯಶೋಕಾಶ್ಚ ಸರ್ವೇ ತೇ ಶಿವಭಾವಿತಾಃ ।
ಶುದ್ಧ ಸತ್ವಾಶ್ಚ ಹೇಮಾಭಾಃ ಸದಾರಾಃ ಪ್ಲಕ್ಷಭೋಜನಾಃ ॥೩೪॥
ಮಹಾರಜತ ಸಂಕಾಶಾ ಹರಿವರ್ಷೇಽಪಿ ಮಾನವಾಃ ।
ದೇವಲೋಕಾಚ್ಚ್ಯುತಾಃ ಸರ್ವೇ ದೇವಾಕಾರಾಶ್ಚ ಸರ್ವಶಃ ॥೩೫॥
ಹರಂ ಯಜಂತಿ ಸರ್ವೇ ಶಂ ಪಿಬಂತೀ ಕ್ಷುರಸಂಶುಭಂ ।
ನ ಜರಾ ಬಾಧತೇ ತೇನ ನಚ ಜೀರ್ಯಂತಿ ತೇ ನರಾಃ ॥೩೬॥
ದಶವರ್ಷ ಸಹಸ್ರಾಣಿ ತತ್ರ ಜೀವಂತಿ ಮಾನವಾಃ ।
ಮಧ್ಯಮಂ ಯನ್ಮಯಾ ಪ್ರೋಕ್ತಂ ನಾಮ್ನಾವರ್ಷ ಮಿಳಾವೃತಂ ॥
ನತತ್ರ ಸೂರ್ಯಸ್ತಪತಿ ನ ತೇ ಜೀರ್ಯಂತಿ ಮಾನವಾಃ ।
ಚಂದ್ರ ಸೂರ್ಯಾ ನ ನಕ್ಷತ್ರಂ ನಪ್ರಕಾಶ ಮಿಲಾವೃತೇ ॥೩೮॥
ಪದ್ಮ ಪ್ರಭಾಃ ಪದ್ಮಮುಖಾಃ ಪದ್ಮಪತ್ರ ನಿಭೇಕ್ಷಣಾಃ ।
ಪದ್ಮಪತ್ರ ಸುಗಂಧಾಶ್ಚ ಜಾಯಂತೇ ಭವಭಾವಿತಾಃ ॥೩೯॥

---

ಸ್ತ್ರೀಯರು ಅಪ್ಸರಸ್ತ್ರೀಯರಿಗೆ ಸಮಾನರು. ಎಲ್ಲರೂ ರೋಗದುಃಖಗಳಿಲ್ಲದೇ ಶಿವನನ್ನು ಧ್ಯಾನಿಸುತ್ತಾ ಶುದ್ಧವಾದ ಸತ್ವಗುಣದಿಂದ ಕೂಡಿರುವರು. ಅವರೆಲ್ಲರೂ ಅರಳೀ ಹಣ್ಣನ್ನು ತಿಂದು ಜೀವಿಸುವರು.

೩೫–೩೬. ಹರಿವರ್ಷದಲ್ಲಿರುವ ಮನುಷ್ಯರು ಬೆಳ್ಳಿಯಂತೆ ಮೈಯುಳ್ಳವರು. ಎಲ್ಲರೂ ದೇವಲೋಕದಿಂದ ಬಂದವರು. ದೇವತೆಗಳಂತೆಯೇ ಆಕಾರವುಳ್ಳವರು. ಸರ್ವೇಶ್ವರನಾದ ಶಿವನನ್ನು ಪೂಜಿಸುವರು. ಕಬ್ಬಿನರಸವನ್ನು ಕುಡಿದು ಜೀವಿಸುವರು. ಅವರಿಗೆ ಮುಪ್ಪು ಬರುವುದಿಲ್ಲ. ಹತ್ತುಸಾವಿರ ವರ್ಷಗಳವರೆಗೆ ಬದುಕುವರು.

೩೭–೪೦. ಇಲಾವೃತವೆಂಬ ವರ್ಷದಲ್ಲಿ ಸೂರ್ಯನತಾಪವಿಲ್ಲ. ಚಂದ್ರ ಸೂರ್ಯ ನಕ್ಷತ್ರಗಳ ಪ್ರಕಾಶವಿಲ್ಲ. ಅಲ್ಲಿರುವ ಜನರು ದೇವಲೋಕದಿಂದ ಬಂದವರು. ಮುಪ್ಪು ಮರಣಗಳಿಲ್ಲದವರು. ಕಮಲದಂತೆ

ಜಂಬೂಫಲ ರಸಾಹಾರಾ ಅನಿಷ್ಯಂದಾಃ ಸುಗಂಧಿನಃ ।
ದೇವಲೋಕಾ ಗತಾಸ್ತತ್ರ ಜಾಯಂತೇ ಹ್ಯ ಜರಾಮರಾಃ ॥೪೦॥
ತ್ರಯೋದಶ ಸಹಸ್ರಾಣಿ ವರ್ಷಾಣಾಂ ತೇ ನರೋತ್ತಮಾಃ ।
ಆಯುಃ ಪ್ರಮಾಣಂ ಜೀವಂತಿ ವರ್ಷೇ ದಿವ್ಯೇ ಶ್ರಿಲಾವೃತೇ ॥೪೧॥
ಜಂಬೂಫಲ ರಸಂ ಪೀತ್ವಾ ನ ಜರಾ ಬಾಧತೇ ಶ್ರಿಮಾನ್ ।
ನ ಕ್ಷುಧಾ ನ ಕ್ಲಮಶ್ಚಾಪಿ ನ ಜನೋ ಮೃತ್ಯು ಮಾಂ ಸ್ತಥಾ ॥೪೨॥
ತತ್ರ ಜಾಂಬೂನದಂ ನಾಮ ಕನಕಂ ದೇವಭೂಷಣಂ ।
ಇಂದ್ರಗೋಪ ಪ್ರತೀಕಾಶಂ ಜಾಯತೇ ಭಾಸ್ವರಂ ತು ತತ್ ॥೪೩॥
ಏವಂ ಮಯಾ ಸಮಾಖ್ಯಾತಾ ನವ ವರ್ಷಾನು ವರ್ತಿನಃ ।
ವರ್ಣಾಯುಃ ಭೋಜನಾದ್ಯಾನಿ ಸಂಕ್ಷಿಪ್ಯ ನತು ವಿಸ್ತರಾತ್ ॥೪೪॥
ಹೇಮಕೂಟೇ ತು ಗಂಧರ್ವಾ ವಿಜ್ಞೇಯಾಶ್ಚಾಪ್ಸರೋಗಣಾಃ ।
ಸರ್ವೇ ನಾಗಾಶ್ಚ ನಿಷಧೇ ಶೇಷ ವಾಸುಕಿ ತಕ್ಷಕಾಃ ॥೪೫॥

---

ಮುಖವೂ, ಕಣ್ಣುಗಳೂ, ಶರೀರದ ವಾಸನೆಯೂ ಉಳ್ಳವರು. ಶಿವನನ್ನೇ ಧ್ಯಾನಮಾಡುತ್ತಾ ನೇರಳೆಯಹಣ್ಣಿನ ರಸವನ್ನೇ ಆಹಾರಮಾಡುತ್ತಾ ಶಕೆ, ಚಳಿ, ಮುಂತಾದುವುಗಳ ಬಾಧೆಗಳಿಲ್ಲದೇ ಇರುವರು.

೪೧–೪೩, ಆ ಜನರಿಗೆ ಹದಿಮೂರುಸಾವಿರ ವರ್ಷಗಳ ಆಯುಸ್ಸಿರುವುದು. ನೇರಳೇ ಹಣ್ಣಿನ ರಸವನ್ನು ಕುಡಿದ ಇವರನ್ನು ಮುಪ್ಪು ಮುಟ್ಟದು. ಹಸಿವಾಗಲೀ ಆಯಾಸವಾಗಲೀ, ಅಪಮೃತ್ಯುವಾಗಲೀ, ಇವರನ್ನು ತೊಂದರೆಗೊಳಿಸದು. ಅಲ್ಲಿ ಜಾಂಬೂನದವೆಂಬ ಚಿನ್ನವು ದೇವತೆಗಳಿಗೆ ಆಭರಣವಾಗಿರುವುದು. ಈ ಆಭರಣವೇ ಅವರಿಗೆ ಸೂರ್ಯನಂತೆ ಬೆಳಕನ್ನು ಕೊಡುವುದು.

೪೪. ಈ ರೀತಿಯಲ್ಲಿ ಒಂಬತ್ತುವರ್ಷ ಭಾಗಗಳಲ್ಲಿ ವಾಸಮಾಡುವವರ ವರ್ಣ, ಆಯುಸ್ಸು, ಆಹಾರ ಮೊದಲಾದುವುಗಳನ್ನು ಸಂಕ್ಷೇಪವಾಗಿ ಹೇಳಿರುವೆನು, ವಿಸ್ತರಿಸಿ ಹೇಳಲು ಸಾಧ್ಯವಿಲ್ಲ.

೪೫–೪೬. ಹೇಮಕೂಟ ಪರ್ವತದಲ್ಲಿ ಗಂಧರ್ವರೂ ಅಪ್ಸರಸ್ತ್ರೀಯರೂ ವಾಸವಾಗಿರುವರು. ನಿಷಧಪರ್ವತದಲ್ಲಿ ಶೇಷ, ವಾಸುಕಿ,

ಮಹಾಬಲಾ ಸ್ತ್ರಯಸ್ತ್ರಿಂಶ ದ್ರಮಂತೇ ಯಾಜ್ಞಿಕಾಃ ಸುರಾಃ ।
ನೀಲೇ ತು ವೈಡೂರ್ಯಮಯೇ ಸಿದ್ಧಾ ಬ್ರಹ್ಮರ್ಷಯೋಽಮಲಾಃ ॥೪೬॥
ದೈತ್ಯಾನಾಂ ದಾನವಾನಾಂ ಚ ಶ್ವೇತಃ ಪರ್ವತ ಉಚ್ಯತೇ ।
ಶೃಂಗವಾನ್ ಪರ್ವತಶ್ಚೈವ ಪಿತೄಣಾಂ ನಿಲಯಃ ಸದಾ ॥೪೭॥
ಹಿಮವಾನ್ ಯಕ್ಷಮುಖ್ಯಾನಾಂ ಭೂತಾನಾ ಮೀಶ್ವರಸ್ಯ ಚ ।
ಸರ್ವಾದ್ರಿಷು ಮಹಾದೇವೋ ಹರಿಣಾ ಬ್ರಹ್ಮಣಾಂಬಯಾ ॥೪೮॥
ನಂದಿನಾ ಚ ಗಣೈಶ್ಚೈವ ವರ್ಷೇಷು ಚ ವನೇಷು ಚ ।
ನೀಲ ಶ್ವೇತತ್ರಿಶೃಂಗೇ ಚ ಭಗವಾನ್ ನೀಲಲೋಹಿತಃ ॥೪೯॥

---

ತಕ್ಷಕ, ಮುಂತಾದ ಸಮಸ್ತ ನಾಗರೂ ಇರುವರು. ವೈಡೂರ್ಯ, ರತ್ನ, ಇವುಗಳು ತುಂಬಿರುವ ನೀಲಪರ್ವತದಲ್ಲಿ ಯಜ್ಞಕರ್ಮದಿಂದ ದೇವತ್ವ ವನ್ನು ಪಡೆದ ಮಹಾಬಲಶಾಲಿಗಳಾದ ಮೂವತ್ತುಮೂರು ದೇವತೆಗಳು ಕ್ರೀಡಿಸುತ್ತಿರುವರು. ಅಲ್ಲದೆ ಬ್ರಹ್ಮರ್ಷಿಗಳೂ ಸಿದ್ಧರೂ, ಅಲ್ಲಿ ವಾಸವಾಗಿರುವರು.

೪೭. ಶ್ವೇತ ಪರ್ವತವು ದೈತ್ಯರಿಗೂ. ದಾನವರಿಗೂ, ವಾಸಸ್ಥಾನ ವಾಗಿರುವುದು. ಶೃಂಗಪರ್ವತದಲ್ಲಿ ಪಿತೃದೇವತೆಗಳು ಯಾವಾಗಲೂ ಇರುವರು. ಹಿಮವತ್ಪರ್ವತವು ಯಕ್ಷರಿಗೂ, ಭೂತಗಳಿಗೂ ವಾಸ ಸ್ಥಾನ ವಾಗಿರುವುದು.

೪೮. ಸಮಸ್ತ ಪರ್ವತಗಳಲ್ಲಿಯೂ, ವರ್ಷಗಳಲ್ಲಿಯೂ, ವನಗಳಲ್ಲಿ ಯೂ, ಮಹಾದೇವನಾದ ಶಿವನು, ದೇವೀ, ಹರಿ, ಬ್ರಹ್ಮ, ನಂದಿ ಗಳೊಡನೆ ಸಮಸ್ತಗಣಗಳಿಂದ ಕೂಡಿ ವಾಸಿಸುವನು.

೪೯-೫೦. ನೀಲ, ಶ್ವೇತ, ತ್ರಿಶೃಂಗವೆಂಬ ಮೂರು ಪರ್ವತಗಳಲ್ಲಿ ಮಹಾಮಹಿಮನಾದ ನೀಲಲೋಹಿತನೆಂಬ ರುದ್ರನು, ಸಿದ್ಧರು, ದೇವತೆ ಗಳು, ಪಿತೃದೇವತೆಗಳು ಇವರುಗಳಿಂದ ಕೂಡಿ ಯಾವಾಗಲೂ ವಾಸ

ಸಿದ್ಧೈ ರ್ದೇವೈಶ್ಚ ಪಿತೃಭಿಃ ದೃಷ್ಟೋ ನಿತ್ಯಂ ವಿಶೇಷತಃ ।
ನೀಲಶ್ಚ ವೈಡೂರ್ಯಮಯಃ ಶ್ವೇತಃ ಶುಕ್ಲೋ ಹಿರಣ್ಮಯಃ ॥೫೦॥
ಮಯೂರ ಬರ್ಹ ವರ್ಣಸ್ತು ಶಾತ ಕುಂಭಸ್ತ್ರಿಶೃಂಗವಾನ್ ।
ಏತೇ ಪರ್ವತರಾಜಾನೋ ಜಂಬೂದ್ವೀಪೇ ವ್ಯವಸ್ಥಿತಾಃ ॥೫೧॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಭುವನಕೋಶಸ್ವಭಾವ ವರ್ಣನಂನಾಮ ದ್ವಿಪಂಚಾಶತ್ತಮೋಽಧ್ಯಾಯಃ

---

ವಾಗಿರುವನು. ನೀಲಪರ್ವತದಲ್ಲಿ ವೈಡೂರ್ಯ, ರತ್ನಗಳು ವಿಶೇಷವಾಗಿ ರುವುವು. ಶ್ವೇತಪರ್ವತವು ಬೆಳ್ಳಗಿರುವುದು. ತ್ರಿಶೃಂಗಪರ್ವತವು ಚಿನ್ನದ ಬಣ್ಣವಾಗಿಯೂ, ನವಿಲುಗರಿಯ ಬಣ್ಣ ಉಳ್ಳದ್ದಾಗಿಯೂ, ಇರುವುದು.

೫೧. ಈ ಪರ್ವತ ಶ್ರೇಷ್ಠಗಳು ಜಂಬೂ ದ್ವೀಪದಲ್ಲಿ ಒಂದು ಕ್ರಮ ದಿಂದ ಇರುವುವು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಭೂಮಂಡಲದ ವಿವರ ವಿಶೇಷಗಳನ್ನು ವರ್ಣಿಸಿರುವ ಐವತ್ತೆರಡನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ತ್ರಿಪಂಚಾಶತ್ತಮೋಽಧ್ಯಾಯಃ

**ತ್ರಿಪಂಚಾಶತ್ತಮೇ ಪ್ರೋಕ್ತಂ ಪ್ಲಕ್ಷದ್ವೀಪಾದ್ಯನುಕ್ರಮಾತ್ ।**
**ಭೂಲೋಕಶ್ಚೋರ್ಧ್ವ ಲೋಕಶ್ಚ ನರಕಾ ಯಕ್ಷಚೇಷ್ಟಿತಂ ॥**

**॥ ಸೂತ ಉವಾಚ ॥**

**ಪ್ಲಕ್ಷದ್ವೀಪಾದಿ ದ್ವೀಪೇಷು ಸಪ್ತಸಪ್ತಸು ಪರ್ವತಾಃ ।**
**ಋಜ್ವಾಯತಾಃ ಪ್ರತಿದಿಶಂ ನಿವಿಷ್ಟಾಃ ವರ್ಷಪರ್ವತಾಃ ॥ ೧ ॥**
**ಪ್ಲಕ್ಷದ್ವೀಪೇ ತು ವಕ್ಷ್ಯಾಮಿ ಸಪ್ತ ದಿವ್ಯಾನ್ಮಹಾಚಲಾನ್ ।**
**ಗೋಮೇದ ಕೋಽತ್ರ ಪ್ರಥಮೋ ದ್ವಿತೀಯಶ್ಚಾಂದ್ರ ಉಚ್ಯತೇ॥ ೨ ॥**
**ತೃತೀಯೋ ನಾರದೋನಾಮ ಚತುರ್ಥೋ ದುಂದುಭಿಃ ಸ್ಮೃತಃ ।**
**ಪಂಚಮಃ ಸೋಮಕೋ ನಾಮ ಸುಮನಾಃ ಷಷ್ಠ ಉಚ್ಯತೇ॥ ೩ ॥**
**ಸ ಏವ ವೈಭವಃ ಪ್ರೋಕ್ತೋ ವೈಭ್ರಾಜಃ ಸಪ್ತಮಃ ಸ್ಮೃತಃ।**
**ಸಪ್ತೈತೇ ಗಿರಯಃ ಪ್ರೋಕ್ತಾಃ ಪ್ಲಕ್ಷದ್ವೀಪೇ ವಿಶೇಷತಃ ॥ ೪ ॥**

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಐವತ್ತುಮೂರನೆಯ ಅಧ್ಯಾಯವು.

(ಈ ಐವತ್ತು ಮೂರನೆಯ ಅಧ್ಯಾಯದಲ್ಲಿ ಪ್ಲಕ್ಷದ್ವೀಪ ಮೊದಲುಗೊಂಡು ಭೂಲೋಕ, ಸ್ವರ್ಗಲೋಕಗಳೂ, ನರಕಗಳೂ, ಯಕ್ಷರ ವ್ಯಹಾರಗಳೂ, ಹೇಳಲ್ಪಡುವುವು.)

೧. ಪ್ಲಕ್ಷಾದಿ ಏಳುಏಳು ದ್ವೀಪಗಳಲ್ಲಿಯೂ, ದೇಶವನ್ನು ಬೇರೆಯಾಗಿ ವಿಭಾಗಮಾಡುವ, ಎತ್ತರವಾಗಿಯೂ, ಅಗಲವಾಗಿಯೂ ಇರುವ, ದಿಕ್ಕು ದಿಕ್ಕಿಗೂ ವ್ಯಾಪಿಸಿರುವ ಪರ್ವತಗಳು ಇವೆ.

೨–೪. ಪ್ಲಕ್ಷದ್ವೀಪದಲ್ಲಿರುವ ಏಳು ಮಹಾಪರ್ವತಗಳನ್ನೂ ಹೇಳುವೆನು. ಗೋಮೇದಕವೆಂತಲೂ, ಚಾಂದ್ರ, ನಾರದ, ದುಂದುಭಿ, ಸೋಮಕ, ಸುಮನ, ವೈಭ್ರಾಜ ಎಂಬುವು ಕ್ರಮವಾಗಿ ಏಳು ಪರ್ವತಗಳ ಹೆಸರು. ಆಪ್ಲಕ್ಷದ್ವೀಪದಲ್ಲಿ ಈ ಏಳು ಪರ್ವತಗಳೇ ವಿಶೇಷವಾದವುಗಳು.

ಸಪ್ತ ವೈ ಶಾಲ್ಮಲೀದ್ವೀಪೇ ತಾಂಸ್ತು ವಕ್ಷ್ಯಾಮ್ಯನುಕ್ರಮಾತ್।
ಕುಮುದಶ್ಚೋತ್ತಮಶ್ಚೈವ ಪರ್ವತಶ್ಚ ಬಲಾಹಕಃ ॥ ೫ ॥

ದ್ರೋಣಃ ಕಂಕಶ್ಚ ಮಹಿಷಃ ಕಕುದ್ಮಾನ್ ಸಪ್ತಮಃ ಸ್ಮೃತಃ।
ಕುಶದ್ವೀಪೇ ತು ಸಪ್ತೈವ ದ್ವೀಪಾಶ್ಚ ಕುಲಪರ್ವತಾಃ ॥ ೬ ॥

ತಾಂಸ್ತು ಸಂಕ್ಷೇಪತೋ ವಕ್ಷ್ಯೇ ನಾಮಮಾತ್ರೇಣ ವೈ ಕ್ರಮಾತ್।
ವಿದ್ರುಮಃ ಪ್ರಥಮಃ ಪ್ರೋಕ್ತೋ ದ್ವಿತೀಯೋ ಹೇಮಪರ್ವತಃ ॥

ತೃತೀಯೋ ದ್ಯುತಿಮಾನ್ನಾಮ ಚತುರ್ಥಃ ಪುಷ್ಪಿತಃ ಸ್ಮೃತಃ।
ಕುಶೇಶಯಃ ಪಂಚಮಸ್ತು ಷಷ್ಠೋ ಹರಿಗಿರಿಃ ಸ್ಮೃತಃ ॥ ೮ ॥

ಸಪ್ತಮೋ ಮಂದರಃ ಶ್ರೀಮಾನ್ ಮಹಾದೇವ ನಿಕೇತನಂ।
ಮಂದಾ ಇತಿ ಹ್ಯಪಾಂ ನಾಮ ಮಂದರೋ ಧಾರಣಾದಪಾಂ ॥ ೯ ॥

ತತ್ರ ಸಾಕ್ಷಾದ್ವೃಷಾಂಕಸ್ತು ವಿಶೇಷೋ ವಿಮಲಃ ಶಿವಃ।
ಸೋಮಃ ಸನಂದೀ ಭಗವಾನಾಸ್ತೇ ಹೇಮಗೃಹೋತ್ತಮೇ ॥೧೦॥

---

೫. ಶಾಲ್ಮಲೀದ್ವೀಪದಲ್ಲಿರುವ ಏಳು ಪರ್ವತಗಳನ್ನು ಹೇಳುವೆನು. ಕುಮುದ, ಉತ್ತಮ, ಬಲಾಹಕ, ದ್ರೋಣ, ಕಂಕ, ಮಹಿಷ, ಕಕುದ್ಮಾನ್, ಎಂಬಿವೇ ಆ ಪರ್ವತಗಳ ಹೆಸರುಗಳು.

೬-೯. ಕುಶದ್ವೀಪದಲ್ಲಿ ಏಳು ಕುಲಪರ್ವತಗಳೂ, ದ್ವೀಪಗಳೂ ಇವೆ. ಅವುಗಳ ಹೆಸರನ್ನು ಸಂಕ್ಷೇಪವಾಗಿ ಹೇಳುವೆನು. ವಿದ್ರುಮ, ಹೇಮಪರ್ವತ, ದ್ಯುತಿಮಾನ್, ಪುಷ್ಪಿತ, ಕುಶೇಶಯ, ಹರಿಗಿರಿ, ಮಂದರ. ಆ ಮಂದರ ಪರ್ವತದಲ್ಲಿ ಶಿವನು ವಾಸವಾಗಿರುವನು. ಮಂದಾ ಎಂದರೆ ನೀರಿಗೆ ಹೆಸರು. ಇದರಲ್ಲಿ ನೀರು ಇರುವುದರಿಂದ ಮಂದರ ಎಂದು ಹೆಸರಾಯಿತು.

೧೦. ಈ ಮಂದರ ಪರ್ವತದಲ್ಲಿ ಪ್ರಪಂಚಕ್ಕೆ ಒಡೆಯನಾದ ನಿಷ್ಕಳಂಕವಾದ, ವೃಷಭವನ್ನೆ ಧ್ವಜ ಚಿಹ್ನೆಯಾಗಿಯುಳ್ಳ ಶಿವನು, ಪಾರ್ವತೀ, ನಂದೀ, ಇವರೊಡನೆ ಇಲ್ಲಿಯ ಉತ್ತಮವಾದ ಚಿನ್ನದ ಗೃಹದಲ್ಲಿ ವಾಸ ಮಾಡುತ್ತಿರುವನು.

ತಪಸಾ ತೋಷಿತಃ ಪೂರ್ವಂ ಮಂದರೇಣ ಮಹೇಶ್ವರಃ ।
ಅವಿಮುಕ್ತಮಹಾಕ್ಷೇತ್ರೇ ಲೇಭೇ ಸ ಪರಮಂ ವರಂ ॥೧೧॥

ಪ್ರಾರ್ಥಿತಶ್ಚ ಮಹಾದೇವೋ ನಿವಾಸಾರ್ಥಂ ಸಹಾಂಬಯಾ ।
ಅವಿಮುಕ್ತಾದುಪಾಗಮ್ಯ ಚಕ್ರೇ ವಾಸಂ ಸ ಮಂದರೇ ॥೧೨॥

ಸನಂದೀ ಸಗಣಃ ಸೋಮಸ್ತೇ ನಾಸೌ ತನ್ನ ಮುಂಚತಿ ।
ಕ್ರೌಂಚದ್ವೀಪೇ ತು ಸಪ್ತೇಹ ಕ್ರೌಂಚಾದ್ಯಾಃ ಕುಲಪರ್ವತಾಃ॥೧೩॥

ಕ್ರೌಂಚೋ ವಾಮನಕಃ ಪಶ್ಚಾತ್ತೃತೀಯಶ್ಚಾಂಧಕಾರಕಃ ।
ಅಂಧಕಾರಾತ್ಪರಶ್ಚಾಪಿ ದಿವಾವೃನ್ನಾಮ ಪರ್ವತಃ ॥೧೪॥

ದಿವಾವೃತಃ ಪರಶ್ಚಾಪಿ ವಿವಿಂದೋ ಗಿರಿರುಚ್ಯತೇ ।
ವಿವಿಂದಾತ್ಪರ ತಶ್ಚಾಪಿ ಪುಂಡರೀಕೋ ಮಹಾಗಿರಿಃ ॥೧೫॥

ಪುಂಡರೀಕಾತ್ಪರಶ್ಚಾಪಿ ಪ್ರೋಚ್ಯತೇ ದುಂದುಭಿಸ್ವನಃ ।
ಏತೇ ರತ್ನಮಯಾಸ್ಸಪ್ತ ಕ್ರೌಂಚದ್ವೀಪಸ್ಯ ಪರ್ವತಾಃ ॥೧೬॥

---

೧೧-೧೨. ಪೂರ್ವದಲ್ಲಿ ಮಂದರಪರ್ವತವು, ಅವಿಮುಕ್ತವೆಂಬ ಕ್ಷೇತ್ರದಲ್ಲಿ ಈಶ್ವರನನ್ನು ಕುರಿತು ತಪಸ್ಸುಮಾಡಿತು. ಆ ತಪಸ್ಸಿನಿಂದ ಸಂತುಷ್ಟನಾದ ಪರಮೇಶ್ವರನು ವರವನ್ನು ಕೊಟ್ಟನು. ವರವೇನೆಂದರೆ, ಪಾರ್ವತಿಯೊಡನೆ ಈಶ್ವರನು ಮಂದರಪರ್ವತದಲ್ಲಿ ವಾಸಮಾಡ ಬೇಕೆಂಬ ಪ್ರಾರ್ಥನೆಯು. ಆಗ ಮಹಾದೇವನು ಆ ಅವಿಮುಕ್ತಕ್ಷೇತ್ರದಿಂದ ಹೊರಟುಬಂದು ಪಾರ್ವತಿಯೊಡನೆಯೂ, ನಂದಿಯೊಡನೆಯೂ, ಪ್ರಮಥ ಗಣಗಳೊಡನೆಯೂ, ಮಂದರಪರ್ವತದಲ್ಲಿ ವಾಸಮಾಡುತ್ತಿರುವನು. ವರವನ್ನು ಕೊಟ್ಟದ್ದರಿಂದ ಮಂದರಪರ್ವತವನ್ನು ಎಂದಿಗೂ ಶಿವನು ಬಿಡುವುದಿಲ್ಲ.

೧೨-೧೬. ಕ್ರೌಂಚದ್ವೀಪದಲ್ಲಿ ಕ್ರೌಂಚವೇ ಮೊದಲಾದ ಏಳು ಕುಲಪರ್ವತಗಳಿರುವುವು. ಕ್ರೌಂಚ, ವಾಮನಕ, ಅಂಧಕಾರಕ, ದಿವಾವೃತ್, ವಿವಿಂದ, ಪುಂಡರೀಕ, ದುಂದುಭಿಸ್ವನ, ಇವೆಲ್ಲವೂ ಕ್ರಮವಾಗಿ ಆ ಪರ್ವತಗಳ ಹೆಸರುಗಳು. ಇವೆಲ್ಲವೂ ರತ್ನಮಯವಾದವುಗಳು.

ಶಾಕದ್ವೀಪೇ ಚ ಗಿರಯಃ ಸಪ್ತ ತಾಂಸ್ತು ನಿಬೋಧತ ।
ಉದಯೋ ರೈವತಶ್ಚಾಪಿ ಶ್ಯಾಮಕೋ ಮುನಿಸತ್ತಮಾಃ ॥೧೭॥
ರಜತಶ್ಚ ಗಿರಿಃ ಶ್ರೀಮಾನಾಂಬಿಕೇಯಃ ಸುಶೋಭನಃ ।
ಆಂಬಿಕೇಯಾತ್ಪರೋ ರಮ್ಯಃ ಸರ್ವೌಷಧಿಸಮನ್ವಿತಃ ॥೧೮॥
ತಥೈವ ಕೇಸರೀತ್ಯುಕ್ತಃ ಯತೋ ವಾಯುಃ ಪ್ರಜಾಯತೇ ।
ಪುಷ್ಕರೇ ಪರ್ವತಃ ಶ್ರೀಮಾನೇಕ ಏವ ಮಹಾಶಿಲಃ ॥೧೯॥
ಚಿತ್ರೈರ್ಮಣಿಮಯೈಃ ಕೂಟೈಃ ಶಿಲಾಜಾಲೈಃ ಸಮುಚ್ಛ್ರಿತೈಃ ।
ದ್ವೀಪಸ್ಯ ತಸ್ಯ ಪೂರ್ವಾರ್ಧೇ ಚಿತ್ರಸಾನುಸ್ಥಿತೋ ಮಹಾನ್ ॥೨೦॥
ಯೋಜನಾನಾಂ ಸಹಸ್ರಾಣಿ ಊರ್ಧ್ವಂ ಪಂಚಾಶದುಚ್ಛ್ರಿತಃ ।
ಅಥಶ್ಚೈವ ಚತುಸ್ತ್ರಿಂಶ ತ್ಸಹಸ್ರಾಣಿ ಮಹಾಚಲಃ ॥೨೧॥

---

೧೭–೧೮. ಎಲೈ ಮುನಿಗಳೇ, ಶಾಕದ್ವೀಪದಲ್ಲಿ ಏಳುಪರ್ವತಗಳಿವೆ. ಅದನ್ನು ಕೇಳಿರಿ. ಉದಯ, ರೈವತ, ಶ್ಯಾಮುಕ, ರಜತ, ಮನೋಹರವಾದ ಆಂಬಿಕೇಯ, ಎಲ್ಲ ಔಷಧಿಗಳಿಂದಲೂ ತುಂಬಿರುವ ರಮ್ಯಪರ್ವತ, ವಾಯುವಿನ ಉತ್ಪತ್ತಿಸ್ಥಾನವಾದ ಕೇಸರಿ, ಇವುಗಳೇ ಏಳುಪರ್ವತಗಳು.

೧೯. ಪುಷ್ಕರದ್ವೀಪದಲ್ಲಿ ಚಿತ್ರವಿಚಿತ್ರವಾಗಿಯೂ, ರತ್ನಗಳಿಂದ ಕೂಡಿಯೂ ಇರುವ ಶಿಖರಗಳಿಂದ ಶೋಭಿಸುತ್ತಿರುವ ದೊಡ್ಡ ದೊಡ್ಡ ಕಲ್ಲುಬಂಡೆಗಳಿಂದ ಕೂಡಿರುವ ಒಂದೇ ಒಂದು ಮಹಾಶಿಲವೆಂಬ ಪರ್ವತವಿರುವುದು.

೨೦–೨೧. ಆ ಪುಷ್ಕರ ದ್ವೀಪದ ಪೂರ್ವಾರ್ಧದಲ್ಲಿ ದೊಡ್ಡದಾಗಿರುವ ಚಿತ್ರವರ್ಣವಾಗಿರುವ ಶಿಖರಗಳುಳ್ಳ ಆ ಮಹಾಶಿಲ ಪರ್ವತವು ಹಬ್ಬಿದೆ. ಅದು ಐವತ್ತುಸಾವಿರಯೋಜನ ಮೇಲಕ್ಕೂ, ಮೂವತ್ತು ನಾಲ್ಕು ಸಾವಿರಯೋಜನ ಕೆಳಕ್ಕೂ ಹಬ್ಬಿ ದೊಡ್ಡಪರ್ವತವಾಗಿರುವುದು.

ದ್ವೀಪಸ್ಯಾರ್ಧೇ ಪರಿಕ್ಷಿಪ್ತಃ ಪರ್ವತೋ ಮಾನಸೋತ್ತರಃ ।
ಸ್ಥಿತೋ ವೇಲಾಸಮೀಪೇ ತು ನವಚಂದ್ರ ಇವೋದಿತಂ ॥೨೨॥

ಯೋಜನಾನಾಂ ಸಹಸ್ರಾಣಿ ಊರ್ಧ್ವಂ ಪಂಚಾಶದುಚ್ಛ್ರಿತಃ ।
ತಾವದೇವ ತು ವಿಸ್ತೀರ್ಣಃ ಪಾರ್ಶ್ವತಃ ಪರಿಮಂಡಲಃ ॥೨೩॥

ಸ ಏವ ದ್ವೀಪಪಶ್ಚಾರ್ಧೇ ಮಾನಸಃ ಪೃಥಿವೀಧರಃ ।
ಏಕ ಏವ ಮಹಾಸಾನುಃ ಸನ್ನಿವೇಶಾತ್ ದ್ವಿಧಾಕೃತಃ ॥೨೪॥

ತಸ್ಮಿನ್ ದ್ವಿಪೇ ಸ್ಮೃತೌದ್ವೌ ತು ಪುಣ್ಯೌ ಜನಪದೌ ಶುಭೌ ।
ರಾಜತೌ ಮಾನಸಸ್ಯಾಥ ಪರ್ವತಸ್ಯಾನು ಮಂಡಲೌ ॥೨೫॥

ಮಹಾವೀತಂ ತು ಯದ್ವರ್ಷಂ ಬಾಹ್ಯತೋ ಮಾನಸಸ್ಯ ತು ।
ತಸ್ಯೈವಾಭ್ಯಂತ ರೋ ಯಸ್ತು ಧಾತಕೀಖಂಡ ಉಚ್ಯತೇ ॥೨೬॥

---

ಮತ್ತು ಆ ದ್ವೀಪದ ಅರ್ಧವನ್ನು ಆವರಿಸಿ ಮಾನಸಕ್ಕೆ ಉತ್ತರವಾಗಿ ತಟದ ಸಮೀಪದಲ್ಲಿದ್ದು ಆಗ ತಾನೇ ಹುಟ್ಟಿದ ಚಂದ್ರನಂತೆ ಪ್ರಕಾಶಿಸುತ್ತಾ ಎತ್ತರದಲ್ಲಿ ಐವತ್ತು ಸಾವಿರಯೋಜನವೂ, ಅಗಲದಲ್ಲಿ ಅಷ್ಟೇ ವಿಸ್ತೀರ್ಣ ಉಳ್ಳದ್ದಾಗಿರುವುದು. ಅದೇ ಪರ್ವತವು ದ್ವೀಪದ ಉತ್ತರಾರ್ಧದಲ್ಲಿ ಮಾನಸವೆಂಬ ಹೆಸರಿನಿಂದ ಹಬ್ಬಿರುವುದು. ಒಂದೇ ಪರ್ವತವೇ ಸ್ಥಾನವಿಭಾಗದಿಂದ ಎರಡಾಗಿ ಭಾಗಿಸಲ್ಪಟ್ಟಿರುವುದು.

೨೫–೨೬. ಆ ಪುಷ್ಕರ ದ್ವೀಪದಲ್ಲಿ ಪುಣ್ಯಕರವಾದ, ಮಂಗಳಕರವಾದ ಎರಡು ದೇಶಗಳಿವೆ. ಅವು ಮಾನಸ ಪರ್ವತವನ್ನು ಸುತ್ತಿಕೊಂಡು ಪ್ರಕಾಶಿಸುತ್ತಿವೆ. ಮಹಾವೀತ ಎಂಬ ಒಂದು ದೇಶವು ಮಾನಸಪರ್ವತದ ಹೊರಗಡೆ ಇದೆ. ಧಾತಕೀ ಖಂಡವೆಂಬ ಒಂದು ದೇಶವು ಮಾನಸ ಪರ್ವತದ ಒಳಭಾಗದಲ್ಲಿದೆ.

ಸ್ವಾದೂದ ಕೇನೋ ದಧಿನಾ ಪುಷ್ಕರಃ ಪರಿವಾರಿತಃ ।
ಪುಷ್ಕರದ್ವೀಪವಿಸ್ತಾರ ವಿಸ್ತೀರ್ಣೋಽಸೌ ಸಮಂತತಃ ॥೨೭॥

ವಿಸ್ತಾರಾನ್ಮಂಡಲಾಚ್ಚೈವ ಪುಷ್ಕರಸ್ಯ ಸಮೇನ ತು ।
ಏವಂದ್ವೀಪಾಃ ಸಮುದ್ರೈಸ್ತು ಸಪ್ತಸಪ್ತಭಿರಾವೃತಾಃ ॥೨೮॥

ದ್ವೀಪಸ್ಯಾನಂತರೋ ಯಸ್ತು ಸಮುದ್ರಃ ಸಪ್ತಮಸ್ತು ವೈ ।
ಏವಂ ದ್ವೀಪಸಮುದ್ರಾಣಾಂ ವೃದ್ಧಿರ್ಜ್ಞೇಯಾ ಪರಸ್ಪರಂ ॥೨೯॥

ಪರೇಣ ಪುಷ್ಕರಸ್ಯಾಥ ಅನುವೃತ್ಯ ಸ್ಥಿತೋ ಮಹಾನ್ ।
ಸ್ವಾದೂದಕ ಸಮುದ್ರಸ್ತು ಸಮಂತಾತ್ಪರಿ ವೇಷ್ಟ್ಯ ಚ ॥೩೦॥

ಪರೇಣ ತಸ್ಯ ಮಹತೀ ದೃಶ್ಯತೇ ಲೋಕ ಸಂಸ್ಥಿತಿಃ ।
ಕಾಂಚನೀ ದ್ವಿಗುಣಾ ಭೂಮಿಃ ಸರ್ವಾಚೈಕ ಶಿಲೋಪಮಾ ॥೩೧॥

---

೨೭. ಸಿಹಿಯಾದ ನೀರಿನಿಂದ ಕೂಡಿದ ಉದಧಿಯಿಂದಲೂ, ಪುಷ್ಕರ ದ್ವೀಪವು ಸುತ್ತುವರಿಯಲ್ಪಟ್ಟಿದೆ. ಅಲ್ಲಿರುವ ದ್ವೀಪವೂ ಪುಷ್ಕರದ್ವೀಪ ದಂತೆಯೇ ಸುತ್ತಲೂ ವಿಸ್ತಾರವುಳ್ಳದ್ದಾಗಿರುವುದು.

೨೮-೨೯. ಮತ್ತು ವಿಸ್ತಾರದಲ್ಲಿಯೂ, ಸುತ್ತುವರಿಯುವಿಕೆಯಲ್ಲಿಯೂ, ಪುಷ್ಕರದ್ವೀಪಕ್ಕೆ ಸಮವಾಗಿಯೇ ಇರುವುದು. ಈ ರೀತಿಯಾಗಿ ದ್ವೀಪಗಳು ಏಳುಏಳು ಸಮುದ್ರಗಳಿಂದ ಆವೃತವಾಗಿರುವುವು. ದ್ವೀಪವು ಮುಗಿಯಲು ಏಳನೆಯ ಸಮುದ್ರವು ಸಿಕ್ಕುವುದು. ಈ ರೀತಿಯಾಗಿ ಸಮುದ್ರದ ಮಧ್ಯದಲ್ಲಿ ದ್ವೀಪಗಳಿರುವುದರಿಂದಲೂ, ಸಮುದ್ರಗಳು ದ್ವೀಪಗಳನ್ನು ಆವರಿಸಿರುವುದರಿಂದಲೂ, ಪರಸ್ಪರ ದ್ವೀಪಗಳ ಮತ್ತು ಸಮುದ್ರಗಳ ಅಭಿವೃದ್ಧಿಯಾಗುವುದೆಂದು ತಿಳಿಯತಕ್ಕದ್ದು.

೩೦. ಆ ಪುಷ್ಕರದ್ವೀಪವನ್ನು ಆವರಿಸಿರುವ ದೊಡ್ಡದಾದ ಸಿಹಿನೀರಿನ ಸಮುದ್ರವು ಆ ದ್ವೀಪವನ್ನು ಸುತ್ತಿಕೊಂಡಿದೆ.

೩೧. ಆ ಸಮುದ್ರವಾದನಂತರ ಒಂದು ದೊಡ್ಡ ಏಕಶಿಲಾಪರ್ವತ (ಮಹಾಶಿಲಾ) ದಂತೆ ವಿಶಾಲವಾದ ಭೂಮಿಯು ಎರಡರಷ್ಟು ಕಾಂಚನೀ ಎಂಬ ದೇಶವಿದೆ.

ತಸ್ಯಾಃ ಪರೇಣ ಶೈಲಸ್ತು ಮರ್ಯಾದಾಪಾರಮಂಡಲಃ ।
ಪ್ರಕಾಶಶ್ಚಾಪ್ರಕಾಶಶ್ಚ ಲೋಕಾ ಲೋಕಃ ಸ ಉಚ್ಯತೇ ॥೩೨॥
ದೃಶ್ಯಾದೃಶ್ಯ ಗಿರಿರ್ಯಾವತ್ತಾವದೇಷಾ ಧರಾ ದ್ವಿಜಾಃ ।
ಯೋಜನಾನಾಂ ಸಹಸ್ರಾಣಿ ದಶ ತಸ್ಯೋಚ್ಛ್ರಯಃ ಸ್ಮೃತಃ ॥೩೩॥
ತಾವಾಂಶ್ಚ ವಿಸ್ತರಸ್ತಸ್ಯ ಲೋಕಾಲೋಕ ಮಹಾಗಿರೇಃ ।
ಅರ್ವಾಚೀನೇ ತು ತಸ್ಯಾರ್ಧೇ ಚರಂತಿ ರವಿರಶ್ಮಯಃ ॥೩೪॥
ಪರಾರ್ಧೇ ತಂ ತಮೋ ನಿತ್ಯಂ ಲೋಕಾಲೋಕಸ್ತತಃ ಸ್ಮೃತಃ ।
ಏವಂ ಸಂಕ್ಷೇಪತಃ ಪ್ರೋಕ್ತೋ ಭೂರ್ಲೋಕಸ್ಯ ಚ ವಿಸ್ತರಃ ॥೩೫॥
ಅಭಾನೋರ್ವೈ ಭುವಃ ಸ್ವಸ್ತು ಆಧ್ರುವಾನ್ಮುನಿಸತ್ತಮಾಃ ।
ಆವಹಾದ್ಯಾನಿವಿಷ್ಟಾಸ್ತು ವಾಯೋರ್ವೈ ಸಪ್ತ ನೇಮಯಃ ॥೩೬॥

---

೩೨. ಆ ದೇಶವಾದ ನಂತರ ತನ್ನ ಎಲ್ಲೆಯನ್ನೂ ಸಹದಾಟ ಹಬ್ಬಿರುವ, ಕೆಲವೆಡೆ ಪ್ರಕಾಶವಾಗಿಯೂ, ಕೆಲವೆಡೆ ಅಪ್ರಕಾಶವಾಗಿಯೂ, ಇರುವ ಲೋಕಾಲೋಕವೆಂಬ ಪರ್ವತವುಂಟು.

೩೩. ಎಲೈ ಬ್ರಾಹ್ಮಣರೇ, ಈ ಲೋಕಾಲೋಕಗಿರಿಯು ಎಲ್ಲಿಯ ವರೆಗೆ ಇರುತ್ತದೆಯೋ ಅಲ್ಲಿಯವರೆಗೂ ಈ ಭೂಮಿಯು ಸ್ಥಿರವಾಗಿರುತ್ತದೆ. ಈ ಲೋಕಾಲೋಕ ಪರ್ವತವು ಎತ್ತರದಲ್ಲಿಯೂ, ಅಗಲದಲ್ಲಿಯೂ, ಹತ್ತುಸಾವಿರಯೋಜನ ವಿಸ್ತೀರ್ಣವುಳ್ಳದಾಗಿದೆ.

೩೪. ಆ ಪರ್ವತದ ಪೂರ್ವಾರ್ಧದಲ್ಲಿ ಸೂರ್ಯನ ಕಿರಣಗಳು ಸಂಚರಿಸುವುವು. ಆದುದರಿಂದ ಅಲ್ಲಿ ಲೋಕ (ಬೆಳಕು) ವಿದೆ. ಅದರ ಪಶ್ಚಿಮಾರ್ಧದಲ್ಲಿ ಯಾವಾಗಲೂ ಅಂಧಕಾರವಿರುವುದರಿಂದ ಅಲ್ಲಿ ಅಲೋಕ (ಕತ್ತಲು) ವಿರುವುದು. ಆದುದರಿಂದ ಈ ಪರ್ವತಕ್ಕೆ ಲೋಕಾಲೋಕವೆಂದು ಹೆಸರು ಬಂದಿದೆ.

೩೫. ಈ ರೀತಿಯಾಗಿ ಸಂಕ್ಷೇಪವಾಗಿ ಭೂಲೋಕದ ವಿಸ್ತಾರವು ಹೇಳಲ್ಪಟ್ಟಿತು. ಎಲೈ ಮುನಿಶ್ರೇಷ್ಠರೇ, ಸೂರ್ಯಮಂಡಲದ ಪರ್ಯಂತ ಭೂಲೋಕವು ವ್ಯಾಪಿಸಿದೆ. ಸ್ವರ್ಲೋಕವಾದರೋ ಆ ಧ್ರುವಮಂಡಲದ ಪರ್ಯಂತವಾಗಿ ವ್ಯಾಪಿಸಿದೆ.

ಆವಹಃ ಪ್ರವಹಶ್ಚೈವ ತತಶ್ಚಾನುವಹಸ್ತಥಾ ।
ಸಂವಹೋ ವಿವಹಶ್ಚಾಥ ತತಶ್ಚೋರ್ಧ್ವಂಪರಾವಹಃ ॥೩೭॥

ದ್ವಿಜಾಃ ಪರಿವಹಶ್ಚೇತಿ ವಾಯೋರ್ವೈ ಸಪ್ತನೇಮಯಃ
ಬಲಾಹಕಾಸ್ತಥಾ ಭಾನುಶ್ಚಂದ್ರೋ ನಕ್ಷತ್ರರಾಶಯಃ ॥೩೮॥

ಗೃಹಾಣಿ ಋಷಯಃ ಸಪ್ತ ಧ್ರುವೋ ವಿಪ್ರಾಃ ಕ್ರಮಾದಿಹ
ಯೋಜನಾನಾಂ ಮಹೀಪೃಷ್ಠಾದೂರ್ಧ್ವಂ ಪಂಚದಶಾಧ್ರುವಾತ್ ॥

ನಿಯುತಾನ್ಯೇಕನಿಯುತಂ ಭೂಪೃಷ್ಠಾದ್ಭಾನುಮಂಡಲಂ ।
ರಥಃ ಷೋಡಶಸಾಹಸ್ರೋ ಭಾಸ್ಕರಸ್ಯ ತಥೋಪರಿ ॥೪೦॥

ಚತುರಾಶೀತಿಸಾಹಸ್ರೋ ಮೇರುಶ್ಚೋಪರಿ ಭೂತಲಾತ್ ।
ಕೋಟಿಯೋಜನ ಮಾಕ್ರಮ್ಯ ಮಹರ್ಲೋಕೋ ಧ್ರುವಾತ್‌ಧ್ರುವಃ

---

೩೬–೩೭. ಎಲೈ ಬ್ರಾಹ್ಮಣರೇ, ವಾಯುವಿಗೆ ಏಳು (ನೇಮಿ) ಚಕ್ರದಪಟ್ಟಿಗಳಿವೆ. ಅವುಗಳಿಗೆ ಕ್ರಮವಾಗಿ, ಆವಹ, ಪ್ರವಹ, ಅನುವಹ, ಸಂವಹ, ವಿವಹ, ಪರಾವಹ, ಪರಿವಹವೆಂದು ಅನುಗತ ವಾದ ಹೆಸರುಗಳು.

೩೮. ಎಲೈ ಬ್ರಾಹ್ಮಣರೇ, ಆವಹಕ್ಕೆ ಮೇಘಗಳೂ, ಪ್ರವಹಕ್ಕೆ ಸೂರ್ಯನೂ, ಅನುವಹಕ್ಕೆ ಚಂದ್ರನೂ, ಸಂವಹಕ್ಕೆ ನಕ್ಷತ್ರರಾಶಿಗಳೂ, ವಿವಹಕ್ಕೆ ಗ್ರಹಗಳೂ, ಪರಾವಹಕ್ಕೆ ಸಪ್ತರ್ಷಿಗಳೂ, ಪರಿವಹಕ್ಕೆ ಧ್ರುವ ನಕ್ಷತ್ರವೂ, ನೇಮಿಯನ್ನು ತಿರುಗಿಸತಕ್ಕವುಗಳು.

೩೯. ಮೇಲಿನಿಂದಹಿಡಿದು, ಭೂಮಿಯಿಂದ ಧ್ರುವಲೋಕ ಪರ್ಯಂತ ವಾಗಿ, ಹದಿನೈದು ನಿಯುತ ಯೋಜನದ ದೂರವು ನಿಯತ ಮಾಡಲ್ಪಟ್ಟಿದೆ. ಭೂಮಿಯ ಮೇಲಿಂದ ಅಷ್ಟೇದೂರದಲ್ಲಿ ಸೂರ್ಯಮಂಡಲವಿರುವುದು.

೪೦. ಅದರ ಮೇಲ್ಭಾಗದಲ್ಲಿ ಸೂರ್ಯನ ಷೋಡಶಸಹಸ್ರಯೋಜನ ವಾದ ರಥವಿರುವುದು. ಭೂಮಿಯ ಮೇಲಿನಿಂದ ಎಂಬತ್ತುನಾಲ್ಕು ಸಾವಿರ ಯೋಜನ ಎತ್ತರವಾಗಿ ಮೇರುಪರ್ವತವಿರುವುದು.

೪೧. ಧ್ರುವಲೋಕದಿಂದ ಒಂದು ಕೋಟಿಯೋಜನದ ದೂರವಾದ ಮೇಲೆ ದೈನಂದಿನ ಪ್ರಳಯರಹಿತವಾದ ಮಹರ್ಲೋಕವು ಇರುವುದು.

ಜನೋಲೋಕೋ ಮಹರ್ಲೋಕಾತ್ತಥಾ ಕೋಟಿದ್ವಯಂ ದ್ವಿಜಾಃ
ಜನೋಲೋಕಾತ್ತಪೋಲೋಕ ಶ್ಚತಸ್ರಃ ಕೋಟಯೋ ಮತಃ ॥
ಪ್ರಾಜಾಪತ್ಯಾದ್ಬ್ರಹ್ಮಲೋಕಃ ಕೋಟಿಷಟ್ಕಂ ವಿಸೃಜ್ಯ ತು ।
ಪುಣ್ಯಲೋಕಸ್ತು ಸಪ್ತೈತೇ ಹ್ಯಂಡೇಽಸ್ಮಿನ್ ಕಥಿತಾ ದ್ವಿಜಾಃ ॥೪೩॥
ಅಧಃ ಸಪ್ತತಲಾನಾಂ ತು ನರಕಾಣಾಂ ಹಿ ಕೋಟಯಃ ।
ಮಾಯಾಂತಾಶ್ಚೈವ ಘೋರಾದ್ಯಾ ಅಷ್ಟಾವಿಂಶತಿರೇವ ತು ॥೪೪॥
ಪಾಪಿನಸ್ತೇಷು ಪಚ್ಯಂತೇ ಸ್ವಸ್ವಕರ್ಮಾನುರೂಪತಃ ।
ಅವೀಚ್ಯಂತಾನಿ ಸರ್ವಾಣಿ ರೌರವಾದ್ಯಾನಿ ತೇಷು ಚ ॥೪೫॥
ಪ್ರತ್ಯೇಕಂ ಪಂಚಕಾನ್ಯಾಹು ರ್ನರಕಾಣಿ ವಿಶೇಷತಃ ।
ಅಂಡಮಾದೌ ಮಯಾ ಪ್ರೋಕ್ತಮಂಡಸ್ಯಾ ವರಣಾನಿ ಚ ॥೪೬॥

---

೪೨. ಎಲೈ ಬ್ರಾಹ್ಮಣರೇ, ಮಹರ್ಲೋಕದಿಂದ ಮುಂದಕ್ಕೆ ಎರಡು ಕೋಟಿ ಯೋಜನ ಸಂಖ್ಯೆಯಷ್ಟು ದೂರ ಜನೋಲೋಕವೂ, ಜನೋ ಲೋಕದಿಂದ ಮುಂದಕ್ಕೆ ನಾಲ್ಕುಕೋಟಿಯೋಜನದ ದೂರ ತಪೋ ಲೋಕವೂ, ಇರುವುವು.

೪೩. ಎಲೈ ಬ್ರಾಹ್ಮಣರೇ, ತಪೋಲೋಕದಿಂದ ಆರು ಕೋಟಿ ಯೋಜನ ಸಂಖ್ಯೆಯಷ್ಟುದೂರ ಹೋದರೆ ಬ್ರಹ್ಮಲೋಕವಿರುವುದು. ಈ ಬ್ರಹ್ಮಾಂಡದಲ್ಲಿ ಹೀಗೆ ಏಳು ಪುಣ್ಯಲೋಕಗಳಿರುವುವು.

೪೪. ಅತಲವಿತಲಾದಿ ಸಪ್ತತಲಗಳಕೆಳಗಡೆ ಘೋರಾ ಎಂಬ ನರಕ ದಿಂದ ಹಿಡಿದು ಮಾಯಾ ಎಂಬ ನರಕದವರೆಗೂ ಇಪ್ಪತ್ತೆಂಟುಕೋಟಿ ನರಕಗಳಿವೆ.

೪೫. ಆ ನರಕಗಳಲ್ಲಿ ತಮ್ಮತಮ್ಮ ಕರ್ಮಫಲಗಳಿಗನುಸಾರವಾಗಿ ಪಾಪಿಗಳು ಶಿಕ್ಷಿಸಲ್ಪಡುತ್ತಾರೆ. ಅವುಗಳಲ್ಲಿ ರೌರವದಿಂದ ಮೊದಲು ಗೊಂಡು ಅವೀಚಯುವರೆಗೂ ನರಕಗಳಿವೆ. ಅವುಗಳಲ್ಲಿ ಒಂದೊಂದ ರಲ್ಲಿ ಐದುಐದು ಮುಖ್ಯವಾದ ನರಕಗಳು.

೪೬-೪೭. ಎಲೈ ಬ್ರಾಹ್ಮಣರೇ, ನಾನು ನಿಮಗೆ ಹಿಂದೆಯೇ ಮೊದಲು ಅಂಡವನ್ನೂ, ಅಂಡದ ಆವರಣವನ್ನೂ, ಹಿರಣ್ಯಗರ್ಭ ಬ್ರಹ್ಮನ ಉತ್ಪ

ಹಿರಣ್ಯಗರ್ಭ ಸರ್ಗಶ್ಚ ಪ್ರಸಂಗಾದ್ಬಹು ವಿಸ್ತರಾತ್ ।
ಅಂಡಾನಾಮೀ ದೃಶೀನಾಂ ತು ಕೋಟ್ಯೋ ಜ್ಞೇಯಾಃ ಸಹಸ್ರಶಃ ॥

ಸರ್ವಗತ್ವಾತ್ಪ್ರಧಾನಸ್ಯ ತಿರ್ಯಗೂರ್ಧ್ವಮಧಸ್ತಥಾ ।
ಅಂಡೇಷ್ವೇತೇಷು ಸರ್ವೇಷು ಭುವನಾನಿ ಚತುರ್ದಶ ॥೪೮॥

ಪ್ರತ್ಯಂಡಂ ದ್ವಿಜ ಶಾರ್ದೂಲಾ ಸ್ತೇಷಾಂ ಹೇತುಃ ಮಹೇಶ್ವರಃ ।
ಅಂಡೇಷು ಚಾಂಡ ಬಾಹ್ಯೇಷು ತಥಾಽಂಡಾವರಣೇಷು ಚ ॥೪೯॥

ತಮೋಽಂತೇ ಚ ತಮಃಪಾರೇ ಚಾಷ್ಟಮೂರ್ತಿರ್ವ್ಯವಸ್ಥಿತಃ ।
ಅಸ್ಯಾತ್ಮನೋ ಮಹೇಶಸ್ಯ ಮಹಾದೇವಸ್ಯ ಧೀಮತಃ ॥೫೦॥

ಅದೇಹಿನಸ್ತ್ವಹೋ ದೇಹ ಮಖಿಲಂ ಪರಮಾತ್ಮನಃ ।
ಅಸ್ಯಾಷ್ಟಮೂರ್ತೇಃ ಶರ್ವಸ್ಯ ಶಿವಸ್ಯ ಗೃಹಮೇಧಿನಃ ॥೫೧॥
ಗೃಹಿಣೀ ಪ್ರಕೃತಿರ್ದಿವ್ಯಾ ಪ್ರಜಾಶ್ಚ ಮಹದಾದಯಃ ।
ಪಶವಃ ಕಿಂಕರಾಸ್ತಸ್ಯ ಸರ್ವೇ ದೇಹಾಭಿಮಾನಿನಃ ॥೫೨॥

---

ತ್ತಿಯನ್ನೂ, ಬಹಳ ವಿಸ್ತಾರವಾಗಿ ತಿಳಿಸಿರುವೆನು. ಇಂಥ ಅಂಡಗಳು ಸಾವಿರಕೋಟಿಗಳಷ್ಟಿರುವುವು.

೪೮. ಎಲೈ ಬ್ರಾಹ್ಮಣ ಶ್ರೇಷ್ಠರೇ, ಆ ಎಲ್ಲ ಅಂಡಗಳಲ್ಲಿ ಪ್ರತಿಯೊಂದರಲ್ಲಿಯೂ ಹದಿನಾಲ್ಕು ಲೋಕಗಳಿರುವುವು. ಅವೆಲ್ಲವುಗಳಿಗೂ ಈಶ್ವರನೇ ಕಾರಣನು.

೪೯–೫೦. ಈ ಅಂಡಗಳ ಒಳಗೂ, ಹೊರಗಡೆಯೂ, ಅದರ ಆವರಣಗಳಲ್ಲಿ, ಅಂಧಕಾರದ ಕೊನೆಯಲ್ಲಿಯೂ, ಮತ್ತು ಆಚೆಯಲ್ಲಿಯೂ, ಅಂಡಗಳ ಆತ್ಮನಾದ, ಜ್ಞಾನಿಯಾದ, ದೊಡ್ಡಸ್ವಾಮಿಯಾದ, ಈಶ್ವರನ ಎಂಟು ಮೂರ್ತಿಗಳು ವ್ಯವಸ್ಥಿತವಾಗಿವೆ.

೫೧–೫೨. ದೇಹವಿಲ್ಲದಿರುವ ಆ ಪರಮಾತ್ಮನಾದ ಶಿವನಿಗೆ ಎಲ್ಲ ದೇಹವೂ ಮಾಯಿಕವಾದುದೆಂಬುದು ಆಶ್ಚರ್ಯಕರವಾದುದು! ಗೃಹಸ್ಥನಾಗಿರುವ ಅಷ್ಟ ಮೂರ್ತಿಸ್ವರೂಪನಾಗಿರುವ ಆ ಶಿವನಿಗೆ ಪ್ರಕೃತಿಯು ಹೆಂಡಿತಿಯಾಗಿಯೂ, ಮಹತ್, ಅಹಂಕಾರ, ಮುಂತಾದ ಪ್ರಕೃತಿಯ ತತ್ವಗಳೇ ಪ್ರಜೆಗಳಾಗಿಯೂ, ದೇಹವೆಂಬ ಅಭಿಮಾನದಿಂದ ಕೂಡಿರುವ ಪರಿಣಾಮ ಜೀವರೆಂಬ ಪಶುಗಳು ಆಳುಗಳಾಗಿಯೂ ಇರುವರು.

ಆದ್ಯಂತಹೀನೋ ಭಗವಾನ್ ಅನಂತಃ ।
ಪುಮಾನ್ ಪ್ರಧಾನ ಪ್ರಮುಖಾಶ್ಚ ಸಪ್ತ ॥
ಪ್ರಧಾನಮೂರ್ತಿಸ್ತ್ವಥ ಷೋಡಶಾಂಗೋ ।
ಮಹೇಶ್ವರಶ್ಚಾಷ್ಟತನುಃ ಸ ಏವ ॥೫೩॥

ಆಜ್ಞಾಬಲಾ ತ್ತಸ್ಯಧರಾ ಸ್ಥಿತೇಹ
ಧರಾಧರಾ ವಾರಿಧರಾಃ ಸಮುದ್ರಾಃ ।
ಜ್ಯೋತಿರ್ಗಣಾಃ ಶಕ್ರಮುಖಾಃ ಸುರಾಶ್ಚ
ವೈಮಾನಿಕಾಃ ಸ್ಥಾವರ ಜಂಗಮಾಶ್ಚ ॥೫೪॥

ದೃಷ್ಟ್ವಾ ಯಕ್ಷಂ ಲಕ್ಷಣೈರ್ಹೀನಮೀಶಂ ।
ದೃಷ್ಟ್ವಾ ಸೇಂದ್ರಾಸ್ತೇ ಕಿಮೇತತ್ತ್ವಿಹೇತಿ ॥
ಯಕ್ಷಂ ಗತ್ವಾನಿಶ್ಚಯಾತ್ಸಾವ ಕಾದ್ಯಾಃ ।
ಶಕ್ತಿಕ್ಷೀಣಾಶ್ಚಾಭವಸ್ಯತ್ತತೋಽಪಿ. ॥೫೫॥

---

೫೩. ಭಗವಂತನಾದ ಶಿವನೇ ಆದಿಯೂ, ಅಂತವೂ, ಇಲ್ಲದೇ ಅನಂತನಾಗಿರುವನು. ಪುರುಷ, ಪ್ರಕೃತಿಯೇ ಮೊದಲಾದ ಏಳು ರೂಪಗಳುಳ್ಳವನೂ, ಮಹತ್ತತ್ವ ಅಹಂಕಾರಾದಿಗಳಿಂದ ಕೂಡಿರುವ ಷೋಡಶಾಂಗನೂ, ಪ್ರಕೃತಿಸ್ವರೂಪನೂ, ಆಗಿ ಅಷ್ಟಮೂರ್ತಿಸ್ವರೂಪನೂ ಆಗಿರುವನು.

೫೪. ಅಷ್ಟಮೂರ್ತಿಸ್ವರೂಪನಾದ ಆ ಶಿವನ ಆಜ್ಞೆಯಿಂದಲೇ ಭೂಮಿಯು ನಿಂತಿರುವುದು. ಪರ್ವತಗಳು ಇರುವುವು. ಸಮುದ್ರವು ನೀರನ್ನು ಅವನ ಆಜ್ಞೆಯಿಂದಲೇ ಹೊತ್ತಿರುವುದು. ಆಕಾಶದಲ್ಲಿ ನಕ್ಷತ್ರ, ಚಂದ್ರಾದಿಗಳು ಅವನ ಅಪ್ಪಣೆಯಿಂದಲೇ ಪ್ರಕಾಶಿಸುತ್ತಿರುವುವು. ಇಂದ್ರನೇ ಮೊದಲಾದ ದೇವತೆಗಳೂ, ವೈಮಾನಿಕರಾಗಿರತಕ್ಕವರೂ, ಜಲಚರ ಪ್ರಾಣಿಗಳೂ, ಶಿವನ ಆಜ್ಞೆಯಿಂದಲೇ ಜೀವಿಸಿರುವುವು.

೫೫. ತನ್ನ ಚಿಹ್ನೆಗಳನ್ನು (ವೇಷಗಳನ್ನು) ಮರೆಸಿಕೊಂಡು ಬಂದಿರುವ ಯಕ್ಷರೂಪನಾದ ಈಶ್ವರನನ್ನು ಇಂದ್ರನೇ ಮೊದಲಾದ ದೇವತೆಗಳು ನೋಡಿ ಈ ಯಕ್ಷನು ಇಲ್ಲಿಗೆ ಏಕೆ ಬಂದನು? ಎಂದು ತಿಳಿಯದೆ ಅವನ ಎದುರಿಗೆ ಹೋಗಿ ತಮ್ಮ ತಮ್ಮ ಶಕ್ತಿಯ ಅಲ್ಪತ್ವವನ್ನು ತಿಳಿದುಕೊಂಡರು

ದಗ್ಧುಂತೃಣಂವಾಽಪಿ ಸಮಕ್ಷಮಸ್ಯ
ಯಕ್ಷಸ್ಯ ವಹ್ನಿ ರ್ನಶಶಾಕ ವಿಪ್ರಾಃ।
ವಾಯುಸ್ತೃಣಂ ಚಾಲಯಿತುಂ ತಥಾನ್ಯೇ
ಸ್ವಾನ್ ಸ್ವಾನ್ ಪ್ರಭಾವಾನ್ ಸಕಲಾಮರೇಂದ್ರಾಃ ॥೫೬॥

ತದಾ ಸ್ವಯಂ ವೃತ್ರರಿಪುಃ ಸುರೇಂದ್ರೈಃ
ಸುರೇಶ್ವರಃ ಸರ್ವಸಮೃದ್ಧಿ ಹೇತುಃ।
ಸುರೇಶ್ವರಂ ಯಕ್ಷಮುವಾಚ ಕೋ ವಾ
ಭವಾನಿ ತೀತ್ಥಂ ಸಕುತೂಹಲಾತ್ಮಾ ॥೫೭॥

ತದಾಹ್ಯದೃಶ್ಯಂ ಗತ ಏವ ಯಕ್ಷ
ಸ್ತದಾಽಂಬಿಕಾ ಹೈಮವತೀ ಶುಭಾಸ್ಯಾ
ಉಮಾ ಶುಭ್ರೈ ರಾಭರಣೈರನೇಕೈಃ
ಸುಶೋಭಮಾನಾ ತ್ವಸುಚಾ ವಿರಾಸೀತ್ ॥೫೮॥

ತಾಂ ಶಕ್ರಮುಖ್ಯಾ ಬಹುಶೋಭಮಾನಾ
ಮುಮಾಮಜಾಂ ಹೈಮವತೀ ಮಪೃಚ್ಛನ್।

---

೫೬. ಎಲೈ ಬ್ರಾಹ್ಮಣರೇ, ಆಯಕ್ಷರೂಪಿಯಾದ ಈಶ್ವರನ ಎದುರಿನಲ್ಲಿ ಅಗ್ನಿಯು ಒಂದು ಹುಲ್ಲು ಕಡ್ಡಿಯನ್ನೂ ಸಹ ಸುಡಲಾರದೇ ಹೋದನು. ವಾಯುವು ಆ ಒಂದು ಹುಲ್ಲುಕಡ್ಡಿಯನ್ನೂ ಕೂಡ ಅಲುಗಾಡಿಸಲಾರದೇ ಹೋದನು. ಈ ರೀತಿಯಾಗಿ ಆ ದೇವತೆಗಳೆಲ್ಲರೂ ತಮ್ಮ ತಮ್ಮ ಶಕ್ತಿಯ ವಿಷಯದಲ್ಲಿದ್ದ ಹೆಮ್ಮೆಯನ್ನು ಕಳೆದುಕೊಂಡವರಾದರು.

೫೭. ಅನಂತರ ದೇವತೆಗಳೊಡಗೂಡಿದ ಇಂದ್ರನು ಎಲ್ಲ ಉತ್ಕರ್ಷಕ್ಕೂ ಕಾರಣನಾದ, ದೇವತೆಗಳಿಗೆಲ್ಲರಿಗೂ ಅಧಿಪತಿಯಾದ, ಯಕ್ಷರೂಪವನ್ನು ಧರಿಸಿಕೊಂಡಿರುವ ಈಶ್ವರನನ್ನು ಕುರಿತು ಕುತೂಹಲವುಳ್ಳವನಾಗಿ ನೀನು ಯಾರು? ಎಂದು ಕೇಳಿದನು.

೫೮. ಆಗ ಯಕ್ಷನು ತತ್ಕ್ಷಣದಲ್ಲಿಯೇ ಅದೃಶ್ಯನಾದನು. ಅನಂತರ ಹಿಮವಂತನ ಮಗಳಾದ, ಶುಭವಾದ ಮಾತುಗಳನ್ನಾಡುವ, ಜನ್ಮರಹಿತಳಾದ, ಉಮಾ ಎಂದು ಪ್ರಸಿದ್ಧಳಾದ ಪಾರ್ವತಿಯು ಮಂಗಳಕರವಾದ ಆಭರಣಗಳಿಂದ ಪ್ರಕಾಶಿಸುತ್ತಾ ಅಲ್ಲಿ ಪ್ರತ್ಯಕ್ಷಳಾದಳು.

ಕಿಮೇತದೀಶೇ ಬಹು ಶೋಭಮಾನೇ
ಕೋ ವಾಽಂಬಿಕೇ ಯಕ್ಷವಪುಶ್ಚಕಾಸ್ತಿ ॥೫೯॥

ನಿಶಮ್ಯ ತದ್ಯಕ್ಷ ಮುಮಾಽಂಬಿಕಾಽಹ
ತ್ವಗೋಚರಶ್ಚೇತಿ ಸುರಾಃ ಸಶಕ್ರಾಃ ।
ಪ್ರಣೇಮುರೇನಾಂ ಮೃಗರಾಜಗಾಮಿನೀ
ಮುಮಾಮಜಾಂ ಲೋಹಿತ ಶುಕ್ಲಕೃಷ್ಣಾಂ ॥೬೦॥

ಸಂಭಾವಿತಾ ಸಾ ಸಕಲಾಮರೇಂದ್ರೈಃ
ಸರ್ವಪ್ರವೃತ್ತಿಸ್ತು ಸುರಾ ಸುರಾಣಾಂ ।
ಅಹಂ ಪುರಾಽಸಂ ಪ್ರಕೃತಿಶ್ಚ ಪುಂಸೋ
ಯಕ್ಷಸ್ಯ ಚಾಜ್ಞಾವಶಗೇತ್ಯಥಾಽಽಹ ॥೬೧॥

---

೫೯. ಇಂದ್ರನೇ ಮೊದಲಾದ ದೇವತೆಗಳು ಬಹುವಾಗಿ ಪ್ರಕಾಶಿಸುತ್ತಿರುವ ಹಿಮವಂತನ ಮಗಳಾದ ಉತ್ಪತ್ತಿರಹಿತಳಾದ ಪಾರ್ವತಿಯನ್ನು ಕುರಿತು ಅತ್ಯಂತ ಪ್ರಕಾಶಮಾನಳಾದ ಓ ಅಂಬಿಕೆಯೇ ಇಲ್ಲಿಕಾಣಿಸಿಕೊಂಡಿದ್ದ ಯಕ್ಷನು ಯಾರು? ಅವರ ವಿಷಯವೇನು? ಎಂದು ಕೇಳಿದರು.

೬೦. ಆ ಯಕ್ಷನ ವಿಷಯವನ್ನು ಕೇಳಲು, ಪಾರ್ವತಿಯು ಆ ಯಕ್ಷನು ಅಗೋಚರನಾದ ಶಿವನೆಂದು ತಿಳಿಯ ಹೇಳಿದಳು. ಆಗ ದೇವೇಂದ್ರನೊಡಗೂಡಿದ ದೇವತೆಗಳೆಲ್ಲರೂ ಮಂದ ಗಮನೆಯಾದ, ಉತ್ಪತ್ತಿರಹಿಳಾದ, ಕೆಂಪು, ಬಿಳುಪು, ಕಪ್ಪು, ಈ ವರ್ಣಗಳಿಂದ ಪ್ರಕಾಶಿಸುತ್ತಿರುವ ಪಾರ್ವತಿಯನ್ನು ನಮಸ್ಕರಿಸಿದರು.

೬೧. ಸಕಲ ದೇವತೆಗಳಿಂದಲೂ, ಗೌರವಿಸಲ್ಪಟ್ಟ ಸುರಾಸುರರಿಗೆ ಪ್ರವೃತ್ತಿರೂಪಳಾಗಿರುವ, ಪಾರ್ವತಿಯು ನಾನೂ ಮೊದಲು ಪ್ರಕೃತಿರೂಪಳಾಗಿದ್ದು, ಪುರುಷರೂಪನಾದ ಯಕ್ಷರೂಪಿಯಾದ ಈಶ್ವರನ ಅಪ್ಪಣೆಯನ್ನು ಪಾಲಿಸುವವಳಾಗಿರುವೆನು. ಎಂದು ಹೇಳಿದಳು.

ತಸ್ಮಾದ್ದ್ವಿಜಾಃ ಸರ್ವಮಜಸ್ಯ ತಸ್ಯ
ನಿಯೋಗತಶ್ಚಾಂಡ ಮಭೂದಜಾದ್ವೈ ।
ಅಜಶ್ಚ ಅಂಡಾದಖಿಲಂ ಚ ತಸ್ಮಾತ್
ಜ್ಯೋತಿರ್ಗಣೈರ್ಲೋಕ ಮಚಾತ್ಮಕಂ ತತ್ ॥೬೨॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಭುವನ ಕೋಶವಿನ್ಯಾಸ ನಿರ್ಣಯೋ ನಾಮ ತ್ರಿ ಪಂಚಾಶತ್ತಮೋಽಧ್ಯಾಯಃ

---

೬೨. ಎಲೈ ಬ್ರಾಹ್ಮಣರೇ, ಆದುದರಿಂದ ಉತ್ಪತ್ತಿರಹಿತನಾದ ಆ ಪರಮೇಶ್ವರನ ಅಪ್ಪಣೆಯಿಂದ ಬ್ರಹ್ಮನೂ, ಆ ಬ್ರಹ್ಮನಿಂದ ಬ್ರಹ್ಮಾಂಡವೂ, ಆ ಬ್ರಹ್ಮಾಂಡದಿಂದ ಜ್ಯೋತಿರ್ಗಣಗಳಿಂದ ಕೂಡಿರುವ ಲೋಕಗಳೂ, ಹುಟ್ಟಿದುವು. ಆದುದರಿಂದ ಪೂರ್ವೋಕ್ತವಾದ ಎಲ್ಲವುಗಳ ಸಮೂಹವೂ ಶಿವ ಸ್ವರೂಪವೆಂದು ತಿಳಿಯತಕ್ಕದ್ದು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಭಾರತವರ್ಷದ ಅರ್ಥವನ್ನೂ ಬ್ರಹ್ಮಾಂಡದ ವಿವರಗಳನ್ನೂ ತಿಳಿಸುವ ಐವತ್ತುಮೂರನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಚತುಃ ಪಂಚಾಶತ್ತಮೋऽಧ್ಯಾಯಃ

ಚತುಃ ಪಂಚಾಶಕೇऽಧ್ಯಾಯೇ ಸೂರ್ಯಸ್ಯ ಗತಿರುತ್ತಮಾ ।
ಧ್ರುವಸ್ಯ ಚಾಭ್ರಮೇಘಾನಾಂ ವಿಶೇಷಾಃ ಸಮುದಾಹೃತಾಃ ॥

॥ ಸೂತ ಉವಾಚ ॥

ಜ್ಯೋತಿರ್ಗಣ ಪ್ರಚಾರಂ ವೈ ಸಂಕ್ಷಿಪ್ಯಾಂಡೇ ಬ್ರವೀಮ್ಯಹಂ ।
ದೇವಕ್ಷೇತ್ರಾಣಿ ಚಾಲೋಕ್ಯ ಗ್ರಹಚಾರಪ್ರಸಿದ್ಧಯೇ ॥ ೧ ॥
ಮಾನಸೋಪರಿ ಮಾಹೇಂದ್ರೀ ಪ್ರಾಚ್ಯಾಂಮೇರೋಃ ಪುರೀಸ್ಥಿತಾ ।
ದಕ್ಷಿಣೇ ಭಾನುಪುತ್ರಸ್ಯ ವರುಣಸ್ಯಚ ವಾರುಣೇ ॥ ೨ ॥
ಸೌಮ್ಯೇ ಸೋಮಸ್ಯ ವಿಪುಲಾ ತಾಸು ದಿಗ್ದೇವತಾಃ ಸ್ಥಿತಾಃ ।
ಅಮರಾವತೀ ಸಂಯಮನೀ ಸುಖಾ ಚೈವ ವಿಭಾ ಕ್ರಮಾತ್ ॥ ೩ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಐವತ್ತುನಾಲ್ಕನೆಯ ಅಧ್ಯಾಯವು.

(ಈ ಐವತ್ತುನಾಲ್ಕನೆಯ ಅಧ್ಯಾಯದಲ್ಲಿ ಉತ್ತಮವಾದ ಸೂರ್ಯನ ಗತಿಯೂ, ಧ್ರುವಲೋಕದಲ್ಲಿ ಸಂಚರಿಸುವ ಮೇಘ ವಿಶೇಷಗಳೂ ಹೇಳಲ್ಪಡುವುವು.)

೧. ಸೂತನು ಹೇಳಿದನು ! ಗ್ರಹಗಳ ಗತಿಯು ತಿಳಿಯುವುದಕ್ಕೋಸ್ಕರ ದೇವತೆಗಳ ಸ್ಥಾನಗಳನ್ನು ನೋಡಿ, ಬ್ರಹ್ಮಾಂಡದಲ್ಲಿಯ ಆ ಜ್ಯೋತಿರ್ಗಣಗಳ ಗತಿಯನ್ನು ಸಂಕ್ಷೇಪವಾಗಿ ಹೇಳುವೆನು.

೨-೩. ಮೇರುಪರ್ವತದ ಪೂರ್ವದಿಕ್ಕಿನಲ್ಲಿರುವ ಮಾನಸ ಪರ್ವತದ ಮೇಲ್ಭಾಗದಲ್ಲಿ ಮಹೇಂದ್ರನ ಪುರಿಯಾದ ಅಮರಾವತಿಯೂ, ಮೇರುಪರ್ವತದ ದಕ್ಷಿಣದಿಕ್ಕಿನಲ್ಲಿ ಸೂರ್ಯಪುತ್ರನಾದ ಯಮನಪುರಿಯಾದ ಸಂಯಮನೀ ಎಂಬುದೂ, ಅದರ ನೈರುತ್ಯ ದಿಕ್ಕಿನಲ್ಲಿ ವರುಣ ಪಟ್ಟಣವಾದ ಸುಖಾ ಎಂಬುದೂ, ಮತ್ತು ಉತ್ತರದಿಕ್ಕಿನಲ್ಲಿ ಬುಧನ ಪಟ್ಟಣವಾದ ವಿಭಾ ಎಂಬುದೂ ಇರುವುದು. ಆ ದೊಡ್ಡದೊಡ್ಡ ಪಟ್ಟಣಗಳಲ್ಲಿ ಆಯಾ ದಿಕ್ಪಾಲಕರಾದ ದೇವತೆಗಳು ವಾಸಮಾಡುತ್ತಿರುವರು.

ಲೋಕಪಾಲೋಪರಿಷ್ಟಾತ್ತು ಸರ್ವತೋ ದಕ್ಷಿಣಾಯನೇ।
ಕಾಷ್ಠಾ ಗತಸ್ಯ ಸೂರ್ಯಸ್ಯ ಗತಿರ್ಯಾ ತಾಂ ನಿಬೋಧತ ॥ ೪ ॥

ದಕ್ಷಿಣಪ್ರಕ್ರಮೇ ಭಾನುಃ ಕ್ಷಿಪ್ತೇಷುರಿವ ಧಾವತಿ।
ಜ್ಯೋತಿಷಾಂ ಚಕ್ರಮಾದಾಯ ಸತತಂ ಪರಿಗಚ್ಛತಿ ॥ ೫ ॥

ಪುರಾಂತಗೋಕೋ ಯದಾ ಭಾನುಃ ಶಕ್ರಸ್ಯ ಭವತಿ ಪ್ರಭುಃ।
ಸರ್ವೈಃ ಸಾಯಮನ್ಯೈಃ ಸೌರೋ ಹ್ಯುದಯೋ ದೃಶ್ಯತೇ ದ್ವಿಜಾಃ ॥

ಸ ಏವ ಸುಖವತ್ಯಾಂ ತು ನಿಶಾಂತಸ್ಥಃ ಪ್ರದೃಶ್ಯತೇ।
ಅಸ್ತಮೇತಿ ಪುನಃಸೂರ್ಯೋ ವಿಭಾಯಾಂ ವಿಶ್ವದೃಗ್ವಿಭುಃ ॥ ೭ ॥

---

೪. ಲೋಕಪಾಲಸ್ಥಾನದ ಮೇಲ್ಭಾಗದಲ್ಲಿ ದಕ್ಷಿಣಾಯನದಲ್ಲಿ ದಕ್ಷಿಣದಿಕ್ಕಿನಲ್ಲಿ ಸಂಚರಿಸುತ್ತಿರುವ ಸೂರ್ಯನ ಗಮನವನ್ನು ತಿಳಿಯಿರಿ.

೫. ಸೂರ್ಯನು ದಕ್ಷಿಣಾಯನದಲ್ಲಿ ಬಿಟ್ಟಬಾಣದಂತೆ ಬಲುವೇಗವಾಗಿ ಓಡುತ್ತಾ ಜ್ಯೋತಿರ್ಮಂಡಲದಲ್ಲಿ ಸುತ್ತುತ್ತಾ ಯಾವಾಗಲೂ ಸಂಚರಿಸುತ್ತಿರುವನು.

೬. ಯಾವಾಗ ಪ್ರಭುವಾದ ಸೂರ್ಯನು ಇಂದ್ರನ ಪಟ್ಟಣವಾದ ಅಮರಾವತಿಯ ಒಳಕ್ಕೆ ಪ್ರವೇಶಿಸುವನೋ ಆಗ ಸೂರ್ಯನ ಉದಯವು ಕಾಣಿಸಲ್ಪಡುತ್ತದೆ. ಸೂರ್ಯನು ಅಮರಾವತಿಯಿಂದ ಸಂಯಮನೀ ಎಂಬ ಯಮನ ಪಟ್ಟಣದ ಮೂಲಕವಾಗಿ ಸಂಚರಿಸುವನೆಂದು ತಾತ್ಪರ್ಯವು.

೭. ಆ ಸೂರ್ಯನೇ ವರುಣನ ಪಟ್ಟಣವಾದ ಸುಖಾ ಎಂಬುದರಲ್ಲಿ ಪ್ರಾತಃಕಾಲದಲ್ಲಿ ಕಾಣಿಸಿಕೊಳ್ಳುವನು. ಪುನಃ ವಿಶ್ವವೆಲ್ಲವನ್ನೂ ನೋಡುವ ವ್ಯಾಪಿಯಾದ ಸೂರ್ಯನು, ವಿಭಾ ಎಂಬ ಬುಧನ ಪಟ್ಟಣದಲ್ಲಿ ಅಸ್ತನಾಗುತ್ತಾನೆ. ಅನಂತರ ವರುಣನ ಪಟ್ಟಣವಾದ ಸುಖಾ, ಎಂಬುದರಮೂಲಕವಾಗಿಯೂ, ಬುಧನಪಟ್ಟಣವಾದ ವಿಭಾ ಎಂಬುದರ ಮೂಲಕವಾಗಿಯೂ, ಮುಂದಕ್ಕೆ ಸಂಚರಿಸುವನು.

ಮಯಾ ಪ್ರೋಕ್ತೋಽಮರಾವತ್ಯಾಂ ಯಥಾಽಸೌ ವಾರಿ ತಸ್ಕರಃ ।
ತಥಾ ಸಂಯಮನೀಂ ಪ್ರಾಪ್ಯ ಸುಖಾಂ ಚೈವ ವಿಭಾಂ ಖಗಃ ॥ ೮ ॥

ಯದಾಽಪರಾಹ್ಣ ಸ್ತ್ವಾಗ್ನೇಯ್ಯಾಂ ಪೂರ್ವಾಹ್ಣೇ ನೈಋತೋದ್ವಿಜಾಃ
ತದಾ ತ್ವಪರರಾತ್ರಶ್ಚ ವಾಯುಭಾಗೇ ಸುದಾರುಣಃ ॥ ೯ ॥

ಈಶಾನ್ಯಾಂ ಪೂರ್ವರಾತ್ರಸ್ತು ಗತಿ ರೇಷಾ ಚ ಸರ್ವತಃ ।
ಏವಂ ಪುಷ್ಕರಮಧ್ಯೇ ತು ಯದಾ ಸರ್ಪತಿ ವಾರಿಪಃ ॥೧೦॥

ತ್ರಿಂಶಾಂಶ ಕಂ ತು ಮೇದಿನ್ಯಾಂ ಮುಹೂರ್ತೇ ನೈವ ಗಚ್ಛತಿ ।
ಯೋಜನಾನಾಂ ಮುಹೂರ್ತಸ್ಯ ಇಮಾಂ ಸಂಖ್ಯಾಂ ನಿಬೋಧತ ॥

ಪೂರ್ಣಾ ಶತಸಹಸ್ರಾಣಾ ಮೇಕತ್ರಿಂಶತ್ತು ಸಾ ಸ್ಮೃತಾ ।
ಪಂಚಾಶಚ್ಚ ತಥಾಽನ್ಯಾನಿ ಸಹಸ್ರಾಣ್ಯಧಿಕಾನಿ ಚ ॥ ೧೨ ॥

---

೮. ಪೃಥ್ವಿಯ ನೀರನ್ನೆಲ್ಲವನ್ನೂ ಅಪಹರಿಸುವ ಸೂರ್ಯನು ತನ್ನ ಕಿರಣಗಳಿಂದ ನೀರನ್ನು ಹೀರಿಕೊಳ್ಳುವನು. ಅದೆಲ್ಲವನ್ನೂ ಮಳೆಯರೂಪ ದಲ್ಲಿ ಕೊಡುವನು. ಸೂರ್ಯನು ಹೇಗೆ ಅಮರಾವತಿಯನ್ನೂ, ಸಂಯಮನೀ ಎಂಬ ಯಮನ ಪಟ್ಟಣವನ್ನೂ, ಸುಖಾ ಎಂಬ ವರುಣನ ಪಟ್ಟಣವನ್ನೂ, ವಿಭಾ ಎಂಬ ಬುಧನಪಟ್ಟಣವನ್ನೂ, ಪ್ರವೇಶಿಸುವನೆಂಬ ವಿಷಯವು ನನ್ನಿಂದ ಮೊದಲೇ ಹೇಳಲ್ಪಟ್ಟಿದೆ.

೯. ಎಲೈ ಬ್ರಾಹ್ಮಣರೇ, ಯಾವಾಗ ಆಗ್ನೇಯದಿಕ್ಕಿನಲ್ಲಿ ಅಪರಾಹ್ಣವೂ, ನೈಋತ್ಯ ದಿಕ್ಕಿನಲ್ಲಿ ಪೂರ್ವಾಹ್ಣವೂ, ಆಗುವುದೋ ಆವಾಗ ವಾಯವ್ಯ ಭಾಗದಲ್ಲಿ ಭಯಂಕರವಾದ ಅಪರ ರಾತ್ರಿಯೂ, ಈಶಾನ್ಯದಲ್ಲಿ ಪೂರ್ವರಾತ್ರಿಯೂ, ಆಗುವುದು. ಈ ರೀತಿಯಾಗಿ ಎಲ್ಲ ಕಡೆಯಲ್ಲಿಯೂ ಸೂರ್ಯನ ಗಮನವಿರುವುದು.

೧೦. ಈ ರೀತಿಯಾಗಿ ಆಕಾಶ ಮಧ್ಯದಲ್ಲಿ ಸೂರ್ಯನು ಯಾವಾಗ ಸಂಚರಿಸುವನೋ ಆಗ ಭೂಮಿಯಲ್ಲಿ ಮೂವತ್ತನೆಯ ಅಂಶವನ್ನು ಒಂದು ಮುಹೂರ್ತದಲ್ಲಿ ಸಂಚರಿಸುವನು.

೧೧-೧೨. ಒಂದು ಮುಹೂರ್ತಕಾಲದಲ್ಲಿ ಇಷ್ಟು ಸಂಖ್ಯೆಯ ಯೋಜನವನ್ನು ಸೂರ್ಯನು ಸಂಚರಿಸುವನೆಂದು ತಿಳಿಯತಕ್ಕದ್ದು. ಎಷ್ಟೆಂದರೆ:— ಮೂವತ್ತೊಂದುನೂರು ಸಹಸ್ರವು ಸಂಪೂರ್ಣವಾಗಿಯೂ, ಮತ್ತು ಐವತ್ತು ಸಹಸ್ರವು ಅಧಿಕವಾಗಿಯೂ, ಆ ಸಂಖ್ಯೆಯು ಇರುವುದು.

ಮೌಹೂರ್ತಿಕೀ ಗತಿರ್ಹ್ಯೇಷಾ ಭಾಸ್ಕರಸ್ಯಮಹಾತ್ಮನಃ ।
ಏತೇನ ಗತಿಯೋಗೇನ ಯದಾ ಕಾಷ್ಠಾಂ ತು ದಕ್ಷಿಣಾಂ ॥೧೩॥

ಪರ್ಯ ಪೃಚ್ಛೇತ್ಪತಂಗೋಽಪಿ ಸೌಮ್ಯಾಶಾಂ ಚೋತ್ತರೇಽಹನೀ ।
ಮಧ್ಯೇ ತು ಪುಷ್ಕರಸ್ಯಾಥ ಭ್ರಮತೇ ದಕ್ಷಿಣಾಯನೇ ॥೧೪॥

ಮಾನಸೋತ್ತರ ಶೈಲೇ ತು ಮಹಾತೇಜಾಃ ವಿಭಾವಸುಃ ।
ಮಂಡಲಾನಾಂ ಶತಂ ಪೂರ್ಣಂ ತದಶೀತ್ಯಧಿಕಂ ವಿಭುಃ ॥೧೫॥

ಬಾಹ್ಯಂ ಚಾಭ್ಯಂತರಂ ಪ್ರೋಕ್ತಮುತ್ತರಾಯಣ ದಕ್ಷಿಣೇ ।
ಪ್ರತ್ಯಹಂ ಚರತೇ ತಾನಿ ಸೂರ್ಯೋ ವೈ ಮಂಡಲಾನಿ ತು ॥೧೬॥

ಕುಲಾಲಚಕ್ರ ಪರ್ಯಂತೋ ಯಥಾ ಶೀಘ್ರಂ ಪ್ರವರ್ತತೇ ।
ದಕ್ಷಿಣಪ್ರಕ್ರಮೋ ದೇವಾಸ್ತಥಾ ಶೀಘ್ರಂ ಪ್ರವರ್ತತೇ ॥೧೭॥

---

೧೩–೧೪. ಮೇಲೆ ಹೇಳಿದಷ್ಟು ಸಂಖ್ಯೆಯ ಯೋಜನವು ಮಹಾತ್ಮನಾದ ಭಾಸ್ಕರನ ಗಮನದ ವೇಗವಾಗಿರುವುದು. ಈ ರೀತಿಯಾದ ಗಮನದಿಂದ ದಕ್ಷಿಣ ದಿಕ್ಕಿನಲ್ಲಿ ಸಂಚರಿಸುವನು. ಉತ್ತರಾಯಣದಲ್ಲಿ ಉತ್ತರ ದಿಕ್ಕಿನಲ್ಲಿ ಗಮನದ ಸಂಖ್ಯೆಯನ್ನು ಕೇಳಬೇಕು. ದಕ್ಷಿಣಾಯನದಲ್ಲಿ ಸೂರ್ಯನು ಆಕಾಶದ ಮಧ್ಯದಲ್ಲಿ ಸಂಚರಿಸುವನು.

೧೫. ಮಾನಸಪರ್ವತದ ಉತ್ತರ ಕಡೆಯಲ್ಲಿ ಪೂರ್ಣವಾದ ನೂರೆಂಬತ್ತು ಮಂಡಲಗಳಿವೆ.

೧೬. ಆ ಮಂಡಲಗಳ ಹೊರಗೂ, ಒಳಗೂ ಪ್ರಚಂಡವಾದ ತೇಜಸ್ಸುಳ್ಳ, ವ್ಯಾಪಕನಾದ ಸೂರ್ಯನು ಉತ್ತರಾಯಣ ದಕ್ಷಿಣಾಯನಗಳಲ್ಲಿ ಪ್ರತಿದಿನವೂ ಸಂಚರಿಸುವನು.

೧೭. ಕುಂಬಾರನು ತಿರುಗಿಸಿದ ಚಕ್ರವು ಎಷ್ಟುಜಾಗ್ರತೆಯಾಗಿ ತಿರುಗುತ್ತದೆಯೋ ಅಷ್ಟೇ ಶ್ರೀಘ್ರವಾಗಿ ದಕ್ಷಿಣಾಯನದಲ್ಲಿ ಸೂರ್ಯನು ಸಂಚರಿಸುವನು.

ತಸ್ಮಾತ್ಸ್ವಲ್ಪತರಾಂ ಭೂಮಿಂ ತು ಕಾಲೇನಾಲ್ಪೇನ ಗಚ್ಛತಿ ।
ಸೂರ್ಯೋ ದ್ವಾದಶಭಿಃ ಶೀಘ್ರಂ ಮುಹೂರ್ತೈರ್ದಕ್ಷಿಣಾಯನೇ ॥

ತ್ರಯೋದಶಾರ್ಧ ಮೃಕ್ಷಾಣಾ ಮಹ್ನಾ ತು ಚರತೇ ರವಿಃ ।
ಮುಹೂರ್ತೈಸ್ತಾವ ದೃಕ್ಷಾಣಿ ನಕ್ತಮಷ್ಟಾ ದಶೈಶ್ಚರನ್ ॥೧೯॥

ಕುಲಾಲ ಚಕ್ರಮಧ್ಯಂ ತು ಯಥಾ ಮಂದಂ ಪ್ರಸರ್ಪತಿ ।
ತಥೋದಗಯನೇ ಸೂರ್ಯಃ ಪರ್ವತೇ ಮಂದವಿಕ್ರಮಃ ॥೨೦॥

ತಸ್ಮಾದ್ದೀರ್ಘೇಣ ಕಾಲೇನ ಭೂಮಿ ಮಲ್ಪಾಂ ತು ಗಚ್ಛತಿ ।
ಸ ರಥೋಽಧಿಷ್ಠಿತೋ ಭಾನೋ ರಾದಿತ್ಯೈ ರ್ಮುನಿಭಿಸ್ತಥಾ ॥೨೧॥

ಗಂಧರ್ವೈರಪ್ಸರೋಭಿಶ್ಚ ಗ್ರಾಮಿಣೀಃ ಸರ್ಪರಾಕ್ಷಸೈಃ ।
ಪ್ರದೀಪಯನ್ ಸಹಸ್ರಾಂಶು ರಗ್ರತಃ ಪೃಷ್ಠತೋಽಪ್ಯಧಃ ॥೨೨॥

---

೧೮. ಆ ಮಂಡಲಗಳಿಗಿಂತಲೂ ಚಿಕ್ಕದಾದ ಭೂಮಿಯನ್ನು ಸೂರ್ಯನು ಸ್ವಲ್ಪಕಾಲದಲ್ಲಿಯೇ ಸಂಚರಿಸುವನು. ದಕ್ಷಿಣಾಯನದಲ್ಲಿ ಹನ್ನೆರಡು ಮುಹೂರ್ತಗಳಲ್ಲಿ ಜಾಗ್ರತೆಯಾಗಿ ಸಂಚರಿಸುವನು.

೧೯. ದಕ್ಷಿಣಾಯನದಲ್ಲಿ ಸೂರ್ಯನು ಪೂರ್ತಾ ಹಗಲಿನಲ್ಲಿ ಹದಿಮೂರೂವರೆ ನಕ್ಷತ್ರಗಳನ್ನು ಸಂಚರಿಸುವನು. ರಾತ್ರಿಯಲ್ಲಿ ಹದಿಮೂರೂವರೆ ನಕ್ಷತ್ರಗಳನ್ನು ಹದಿನೆಂಟು ಮುಹೂರ್ತಗಳಲ್ಲಿ ಸಂಚರಿಸುವನು.

೨೦. ಕುಂಬಾರನ ಚಕ್ರದ ಮಧ್ಯಭಾಗವು ಎಷ್ಟು ನಿಧಾನವಾಗಿ ಚಲಿಸುವುದೋ ಹಾಗೆಯೇ ಸೂರ್ಯನು ಉತ್ತರಾಯನದಲ್ಲಿ ನಿಧಾನವಾಗಿ ಸಂಚರಿಸುವನು.

೨೧–೨೨. ಚಿಕ್ಕಮಂಡಲವಾದ ಭೂಮಂಡಲವನ್ನು ಉತ್ತರಾಯಣದಲ್ಲಿ ದೀರ್ಘಕಾಲದಲ್ಲಿ ಸಂಚರಿಸುವನು. ಆ ಸೂರ್ಯನು ತನ್ನ ರಥದಲ್ಲಿ ಕುಳಿತು ದ್ವಾದಶಾದಿತ್ಯರಿಂದಲೂ, ಸಪ್ತಋಷಿಗಳಿಂದಲೂ, ಗಂಧರ್ವರಿಂದಲೂ, ಅಪ್ಸರೆಯರಿಂದಲೂ, ಸರ್ಪಗಳಿಂದಲೂ, ರಾಕ್ಷಸರುಗಳಿಂದಲೂ, ಕೂಡಿ ಪ್ರಕಾಶಿಸುತ್ತಾ,

ಊರ್ಧ್ವತಶ್ಚ ಕರಂ ತ್ಯಕ್ತ್ವಾ ಸಭಾಂ ಬ್ರಾಹ್ಮೀ ಮನುತ್ತಮಾಂ ।
ಅಂಭೋಭಿ ರ್ಮುನಿಭಿಸ್ತ್ಯಕ್ತ್ವೈಃ ಸಂಧ್ಯಾಯಾಂ ತು ನಿಶಾಚರಾನ್

ಹತ್ವಾಹತ್ವಾತು ಸಂಪ್ರಾಪ್ತಾ ನ್ಬ್ರಾಹ್ಮಣೈಶ್ಚರತೇ ರವಿಃ ।
ಅಷ್ಟಾದಶ ಮುಹೂರ್ತಂ ತು ಉತ್ತರಾಯಣಪಶ್ಚಿಮಂ ॥೨೪॥

ಅಹರ್ಭವತಿ ತಚ್ಚಾಪಿ ಚರತೇ ಮಂದ ವಿಕ್ರಮಃ ।
ತ್ರಯೋದಶಾರ್ಧ ಮ್ಯಕ್ತಾನಿ ನಕ್ತಂ ದ್ವಾದಶಭೀ ರವಿಃ ॥೨೫॥

ಮುಹೂರ್ತೈ ಸ್ತಾವದೃಕ್ಷಾಣಿ ದಿನಾಽಷ್ಟಾ ದಶಭಿಶ್ಚರನ್ ।
ತತೋ ಮಂದತರಂ ನಾಭ್ಯಾಂ ಚಕ್ರಂ ಭ್ರಮತಿ ವೈಯಥಾ ॥೨೬॥

ಮೃತ್ಪಿಂಡ ಇವ ಮಧ್ಯಸ್ಥಃ ಧ್ರುವೋ ಭ್ರಮತಿ ವೈ ತಥಾ ।
ತ್ರಿಂಶನ್ಮುಹೂರ್ತೈರೇವಾಹು ರಹೋರಾತ್ರಂ ಪುರಾವಿದಃ ॥೨೭॥

---

೨೧. ಮುಂದುಗಡೆಯಲ್ಲಿಯೂ, ಹಿಂದುಗಡೆಯಲ್ಲಿಯೂ, ಕೆಳಭಾಗ ದಲ್ಲಿಯೂ, ಮೇಲ್ಭಾಗದಲ್ಲಿಯೂ, ತನ್ನ ಕಿರಣಗಳನ್ನು ಪ್ರಸರಿಸಿ, ನೀರು ಗಳಿಂದಲೂ, ಮುನಿಗಳಿಂದಲೂ ಬಿಡಲ್ಪಟ್ಟವನಾಗಿ, ಅನುತ್ತಮವಾದ ಬ್ರಹ್ಮನ ಸಂಬಂಧಿಯಾದ ಸಭೆಯನ್ನು ಹೊಂದಿ, ಸಂಧ್ಯಾಕಾಲದಲ್ಲಿ ಎದು ರಿಸಿ ಬಂದ ರಾಕ್ಷಸರನ್ನೆಲ್ಲರನ್ನೂ ಕೊಂದು, ಬ್ರಾಹ್ಮಣರೊಡನೆ ಕೂಡಿ ಸಂಚರಿಸುವನು.

೨೪. ಉತ್ತರಾಯಣದ ಕೊನೆಯಲ್ಲಿ ಹಗಲು ಹದಿನೆಂಟು ಮುಹೂರ್ತವಿರುವುದು. ಆಗ ಸೂರ್ಯನು ಸೌಮ್ಯವಾಗಿ ಸಂಚರಿಸುವನು.

೨೫–೨೬. ಉತ್ತರಾಯಣದಲ್ಲಿ ಸೂರ್ಯನು ರಾತ್ರಿ ಸಮಯದಲ್ಲಿ ಹದಿ ಮೂರೂವರೆ ನಕ್ಷತ್ರಗಳನ್ನೂ, ಇನ್ನುಳಿದ ಹದಿಮೂರೂವರೆ ನಕ್ಷತ್ರ ಗಳನ್ನು ಹಗಲಿನಲ್ಲಿ ಹದಿನೆಂಟು ಮುಹೂರ್ತಗಳಲ್ಲಿಯೂ, ಸಂಚರಿಸುವನು. ಅನಂತರ ಕುಂಬಾರನ ಚಕ್ರದ ಮಧ್ಯಭಾಗವು ಹೇಗೆ ನಿಧಾನವಾಗಿ ತಿರು ಗುವುದೋ ಹಾಗೆ ನಿಧಾನವಾಗಿ ಚಕ್ರದ ಮಧ್ಯಭಾಗದಲ್ಲಿರುವ ಮಣ್ಣಿ ನಂತೆ ಆಕಾಶದ ಮಧ್ಯದಲ್ಲಿ ಸಂಚರಿಸುವನು.

೨೭–೨೮. ಮೂವತ್ತು ಮುಹೂರ್ತಕ್ಕೆ ಒಂದು ದಿನವೆಂದು ಪ್ರಾಚೀನ ಜ್ಞಾನಿಗಳು ಹೇಳುವರು. ಎರಡು ದಿಕ್ಕುಗಳ ಮಧ್ಯೇ ತಿರು ಗುತ್ತಾ ಹೇಗೆ ಕುಂಬಾರನ ಚಕ್ರದ ಮಧ್ಯಭಾಗವು ಇದ್ದಲ್ಲಿಯೇ ಇರು

ಆಸಾಂ ತ್ವಧಿಪತಿರ್ದೇವೋ ಭವಇತ್ಯೈನಕೀರ್ತಿತಃ।
ಕುಲಾಲಚಕ್ರನಾಭಿಸ್ತು ಯಥಾತತ್ರೈವ ವರ್ತತೇ ॥೨೮॥
ಔತ್ತಾನಪಾದೋ ಭ್ರಮತಿ ಗ್ರಹೈಃ ಸಾರ್ಧಂ ಗ್ರಹಾಗ್ರಣೀಃ।
ಗಣೋ ಮುನಿಜ್ಯೋತಿಷಾಂ ತು ಮನಸಾ ತಸ್ಯ ಸರ್ಪತಿ ॥೨೯॥
ಅಧಿಷ್ಠಿತಃ ಪುನಸ್ತೇನ ಭಾನುಸ್ತ್ವದಾಯು ತಿಷ್ಠತಿ।
ಕಿರಣೈಃ ಸರ್ವತಸ್ತೋಯಂ ದೇವೋ ವೈ ಸಸಮೀರಿಣಃ ॥೩೦॥
ಔತ್ತಾನಪಾದಸ್ಯ ಸದಾ ಧ್ರುವತ್ವಂ ವೈ ಪ್ರಸಾದತಃ।
ವಿಷ್ಣೋರೌತ್ತಾನಪಾದೇನ ಚಾಪ್ತಂ ತಾತಸ್ಯ ಹೇತುನಾ ॥೩೧॥
ಆಪಃ ಪೀತಾಸ್ತು ಸೂರ್ಯೇಣ ಕ್ರಮಂತೇ ಶಶಿನಃ ಕ್ರಮಾತ್।
ನಿಶಾಕರಾನ್ನಿಸ್ಸ್ರವಂತೇ ಜೀಮೂತಾ ಸ್ಪ್ರತ್ಯರಃ ಕ್ರಮಾತ್ ॥೩೨॥

---

ವುದೋ ಹಾಗೆ ಗ್ರಹಾಧಿಪತಿಯಾದ ಸೂರ್ಯನು ಉತ್ತಾನಪಾದನ ಮಗನಾದ ಧ್ರುವನು ತಾನು ಇದ್ದಲ್ಲಿಯೇ ಇದ್ದು ಗ್ರಹಗಳೊಡನೆ ಸುತ್ತುವನು.

೨೯–೩೦. ಧ್ರುವ ನಕ್ಷತ್ರದ ಮಾರ್ಗದಲ್ಲಿರುವ ಋಷಿರೂಪವಾದ ನಕ್ಷತ್ರ ಮಂಡಲವು ಧ್ರುವನ ಇಚ್ಛೆಯಿಂದ ಸಂಚರಿಸುವುದು. ವಾಯುವಿನಿಂದೊಡಗೂಡಿದ ಸೂರ್ಯನು ತನ್ನ ಕಿರಣಗಳಿಂದ ಎಲ್ಲ ಕಡೆಯಲ್ಲಿರುವ ನೀರನ್ನು ಸ್ವೀಕರಿಸುವನು.

೩೧. ಮಹಾವಿಷ್ಣುವಿನ ಅನುಗ್ರಹದಿಂದ ತಂದೆಯಾದ ಉತ್ತಾನಪಾದರಾಯನ ದೆಸೆಯಿಂದ (ಉತ್ತಾನಪಾದರಾಜನು ಧ್ರುವನನ್ನು ಹೆಂಡಿತಿಯಾದ ಸುರಚಿಯ ಮಾತಿನಂತೆ ಅವಮಾನ ಮಾಡಿದುದು ಧ್ರುವನಿಗೆ ವಿಷ್ಣುವಿನ ಸಾಕ್ಷಾತ್ಕಾರವಾಗಲು ಅನುಕೂಲವಾಯಿತು.) ಧ್ರುವನು ಧ್ರುವತ್ವ( ಶಾಶ್ವತವಾದ ಸ್ಥಾನ )ವನ್ನು ಹೊಂದಿದನು.

೩೨. ಸೂರ್ಯನಿಂದ ತೆಗೆದುಕೊಳ್ಳಲ್ಪಟ್ಟ ನೀರು ಚಂದ್ರನಲ್ಲಿ ಹೋಗಿ ಸೇರುತ್ತದೆ. ಆ ಚಂದ್ರನದೆಸೆಯಿಂದ ಆ ನೀರು ಮೋಡಗಳಲ್ಲಿ ಸೇರುತ್ತವೆ. ಅನಂತರ ವಾಯುವಿನಿಂದ ಹೊಡೆಯಲ್ಪಟ್ಟ ಮೇಘಗಳಿಂದ ಆ ನೀರು ಭೂಮಿಗೆ ಸುರಿಯುತ್ತದೆ.

ವೃಂದಂ ಜಲಮುಚಾಂ ಚ್ಚೈವ ಶ್ವಸನೇ ಸಾಭಿತಾಡಿತಂ।
ಕ್ಷ್ನಾತ್ರಯಾಂ ಸೃಷ್ಟಿಂ ವಿಸೃಜತೇಽ ಭಾಸಯತ್ತ್ರೇಽಸ ಭಾಸ್ಕರಃ ॥೩೩॥
ತೋಽಯಸ್ಯ ನಾಸ್ತಿ ವೈ ನಾಶಃ ತದ್ವೈವ ಪರಿವರ್ತತೇ।
ಹಿತಾಯ ಸರ್ವಜಂತೂನಾಂ ಗತಿಃ ಶರ್ವೇಣ ನಿರ್ಮಿತಾ ॥೩೪॥
ಭೂರ್ಭುವಃ ಸ್ವಸ್ತಥಾ ಹ್ಯಾಪೋ ಹ್ಯನ್ನಂ ಚಾಮೃತಮೇವಚ।
ಪ್ರಾಣಾ ವೈ ಜಗತಾ ಮಾಪೋ ಭೂತಾನಿ ಭುವನಾನಿಚ ॥೩೫॥
ಬಹುನಾಽತ್ರ ಕಿಮುಕ್ತೇನ ಚರಾಚರ ಮಿದಂ ಜಗತ್।
ಅಪಾಂ ಶಿವಸ್ಯ ಭಗವಾನ್ ಅಧಿಪತ್ಯೇ ವ್ಯವಸ್ಥಿತಃ ॥೩೬॥

---

೩೩. ಸೂರ್ಯನು ಪ್ರಪಂಚವನ್ನು ತನ್ನ ಕಿರಣಗಳಿಂದ ಪ್ರಕಾಶಿಸುತ್ತಿರುವನು. ಆದುದರಿಂದ ಸೂರ್ಯನಿಗೆ ಭಾಸ್ಕರನೆಂದು ಹೆಸರು ಬಂದಿದೆ. ಭಾ, ಎಂದರೆ ಪ್ರಕಾಶವನ್ನು ಕರ, ಎಂದರೆ ಉಂಟುಮಾಡುವವನು. ಆದುದರಿಂದ ಭಾಸ್ಕರನೆಂದು ಪದವ್ಯುತ್ಪತ್ತಿಯು. ನೀರಿಗೆ ನಾಶವಿಲ್ಲವು. ತತ್ಪೂರ್ವವಾದ ಜಲವೇ ಮೇಲಕ್ಕೂ ಕೆಳಕ್ಕೂ ಪರಿವರ್ತನೆಯಾಗುತ್ತದೆ.

೩೪–೩೬. ಸಮಸ್ತ ಪ್ರಾಣಿಗಳಿಗೂ ಒಳ್ಳೆಯದಾಗಲೆಂದು ಈಶ್ವರನು ಸೂರ್ಯನಿಗೆ ಈ ರೀತಿಯಾದ ಗಮನವನ್ನು ನಿರ್ಮಿಸಿರುವನು. ಹಗಲು ರಾತ್ರಿ ರೂಪವಾದ ಕಾಲದಿಂದ ಜನರ ಆಚಾರವ್ಯವಹಾರಗಳೆಲ್ಲವೂ ನಡೆಯುತ್ತಿರುವುದರಿಂದ ಒಳ್ಳೆಯದಾಗುತ್ತಿರುವುದು. ಭೂಃ, ಭುವಃ, ಸ್ವಃ, ಇವೆಲ್ಲವೂ, ಅನ್ನವೂ, ಅಮೃತವೂ, ಪ್ರಾಣಗಳೂ, ಜಗತ್ತೂ, ಪ್ರಾಣಿಗಳೂ, ಚತುರ್ದಶ ಪ್ರಪಂಚಗಳೂ, ಇವೆಲ್ಲವೂ, ನೀರಿನ ರೂಪಗಳು. ಹೆಚ್ಚಿಗೇ ಹೇಳುವುದರಿಂದೇನು? ಈ ಚರಾ ಚರಾತ್ಮಕವಾದ ಪ್ರಪಂಚವೇ ನೀರಿನ ರೂಪವು. ಈ ರೀತಿಯಾಗಿ ಪ್ರಪಂಚಕ್ಕೆ ಅಧಿಪತಿಯಾದ ಈಶ್ವರನು ವ್ಯವಸ್ಥೆಮಾಡಿರುವನು. ನೀರಿಲ್ಲದಿರುವ ಜಾಗವು ಯಾವುದೂ ಇಲ್ಲವೆಂದು ತಾತ್ಪರ್ಯವು.

ಭವಾತ್ಮಕಂ ಜಗತ್ಸರ್ವಮಿತಿ ಕಿಂ ಚೋಹಚಾದ್ಭುತಂ ॥೩೭॥
ನಾರಾಯಣತ್ವಂ ದೇವಸ್ಯ ಹರೇಶ್ಚಾದ್ಭಿಃ ಕೃತಂ ವಿಭೋಃ ।
ಜಗತಾಮಾಲಯೋ ವಿಷ್ಣು ಸ್ತ್ವಾಪಸ್ತಸ್ಯಾಲಯಾನಿ ತು ॥೩೮॥
ದಂದಹ್ಯಮಾನೇಷು ಚರಾಚರೇಷು
ಗೋಧೂಮ ಭೂತಾಸ್ತ್ವಥ ನಿಷ್ಕ್ರಮಂತಿ ।
ಯಾ ಯಾ ಉರ್ಧ್ವಂ ಮರುತೇನೇರಿತಾ ವೈ
ತಾಸ್ತಾಸ್ತ್ವಭ್ರಾಣ್ಯಗ್ನಿನಾ ವಾಯುನಾ ಚ ॥೩೯॥
ಅತೋ ಧೂಮಾಗ್ನಿ ವಾತಾನಾಂ ಸಂಯೋಗಸ್ತ್ವ ಭ್ರಮುಚ್ಯತೇ ।
ವಾರೀಣಿ ವರ್ಷತೀತ್ಯಭ್ರ ಮಭ್ರಸ್ಯೇಶಃ ಸಹಸ್ರದೃಕ್ ॥೪೦॥

---

೩೭. ಎಲ್ಲ ಪ್ರಪಂಚದಲ್ಲೂ ವ್ಯಾಪಕವಾದ ನೀರಿಗೆ ಈಶ್ವರನೇ ಅಧಿಪತಿಯು. ಆದುದರಿಂದ ಈ ಪ್ರಪಂಚವೆಲ್ಲವೂ ಈಶ್ವರನ ಅಧೀನವೆಂಬುದರಲ್ಲಿ ಏನು ಆಶ್ಚರ್ಯ?

೩೮. ವ್ಯಾಪಕವಾದ ನೀರಿನಿಂದಲೇ ಈಶ್ವರನಾದ ವಿಷ್ಣುವಿಗೆ ನಾರಾಯಣನೆಂಬ ಹೆಸರು ಬಂದಿರುವುದು. ನರ, ಎಂದರೆ ನೀರು ಎಂದರ್ಥವು, ಅಯನ, ಎಂದರೆ ಸ್ಥಾನವೆಂದರ್ಥ; ನೀರೇ ಸ್ಥಾನವಾಗಿವುಳ್ಳವನು ನಾರಾಯಣನು. ಪ್ರಪಂಚಕ್ಕೆ ವಾಸಸ್ಥಾನವು ವಿಷ್ಣುವು. ಆ ವಿಷ್ಣುವಿಗೆ ವಾಸಸ್ಥಾನವಾದುದು ನೀರು. ಆದುದರಿಂದ ನೀರೇ ಸರ್ವವ್ಯಾಪಕವಾದುದು. ಅಂಥಾ ವ್ಯಾಪಕವಾದ ನೀರಿಗೆ ಈಶ್ವರನು ಅಧಿಪತಿಯಾಗಿರುವುದರಿಂದ ಅವನು ಸರ್ವೇಶ್ವರನೆಂದು ತಾತ್ಪರ್ಯವು.

೩೯. ಚರಾಚರ ಪ್ರಪಂಚದಲ್ಲಿ ಉರಿಯುವಿಕೆಯಿಂದ ಪೃಥಿವೀ ಸಂಬಂಧದಿಂದ ಮೇಲಕ್ಕೆದ್ದು ಆಕಾಶದಲ್ಲಿ ಸೇರಿದ ಹೊಗೆ (ಆವಿ) ಎಲ್ಲವೂ ವಾಯುವಿನಿಂದ ಒಟ್ಟುಗೂಡಿಸಲ್ಪಟ್ಟು ಮೇಘಗಳಾಗಿರುವುವು.

೪೦. ಹೊಗೆ, ಅಗ್ನಿ, ಗಾಳಿ, ಇವುಗಳ ಪರಸ್ಪರ ಸಂಯೋಗವೇ ಮೇಘವು. ಆ ಮೇಘವು ನೀರನ್ನು ಸುರಿಸುತ್ತದೆ. ಆ ಮೇಘಕೆ ಇಂದ್ರನೇ ಅಧಿಪತಿಯು.

ಯಜ್ಞಧೂಮೋದ್ಭವಂ ಚಾಪಿ ದ್ವಿಜಾನಾಂ ಹಿತಕೃತ್ಸದಾ ।
ದಾವಾಗ್ನಿಧೂಮ ಸಂಭೂತ ಮಭ್ರಂ ವನಹಿತಂ ಸ್ಮೃತಂ ॥೪೧॥

ಮೃತಧೂಮೋದ್ಭವಂ ತ್ವಭ್ರಂ ಅಶುಭಾಯ ಭವಿಷ್ಯತಿ ।
ಅಭಿಚಾರಾಗ್ನಿ ಧೂಮೋತ್ಥಂ ಭೂತನಾಶಾಯ ವೈ ದ್ವಿಜಾಃ ॥೪೨॥

ಏವಂ ಧೂಮ ವಿಶೇಷೇಣ ಜಗತಾಂ ವೈ ಹಿತಾಹಿತಂ ।
ತಸ್ಮಾದಾಚ್ಛಾದಯೇದ್ಧೂಮ ಮಭಿಜಾರಕೃತಂ ನರಃ ॥೪೩॥

ಅನಾಚ್ಛಾದ್ಯ ದ್ವಿಜಃ ಕುರ್ಯಾದ್ಧೂಮಂ ಯಶ್ಚಾಭಿಚಾರಿಕಂ ।
ಏವಮುದ್ದಿಶ್ಯ ಲೋಕಸ್ಯ ಕ್ಷಯಕೃಚ್ಚ ಭವಿಷ್ಯತಿ ॥೪೪॥

ಅಪಾಂ ನಿಧಾನಂ ಜೀಮೂತಾಃ ಷಣ್ಮಾಸಾನಿಹ ಸುವ್ರತಾಃ ।
ವರ್ಷಯಂತ್ಯೇವ ಜಗತಾಂ ಹಿತಾಯ ಪವನಾಜ್ಞಯಾ ॥೪೫॥

---

೪೧. ಯಜ್ಞಧೂಮದಿಂದ ಉಂಟಾದ ಮೇಘವು ತ್ರೈವರ್ಣಿಕ ಹಿತವನ್ನುಂಟುಮಾಡುವುದು. ಕಾಡು ಕಿಚ್ಚಿನಿಂದುಂಟಾದ ಮೇಘವು ಕಾಡುಗಳಿಗೆ ಮಳೆಯನ್ನು ಸುರಿಸುವುದರ ಮೂಲಕ ಹಿತವನ್ನುಂಟು ಮಾಡುವುದು.

೪೨. ಎಲೈ ಬ್ರಾಹ್ಮಣರೇ, ಶವವನ್ನು ಸುಟ್ಟದ್ದರಿಂದುಂಟಾದ ಧೂಮದಿಂದ ಹುಟ್ಟಿದ ಮೇಘವು, ಅಶುಭವನ್ನುಂಟುಮಾಡುವುದು. ಹಿಂಸೆಯಿಂದುಂಟಾದ ಹೊಗೆಯಿಂದ ಹುಟ್ಟಿದ ಮೇಘವು ಪ್ರಾಣಿಗಳ ನಾಶಕ್ಕೆ ಕಾರಣವಾಗುವುದು.

೪೩. ಈ ರೀತಿಯಾದ ಧೂಮ ವಿಶೇಷಗಳಿಂದ ಲೋಕಗಳಿಗೆ ಹಿತವುಂಟಾಗುತ್ತದೆ. ಲೋಕಗಳಿಗೆ ಅಹಿತವಾಗುವ ಹಿಂಸೆಯಿಂದುಂಟಾದ ಧೂಮವನ್ನು ಮನುಷ್ಯನು ತಡೆಯಬೇಕು.

೪೪. ಹಿಂಸೆಯಿಂದುಂಟಾದ ಧೂಮವನ್ನು ಬ್ರಾಹ್ಮಣನಾದವನು ತಡೆಯಬೇಕು. ಹಾಗೆ ತಡೆಯದಿದ್ದರೆ ಆ ಧೂಮವು ಪ್ರಪಂಚದ ನಾಶಕ್ಕೆ ಕಾರಣವಾಗುವುದು.

೪೫. ನೀರು ಮೇಘಗಳಲ್ಲಿ ಆರುತಿಂಗಳವರೆಗೂ ನಿಂತಿರುವುದು. ಅದನ್ನು ಆ ಮೇಘಗಳು ವಾಯುವಿನ ಅಪ್ಪಣೆಯಂತೆ ಲೋಕಹಿತಕ್ಕಾಗಿ ಸುರಿಸುವುವು.

ಸ್ತನಿತಂ ಚೇಹ ವಾಯವ್ಯಂ ವೈದ್ಯುತಂ ಪಾವಕೋದ್ಭವಂ।
ತ್ರಿಧಾ ತೇಷಾಮಿಹೋತ್ಪತ್ತಿ ರಭ್ರಾಣಾಂ ಮುನಿಪುಂಗವಾಃ ॥೪೬॥
ನ ಭ್ರಶ್ಯಂತಿ ಯತೋಽಭ್ರಾಣಿ ಮೇಹನಾನ್ಮೇಘ ಉಚ್ಯತೇ।
ಕಾಷ್ಠಾ ವಾಹ್ನಾಶ್ಚ ವೈರಿಂಚ್ಯಾಃ ಪಕ್ಷಾಶ್ಚೈವ ಪೃಥಗ್ವಿಧಾಃ ॥೪೭॥
ಆಜ್ಯಾನಾಂ ಕಾಷ್ಠಸಂಯೋಗಾತ್ ಅಗ್ನೇಃ ಧೂಮಃ ಪ್ರವರ್ತಿತಃ।
ದ್ವಿತೀಯಾನಾಂ ಚ ಸಂಭೂತಿ ರ್ವಿರಿಂಚೋಚ್ಛ್ವಾಸವಾಯುನಾ ॥

---

೪೬. ಎಲೈ ಮುನಿಶ್ರೇಷ್ಠರೇ, ಈ ಮೇಘಗಳಲ್ಲಿ· ಹುಟ್ಟಿದ ಗುಡುಗು ಸಿಡಿಲು ಮುಂತಾದ ಘರ್ಜನೆಯು ವಾಯುವಿನ ಸಂಬಂಧವಾದುದು. ಮಿಂಚು, ಮುಂತಾದ್ದವುಗಳು ಅಗ್ನಿಯ ಸಂಬಂಧವಾದುವು. ಮೇಘಗಳ ಉತ್ಪತ್ತಿಯು ಈ ರೀತಿಯಾಗಿ ವಾಯು, ಧೂಮ, ಅಗ್ನಿ, ಇವು ಮೂರರಿಂದ ಆಗುವುದು.

೪೭. ಯಾವಾಗಲೂ ಕೆಳಕ್ಕೆ ಬೀಳುವುದಿಲ್ಲವಾದುದರಿಂದ ಅಭ್ರವೆಂತಲೂ, ಮಳೆಯನ್ನು ಸುರಿಸುವುದಾದುದರಿಂದ ಮೇಘವೆಂತಲೂ, ಹೆಸರು ಬಂದಿದೆ. ಈ ಮೇಘಗಳು ಕಟ್ಟಿಗೆಯಿಂದುಂಟಾದ ಅಗ್ನಿಯಿಂದ ಹುಟ್ಟಿದವುಗಳೆಂದೂ, ಬ್ರಹ್ಮನಿಂದ ಹುಟ್ಟಿದವುಗಳೆಂದೂ, ಮೇರುವಿನ ರೆಕ್ಕೆಯಿಂದ ಹುಟ್ಟಿದವುಗಳೆಂದೂ, ಮೂರು ವಿಧವಾಗಿರುವುವು.

೪೮. ತುಪ್ಪವನ್ನು ಕಟ್ಟಿಗೆಗಳೊಡನೆ ಬೆರೆಸಿ ಅದಕ್ಕೆ ಅಗ್ನಿಯ ಸಂಯೋಗವಾದಾಗ ಉಂಟಾದ ಧೂಮದಿಂದ ಹುಟ್ಟಿದ ಮೇಘವು ಕಾಷ್ಠ ಮೇಘವು. ಕಟ್ಟಿಗೆಯಿಂದುಂಟಾದ ಮೇಘವು ಎರಡನೆಯದಾದ ವೈರಿಂಚ ಮೇಘವು. ಬ್ರಹ್ಮನಿಂದ ಹುಟ್ಟಿದ ಮೇಘವು ಬ್ರಹ್ಮನ ಉಚ್ಛ್ವಾಸ ವಾಯುವಿನಿಂದ ಹುಟ್ಟಿದುದು. ಮೂರನೆಯದಾದ ಪಕ್ಷ ಮೇಘವು ರೆಕ್ಕೆಯಿಂದುಂಟಾದ ಮೇಘವು. ದೇವೇಂದ್ರನು ಪರ್ವತಗಳ ರೆಕ್ಕೆಗಳನ್ನು ಕಡಿದಾಗ ಅವುಗಳಿಂದ ಉಂಟಾದುವು ಪಕ್ಷಮೇಘಗಳು.

ಭೂಭೃತಾಂ ತ್ವಥ ಪಕ್ಷೈಸ್ತು ಮಘವಚ್ಛೇದಿತೈಸ್ತತಃ।
ವಾಹ್ನೇಯಾಸ್ತ್ವಥ ಜೀಮೂತಾ ಸ್ತ್ವಾವಹಸ್ಥಾ ನಗಾಃ ಶುಭಾಃ ॥

ವಿರಿಂಚೋಚ್ಛ್ವಾಸಜಾಸ್ಸರ್ವೇ ಪ್ರವಹಸ್ಕಂಧಜಾಸ್ತತಃ।
ಪಕ್ಷಜಾಃ ಪುಷ್ಕರಾದ್ಯಾಶ್ಚ ವರ್ಷಂತಿ ಚ ಯದಾ ಜಲಂ ॥೫೦॥

ಮೂಕಾಃ ಸಶಬ್ದದುಷ್ಟಾಶಾಸ್ತ್ವೇತೈಃ ಕೃತ್ಯಂ ಯಥಾಕ್ರಮಂ।
ಕ್ವಾನುವೃಷ್ಟಿಪ್ರದಾ ದೀರ್ಘ ಕಾಲಂ ಶೀತ ಸಮೀರಿಣಃ ॥೫೧॥

ಜೀವಕಾಶ್ಚ ತಥಾ ಕ್ಷೀಣಾ ವಿದ್ಯುದ್ಧ್ವನಿ ವಿವರ್ಜಿತಾಃ।
ತಿಷ್ಠಂತ್ಯಾಕ್ರೋಶಮಾತ್ರೇ ತು ಧರಾಪೃಷ್ಠಾದಿತಸ್ತತಃ ॥೫೨॥

---

೪೯–೫೦. ವಹ್ನಿಸಂಬಂಧವಾದ ಮೇಘಗಳು ಆವಹವೆಂಬ ವಾಯುವಿನ ನೇಮಿಯಲ್ಲಿರುವುವು. ಅವು ಶುಭವಾದವುಗಳು. ಪ್ರವಹವೆಂಬ ಎರಡನೆಯವಾಯುವಿನ ಸ್ಕಂಧವಲ್ಲಿರುವವುಗಳು ಬ್ರಹ್ಮನ ಉಚ್ಛ್ವಾಸಗಳಿಂದ ಹುಟ್ಟಿದ ಮೇಘಗಳು. ಆ ಪ್ರವಹವಾಯುವಿನ ಸ್ಕಂಧದಮೇಲಿರುವ ರೆಕ್ಕೆಗಳಿಂದ ಉತ್ಪನ್ನವಾದ ಪುಷ್ಕರಾದಿ ಮೇಘಗಳು ಮಳೆಯನ್ನು ವಿಶೇಷವಾಗಿ ಸುರಿಸುವುವು.

೫೧–೫೨. ಹಿಂದೆ ಹೇಳಿದ ಮೂರು ವಿಧವಾದ ಮೇಘಗಳು ಕೆಲವು ಶಬ್ದಮಾಡದೇ ಇರುವವುಗಳಾಗಿಯೂ, ಕೆಲವು ಗರ್ಜಿಸುವವುಗಳಾಗಿಯೂ,ಕೆಲವು ಕೆಟ್ಟ ಫಲಸೂಚನೆಯುಳ್ಳವುಗಳಾಗಿಯೂ,ಇರುವುವು ಆಗ್ನೇಯ (ಅಗ್ನಿಯ ಸಂಬಂಧವಾದ) ಮೇಘಗಳು ಶೀತವಾದ ಗಾಳಿಯೊಡನೆ ಬಹಳ ಹೊತ್ತಿನವರೆಗೂ ಸೋನೆ ಮಳೆಯನ್ನು ಸುರಿಸುವುವು. ಶಕ್ತಿ ಹೀನವಾದ ವೈರಿಂಚ್ಯ (ಬ್ರಹ್ಮನ ಶ್ವಾಸದಿಂದ ಹುಟ್ಟಿದ) ಮೇಘಗಳು ಮಿಂಚು ಮುಂತಾದ ವಿದ್ಯುತ್ತಿನ ಸಂಬಂಧವಿಲ್ಲದೇ ಭೂಮಿಯ ಮೇಲೆ ಒಂದು ಹರಿದಾರಿ ದೂರದಲ್ಲಿ ಮಾತ್ರ ಮಳೆಯನ್ನು ಸುರಿಸುವುವು.

ಅರ್ಧಕ್ರೋಶೇ ತು ಸರ್ವೇ ವೈ ಜೀಮೂತಾ ಗಿರಿವಾಸಿನಃ ।
ಮೇಘಾ ಯೋಜನಮಾತ್ರಂ ತು ಸಾಧ್ಯತ್ವಾದ್ಬಹುತೋಯದಾಃ ॥

ಧರಾಪೃಷ್ಠಾತ್ ದ್ವಿಜಾಃ ಕ್ಷ್ಮಾಯಾಂ ವಿದ್ಯುದ್ಗಣ ಸಮನ್ವಿತಾಃ ।
ತೇಷಾಂತೇಷಾಂ ವೃಷ್ಟಿಸರ್ಗಂ ತ್ರೇಧಾ ಕಥಿತಮತ್ರ ತು ॥೫೪॥

ಪಕ್ಷಜಾಃ ಕಲ್ಪಜಾಸ್ಸರ್ವೇ ಪರ್ವತಾನಾಂ ಮಹತ್ತಮಾಃ ।
ಕಲ್ಪಾಂತೇ ತೇ ಚ ವರ್ಷಂತಿ ರಾತ್ರೌ ನಾಶಾಯ ಶಾರದಾಃ ॥೫೫॥

ಪಕ್ಷಜಾಃ ಪುಷ್ಕರಾದ್ಯಾಶ್ಚ ವರ್ಷಂತಿ ಚ ಯದಾ ಜಲಂ ।
ತದಾಽರ್ಣವ ಮಭೂತ್ಸರ್ವಂ ತತ್ರ ಶೇತೇ ನಿಶೀಶ್ವರಃ ॥೫೬॥

ಆಗ್ನೇಯಾನಾಂ ಶ್ವಾಸಜಾನಾಂ ಪಕ್ಷಜಾನಾಂ ದ್ವಿಜರ್ಷಭಾಃ ।
ಜಲದಾನಾಂ ಸದಾಧೂಮೋ ಹ್ಯಾಪ್ಯಾಯನ ಇತಿಸ್ಮೃತಃ ॥೫೭॥

---

೫೩. ಎಲೈ ಬ್ರಾಹ್ಮಣರೇ, ಬೆಟ್ಟಗಳಲ್ಲಿ ಸಂಚರಿಸುತ್ತಿರುವ ಶಾಶ್ವತವಾದ (ಬ್ರಹ್ಮನ ನಿಶ್ವಾಸದಿಂದ ಹುಟ್ಟಿದ ಮೇಘಗಳು ಅರ್ಧ ಹರಿದಾರಿಯ ದೂರದಲ್ಲಿ ಮಳೆಯನ್ನು ಸುರಿಸುವುವು. ಮಿಂಚು, ಗುಡುಗು ಮುಂತಾದವುಗಳಿಂದ ಕೂಡಿದ್ದರೆ ಭೂಮಿಯಮೇಲೆ ಒಂದು ಯೋಜನದ ವರೆಗೂ, ಬಹುವಾಗಿ ಮಳೆಯನ್ನು ಸುರಿಸುವುವು.

೫೪. ಈಗ ಆಗ್ನೇಯ ಮತ್ತು ಶ್ವಾಸಜವಾದ ಮೇಘಗಳು ಮಳೆಯನ್ನು ಸುರಿಸುವುದನ್ನು ಮೂರು ವಿಧವಾಗಿ ಹೇಳಿಯಾಯಿತು.

೫೫. ಪಕ್ಷಜಗಳಾದ ಮೇಘಗಳಲ್ಲಿ ಕಲ್ಪಜವೆಂಬ ಹೆಸರುಳ್ಳ ಮೇಘಗಳು ದೊಡ್ಡಪರ್ವತಗಳಿಗಿಂತಲೂ ದೊಡ್ಡದಾಗಿರುವುವು. ಮತ್ತು ಇವು ಪ್ರಳಯಕಾಲದಲ್ಲಿ ಮಳೆಯನ್ನು ಸುರಿಸುವುವು. ಶಾರದ ಎಂಬ ಹೆಸರುಳ್ಳ ಮೇಘಗಳು ರಾತ್ರಿವೇಳೆಯಲ್ಲಿ ಲೋಕಕ್ಕೆ ಕೆಡುಕನ್ನು ಮಾಡುತ್ತಾ ಮಳೆಯನ್ನು ಸುರಿಸುತ್ತವೆ.

೫೬. ಪುಷ್ಕರವೇ ಮೊದಲಾದ ಹೆಸರುಗಳುಳ್ಳ ಮೇಘಗಳು ಮಳೆಯನ್ನು ಸುರಿಸಿ ಸಮಸ್ತ ಪ್ರಪಂಚವನ್ನೂ ಜಲಮಯ (ಸಮುದ್ರ) ವನ್ನಾಗಿ ಮಾಡುತ್ತವೆ. ಅವೇ ಸಮುದ್ರವೆನಿಸಿಕೊಂಡಿರುವುವು.

೫೭. ಎಲೈ ಬ್ರಾಹ್ಮಣೋತ್ತಮರೇ, ಆಗ್ನೇಯ, ಶ್ವಾಸಜ, ಮತ್ತು

ಪೌಂಡ್ರಾಸ್ತು ವೃಷ್ಟಯಸ್ಸರ್ವಾ ವೈದ್ಯುತಾಃ ಶೀತಸಸ್ಯದಾಃ ।
ಪುಂಡ್ರದೇಶೇಷು ಪತಿತಾ ನಾಗಾನಾಂ ಶೀಕರಾ ಹಿಮಾಃ ॥೫೮॥

ಗಾಂಗಾ ಗಂಗಾಂಬು ಸಂಭೂತಾಃ ಪರ್ಜನ್ಯೇನ ಪರಾವಹೈಃ ।
ನಗಾನಾಂಚ ನದೀನಾಂಚ ದಿಗ್ಗಜಾನಾಂ ಸಮಾಕುಲಂ ॥೫೯॥

ಮೇಘಾನಾಂಚ ಪೃಥಗ್ಭೂತಂ ಜಲಂ ಪ್ರಾಯಾದಗಾದಗಂ ।
ಪರಾವಹೋ ಯಃ ಶ್ವಸನ ಶ್ಚಾನಯು ತ್ಯಂಬಿಕಾಗುರುಂ ॥೬೦॥

ಸೇನಾಪತಿ ಮತಿಕ್ರಮ್ಯ ವೃಷ್ಟಿಶೇಷಂ ದ್ವಿಜಾಃ ಪದಂ ।
ಅಭ್ಯೇತಿ ಭಾರತೇ ವರ್ಷೇ ತ್ವಪರಾಂತ ವಿವೃದ್ಧಯೇ ॥೬೧॥

ವೃಷ್ಟಯಃ ಕಥಿತಾ ಹ್ಯತ್ರ ದ್ವಿಧಾ ವಸ್ತುವಿವೃದ್ಧಯೇ ।
ಸಸ್ಯದ್ವಯಸ್ಯ ಸಂಕ್ಷೇಪಾತ್ ಪ್ರಬ್ರವೀಮಿ ಯಥಾಮತಿ ॥೬೨॥

---

ಪಕ್ಷಜಗಳಾದ ಮೇಘಗಳು ಅಭಿವೃದ್ಧಿಹೊಂದಲು ಹೊಗೆಯೇ ಯಾವಾಗಲೂ ಕಾರಣವು.

೫೮. ಮಿಂಚಿನಿಂದ ಕೂಡಿಕೊಂಡಿರತಕ್ಕ ಪುಂಡ್ರವೆಂಬ ದೇಶದಲ್ಲಿನ ಮೋಡಗಳು ಶೀತ ಪ್ರದೇಶದಲ್ಲಿ ಬೆಳೆಯುಬಹುದಾದ ಸಸ್ಯಗಳಿಗೆ ಉತ್ತಮವಾದುವು. ಪುಂಡ್ರ ದೇಶದಲ್ಲಿ ಬಿದ್ದಂಥ ಮೋಡಗಳ ನೀರು ಮಂಜಿನಂತಿರುವುದು.

೫೯–೬೦. ಗಂಗಾನದಿಯ ನೀರಿನಿಂದ ಉತ್ಪನ್ನವಾದ ಮೇಘಗಳಿಗೆ ಗಾಂಗ ಎಂದು ಹೆಸರು. ಪರಾವಹವೆಂಬ ಹೆಸರುಳ್ಳ ವಾಯುವಿನಿಂದ ಬೇರೆಮಾಡಲ್ಪಟ್ಟ ಪರ್ವತ, ನದಿ, ದಿಗ್ಗಜಗಳು, ಮೇಘ, ಇವುಗಳ ನೀರನ್ನು ಮೇಘದೊಡನೆ ಸೇರಿಸಿಕೊಂಡು, ಪರ್ವತದಿಂದ ಪರ್ವತಕ್ಕೆ ಸಂಚರಿಸುತ್ತಾ ಇರುವ ಪರಾವಹವೆಂಬ ವಾಯುವು ಹಿಮಾಲಯ ಪರ್ವತಕ್ಕೆ ತೆಗೆದುಕೊಂಡು ಬರುವುದು.

೬೧. ಎಲೈ ಬ್ರಾಹ್ಮಣರೇ, ಈ ವಾಯುವು ಹಿಮಾಲಯ ಪರ್ವತವನ್ನು ದಾಟಿ, ಬಹಳ ನೀರುಳ್ಳದ್ದಾಗಿ ಸಮುದ್ರ ಮಧ್ಯದಲ್ಲಿರುವ ದೇಶಗಳ ಬೆಳೆವಣಿಗೆಗಾಗಿ ಭಾರತ ಭೂಮಿಗೆ ಬರುತ್ತದೆ.

೬೨. ಎರಡು ರೀತಿಯ ಸಸ್ಯದ ಅಭಿವೃದ್ಧಿಗೋಸ್ಕರ ಇರುವ ಎರಡು

ಸ್ರಷ್ಟಾ ಭಾನುರ್ಮಹಾತೇಜಾಃ ವೃಷ್ಟೀನಾಂ ವಿಶ್ವದೃಗ್ವಿಭುಃ ।
ಸೋಽಪಿಸಾಕ್ಷಾದ್ದ್ವಿಜಶ್ರೇಷ್ಠಾಃ ಜೇಶಾನಃ ಪರಮಃ ಶಿವಃ ॥೬೩॥
ಸ ಏವ ತೇಜಸ್ತ್ವೋಜಸ್ತು ಬಲಂ ವಿಪ್ರಾ ಯಶಃ ಸ್ವಯಂ ।
ಚಕ್ಷುಃ ಶ್ರೋತ್ರಂ ಮನೋಮೃತ್ಯು ರಾತ್ಮಾಮನ್ಯು ರ್ವಿದಿಗ್ದಿಶಃ ॥
ಸತ್ಯಂ ಋತಂ ತಥಾ ವಾಯು ರಂಬರಂ ಖಚರಶ್ಚ ಸಃ ।
ಲೋಕಪಾಲೋ ಹರಿರ್ಬ್ರಹ್ಮಾ ರುದ್ರಃ ಸಾಕ್ಷಾನ್ಮಹೇಶ್ವರಃ ॥೬೫॥
ಸಹಸ್ರಕಿರಣಃ ಶ್ರೀಮಾನಷ್ಟಹಸ್ತಃ ಸುಮಂಗಲಃ ।
ಅರ್ಧನಾರೀವಪುಸ್ಸಾಕ್ಷಾ ತ್ರಿನೇತ್ರ ಸ್ತ್ರಿದಶಾಧಿಪಃ ॥೬೬॥

---

ಬಗೆಯಾದ ವೃಷ್ಟಿಗಳು ಸಂಕ್ಷೇಪವಾಗಿ ನಿಮಗೆ ಹೇಳಲ್ಪಟ್ಟವು. ಮುಂದೆ ತಿಳಿದಷ್ಟು ಮಟ್ಟಿಗೆ ಆದಿತ್ಯನ ಸ್ವರೂಪವನ್ನು ತಿಳಿಸುತ್ತೇನೆ.

೬೩. ಎಲೈ ದ್ವಿಜೋತ್ತಮರೇ, ಸೂರ್ಯನು ಮಹಾತೇಜಸ್ವಿಯು, ಮೇಘಗಳಾಗಲು ಕಾರಣನು. ಜಗತ್ತಿಗೇ ಕಣ್ಣಿನಂತಿರುವನು. ಎಲ್ಲಾ ಕಡೆಯಲ್ಲೂ ವ್ಯಾಪಿಸಿರುವನು. ಅವನೂ ನಮ್ಮನ್ನೆಲ್ಲರನ್ನೂ ರಕ್ಷಿಸುವನು. ಸಾಕ್ಷಾತ್ಪರಶಿವನೂ, ಅಗಿರುವನು (ಪರಶಿವನ ಸ್ವರೂಪವೆಂದು ಭಾವವು.)

೬೪. ಎಲೈ ಬ್ರಾಹ್ಮಣರೇ, ಆವನೇ ತೇಜೋ (ಬೆಳಕು) ರೂಪನೂ, ಓಜೋ (ಕಾಂತಿ) ರೂಪನೂ, ಆಗಿರುವನು. ತಾನೇ ಬಲ, ಕೀರ್ತಿ ಸ್ವರೂಪನೂ. ಅವನೇ, ಕಣ್ಣು, ಕಿವಿ, ಮನಸ್ಸು, ಸಾವು, ಆತ್ಮನು ಯಜ್ಞ, ಆಗ್ನೇಯಾದಿ ನಾಲ್ಕುದಿಕ್ಕುಗಳ ವಿದಿಕ್ಕುಗಳು ಮತ್ತು ಪೂರ್ವಾದಿ ನಾಲ್ಕು ದಿಕ್ಕುಗಳು, ಇವುಗಳ ಸ್ವರೂಪನು.

೬೫. ಆ ಸೂರ್ಯನು ಸತ್ಯ ಸ್ವರೂಪನೂ, ಋತ ಸ್ವರೂಪನೂ, ವಾಯು ಸ್ವರೂಪನೂ, ಆಕಾಶ ಸ್ವರೂಪನೂ, ಗ್ರಹ ಸ್ವರೂಪನೂ, ಪ್ರಪಂಚವನ್ನು ಪಾಲಿಸತಕ್ಕ ವಿಷ್ಣು ಸ್ವರೂಪನೂ, ಬ್ರಹ್ಮ ಸ್ವರೂಪನೂ, ಮಹೇಶ್ವರನಾದ ರುದ್ರನ ಸ್ವರೂಪನೂ, ಆಗಿರುವನು.

೬೬. ಅವನು ಸಾವಿರ ಕಿರಣಗಳುಳ್ಳವನು, ಕಾಂತಿಯುಕ್ತನು, ಎಂಟು ಕೈಗಳುಳ್ಳವನು, ಮಂಗಳಕರನೂ, ಅರ್ಧನಾರೀಶ್ವರನೂ,

ಅಸ್ಯೈವೇಹ ಪ್ರಸಾದಾತ್ತು ವೃಷ್ಟಿರ್ನಾನಾಽಭವದ್ದ್ವಿಜಾಃ ।
ಸಹಸ್ರಗುಣಮುತ್ಸ್ರಷ್ಟುಂ ಆದತ್ತೇ ಕಿರಣೈರ್ಜಲಂ ॥೬೭॥

ಜಲಸ್ಯನಾಶೋ ವೃದ್ಧಿರ್ವಾ ನಾಸ್ತ್ಯೇವಾಸ್ಯ ವಿಚಾರತಃ ।
ಧ್ರುವೇಣಾಧಿಷ್ಟಿತೋ ವಾಯುಃ ವೃಷ್ಟಿಂ ಸಂಹರತೇ ಪುನಃ ॥೬೮॥

ಗ್ರಹಾನ್ನಿಸ್ಸೃತ್ಯ ಸೂರ್ಯಾತ್ತು ಕೃತ್ಸ್ನೇ ನಕ್ಷತ್ರಮಂಡಲೇ ।
ಚಾರಸ್ಯಾಂತೇ ವಿಶತ್ಯರ್ಕೇ ಧ್ರುವೇಣ ಸಮಧಿಷ್ಠಿತಾ ॥೬೯॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಜ್ಯೋತಿಶ್ಚಕ್ರೇ ಸೂರ್ಯಗತ್ಯಾದಿ ಕಥನಂ ನಾಮ ಚತುಃಪಂಚಾಶತ್ತಮೋಽಧ್ಯಾಯಃ

---

ಮೂರು ಕಣ್ಣುಳ್ಳವನೂ, ಆದ ಮಹೇಶ್ವರ ಸ್ವರೂಪನೂ, ದೇವತೆಗಳಿಗೆಲ್ಲರಿಗೂ ಒಡೆಯನು.

೬೭. ಎಲೈ ಬ್ರಾಹ್ಮಣರೇ, ಈ ಸೂರ್ಯನ ಅನುಗ್ರಹದಿಂದಲೇ ನಾನಾ ವಿಧವಾಗಿ ಮಳೆಯುಂಟಾಗುವುದು. ಇವನು ತನ್ನ ಕಿರಣಗಳಿಂದ ಸ್ವೀಕರಿಸಿದ ನೀರಿನ ಸಾವಿರದಷ್ಟು ಮಳೆಯನ್ನು ಸುರಿಸುವನು.

೬೮. ಈ ಸೂರ್ಯನ ದೆಸೆಯಿಂದ ನೀರಿನ ನಾಶವಾಗಲೀ, ಅಭಿವೃದ್ಧಿಯಾಗಲೀ ಉಂಟಾಗುವುದಿಲ್ಲ. ಧ್ರುವಮಂಡಲದಲ್ಲಿ ಸಂಚರಿಸುವ ವಾಯುವು ಮಳೆಯನ್ನು ನಿಲ್ಲಿಸುತ್ತದೆ.

೬೯. ಮೇಘವು ಮೊದಲು ಸೂರ್ಯ ಗ್ರಹದಿಂದ ಹೊರಟು ನಕ್ಷತ್ರ ಮಂಡಲದಲ್ಲೆಲ್ಲಾ ಸಂಚರಿಸಿ ಮಳೆಯನ್ನು ಸುರಿಸುತ್ತದೆ. ಮಳೆ ಎಲ್ಲವೂ ಮುಗಿದಮೇಲೆ, ಮೇಘವು ಧ್ರುವಮಂಡಲದ ಮಾರ್ಗವಾಗಿ ಸೂರ್ಯನನ್ನು ಸೇರುತ್ತದೆ.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಜ್ಯೋತಿರ್ಮಂಡಲದಲ್ಲಿ ಸೂರ್ಯಗತಿಯ ವಿವರ ವಿಶೇಷಗಳನ್ನು ವರ್ಣಿಸಿರುವ ಐವತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
ಪಂಚ ಪಂಚಾಶತ್ತಮೋಽಧ್ಯಾಯಃ

॥ ಸೂತ ಉವಾಚ ॥

ಸಾರಂ ಸಂಕ್ಷೇಪತೋ ವಕ್ಷ್ಯೇ ರಥಂ ಶಶಿನ ಏವಚ।
ಗ್ರಾಹಾಣಾ ಮಿತರೇಷಾಂ ಚ ಯಥಾ ಗಚ್ಛತಿ ಚಾಂಬುಪಃ ॥ ೧ ॥

ಸೌರಸ್ತುಬ್ರಹ್ಮಣಾ ಸೃಷ್ಟೋ ರಥ ಸ್ತ್ವರ್ಥವಶೇನ ಸಃ।
ಸಂವತ್ಸರಸ್ಯಾವಯವೈಃ ಕಲ್ಪಿತಶ್ಚ ದ್ವಿಜರ್ಷಭಾಃ ॥ ೨ ॥

ತ್ರಿಣಾಭಿನಾ ತು ಚಕ್ರೇಣ ಪಂಚಾರೇಣ ಸಮನ್ವಿತಃ।
ಸೌವರ್ಣ ಸ್ಸರ್ವದೇವಾನಾಂ ಆವಾಸೋ ಭಾಸ್ಕರಸ್ಯ ತು ॥ ೩ ॥

ನವಯೋಜನ ಸಾಹಸ್ರೋ ವಿಸ್ತಾರಾಯಾಮತಃ ಸ್ಮೃತಃ।
ದ್ವಿಗುಣೋಽಪಿ ರಥೋಪಸ್ಥಾದೀಷಾದಂಡಃ ಪ್ರಮಾಣತಃ ॥ ೪ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಐವತ್ತೈದನೆಯ ಅಧ್ಯಾಯವು.

೧. ಈಗ ಸೂರ್ಯನ ಸಂಬಂಧಿ ರಥವನ್ನೂ, ಚಂದ್ರನ ರಥವನ್ನೂ, ಬೇರೇ ಗ್ರಹಗಳ ರಥದ ವಿಚಾರಗಳನ್ನೂ, ಸೂರ್ಯನ ಚಲನವನ್ನೂ ಸಂಕ್ಷೇಪವಾಗಿ ತಿಳಿಸುವೆನು.

೨. ಎಲೈ ಬ್ರಾಹ್ಮಣೋತ್ತಮರೇ, ಬ್ರಹ್ಮನಿಂದ ಪ್ರಯೋಜನಕ್ಕನುಗುಣವಾಗಿ ಈ ಸೂರ್ಯನ ರಥವು ಸಂವತ್ಸರದ ಅವಯವಗಳಿಂದ ನಿರ್ಮಿತವಾಗಿರುವುದು.

೩. ಸೂರ್ಯನ ರಥವು ಮೂರು ಗುಂಭಗಳುಳ್ಳದ್ದು, ಐದು ಆರೇಕಾಲಿನ ಪಟ್ಟಿಗಳಿಂದ ಕೂಡಿದುದು. ಚಿನ್ನದಿಂದ ನಿರ್ಮಿತವಾದುದು. ಸಮಸ್ತದೇವತೆಗಳಿಗೂ ಆವಾಸಸ್ಥಾನವಾಗಿರುವುದು.

೪. ಈ ರಥವು ಒಂಬತ್ತು ಯೋಜನದಷ್ಟು ಸುತ್ತಳತೆಯುಳ್ಳದ್ದಾಗಿರುವುದು. ಈ ರೀತಿ ಉದ್ದ, ಮತ್ತು ಅಗಲದಲ್ಲಿ ರಥವು ಎರಡ

ಅಸಂಗ್ಯೈಸ್ತು ಹಯೈರ್ಯುರ್ಕ್ತೋ ಯತಶ್ಚಕ್ರಂ ತತಃ ಸ್ಥಿತೈಃ।
ವಾಜಿನಸ್ತಸ್ಯ ವೈ ಸಪ್ತ ಛಂದೋಭಿ ರ್ನಿರ್ಮಿತಾಸ್ತು ತೇ ॥ ೫ ॥
ಚಕ್ರಪಕ್ಷೇ ನಿಬದ್ಧಾಸ್ತು ಧ್ರುವೇ ಚಾಕ್ಷಃ ಸಮರ್ಪಿತಃ।
ಸಹಾಶ್ವಚಕ್ರೋ ಭ್ರಮತೇ ಸಹಾಕ್ಷೋ ಭ್ರಮತೇ ಧ್ರುವಃ ॥ ೬ ॥
ಅಕ್ಷಃ ಸಹೈಕ ಚಕ್ರೇಣ ಭ್ರಮತೇಽಸೌ ಧ್ರುವೇರಿತಃ ।
ಪ್ರೇರಕೋ ಜ್ಯೋತಿಷಾಂ ಧೀಮಾನ್ ಧ್ರುವೋ ವೈ ವಾತ ರಶ್ಮಿಭಿಃ॥
ಯುಗಾಕ್ಷ ಕೋಟಿಸಂಬದ್ಧೌ ದ್ವೌ ರಶ್ಮೀ ಸ್ಯಂದನಸ್ಯ ತು।
ಧ್ರುವೇಣ ಭ್ರಮತೇ ರಶ್ಮಿ ನಿಬದ್ಧಃ ಸ ಯುಗಾಕ್ಷಯೋಃ ॥ ೮ ॥

---

ರಷ್ಟಿದ್ದರೂ ಕೂಡ ಅದರ ಕೆಳಭಾಗವು ಮಾತ್ರ ಒಂದು ನೇಗಿಲಿನ ಈಚಿನ ಉದ್ದದಷ್ಟು ಮಾತ್ರ ಇರುವುದು.

೫. ಚಕ್ರವಿರುವ ಸಮೀಪದಲ್ಲಿ ವೇದಗಳಿಂದ ಮಾಡಲ್ಪಟ್ಟ ಅಂತರಿಕ್ಷದಲ್ಲೇ ಸಂಚಾರಮಾಡುವಂತಹ ಏಳು ಕುದುರೆಗಳಿಂದ ಕೂಡಿದುದಾಗಿರುವುದು. ಆ ಏಳು ಕುದುರೆಗಳ ಹೆಸರುಗಳನ್ನು ಗಾಯತ್ರೀ, ಬಹತೀ, ಉಷ್ಣಿಕ್, ಜಗತೀ, ತ್ರಿಷ್ಟುಪ್, ಪಂಙ್ಕ್ತಿ, ಎಂಬುದಾಗಿ ವಿಷ್ಣುಪುರಾಣದಲ್ಲಿ ಹೇಳಿರುವರು.

೬. ಆ ಅಶ್ವಗಳು ಚಕ್ರದ ಪಾರ್ಶ್ವಭಾಗದಲ್ಲಿ ಕಟ್ಟಲ್ಪಟ್ಟಿರುವುವು. ರಥದ ಅಚ್ಚು ಧ್ರುವನಲ್ಲಿ ಸಂಬಂಧವಾಗಿರುವುದು. ರಥವು ಕುದುರೆಗಳಿಂದಲೂ, ಚಕ್ರಗಳಿಂದಲೂ ಕೂಡಿ ಸುತ್ತುವುದು. ಅಚ್ಚಿನಿಂದ ಕೂಡಿದ ಧ್ರುವವೂ ಸುತ್ತುವುದು.

೭. ಅದರ ಅಚ್ಚು ಏರು ಮರದ ಸಹಾಯದಿಂದ ಒಂದು ಚಕ್ರದೊಡನೆ ಕೂಡಿಕೊಂಡು ತಿರುಗುವುದು. ನಿಖಿಲವಾದ ನಕ್ಷತ್ರ ಮಂಡಲದ ಚಲನ ವಲನಗಳಿಗೂ ಕಾರಣವಾದ ಆ ಏರುಮರುವು ಆ ವಾಯುವಿನ ಅಲೆಗಳ ಸಹಾಯದಿಂದ ತಿರುಗುವುದು.

೮. ಆ ರಥಕ್ಕೆ ನೊಗಕ್ಕೂ ಮತ್ತು ಅಚ್ಚಿನತುದಿಗೂ ಕಟ್ಟಿದಂತಹ ಎರಡು ಹಗ್ಗಗಳಿವೆ. ನೊಗಕ್ಕೂ ಅಚ್ಚಿಗೂ ಕೂಡಿಕೊಂಡಿರುವ ಹಗ್ಗಗಳಿಂದ ಕೂಡಿರುವ ಸೂರ್ಯನ ರಥವು ಏರುಮರದಿಂದ ಕೂಡಿ ಸುತ್ತುವುದು.

ಭ್ರಮತೋ ಮಂಡಲಾನಿ ಸ್ಯುಃ ಖೇಚರಸ್ಯ ರಥಸ್ಯ ತು ।
ಯುಗಾಕ್ಷ ಕೋಟೀ ತೇ ತಸ್ಯ ದಕ್ಷಿಣೇ ಸ್ಯಂದನಸ್ಯ ಹಿ ॥ ೯ ॥

ಧ್ರುವೇಣ ಪ್ರಗೃಹೀತೇ ವೈ ವಿಚಕ್ರಾಶ್ವೇ ಚ ರಜ್ಜುಭಿಃ ।
ಭ್ರಮಂತ ಮನುಗಚ್ಛಂತಿ ಧ್ರುವಂ ರಶ್ಮೀ ಚ ತಾವುಭೌ ॥೧೦॥

ಯುಗಾಕ್ಷ ಕೋಟಿಸ್ತ್ವೇತಸ್ಯ ವಾತೋರ್ಮಿ ಸ್ಯಂದನಸ್ಯ ತು ।
ಕೀಲೇ ಸಕ್ತಾ ಯಥಾ ರಜ್ಜುಃ ಭ್ರಮತೇ ಸರ್ವತೋ ದಿಶಂ॥೧೧॥

ಭ್ರಾಮ್ಯತ ಸ್ತಸ್ಯ ರಶ್ಮೀ ತು ಮಂಡಲೇ ಷೂತ್ತರಾಯಣೇ ।
ವರ್ಧೇತೇ ದಕ್ಷಿಣೇ ಚೈವ ಭ್ರಮತಾ ಮಂಡಲಾನಿ ತು ॥೧೨॥

ಆಕೃಷ್ಯೇತೇ ಯದಾ ತೇ ವೈ ಧ್ರುವೇಣಾ ಧಿಷ್ಠಿತೇ ತದಾ ।
ಆಭ್ಯಂತರಸ್ಥಃ ಸೂರ್ಯೋಽಥ ಭ್ರಮತೇ ಮಂಡಲಾನಿ ತು ॥೧೩॥

---

೯. ಅಂತರಿಕ್ಷದಲ್ಲಿ ಸಂಚಾರಮಾಡುವ ರಥದ ಸುತ್ತುವಿಕೆಯ ಕಾರಣದಿಂದ ಮಂಡಲಗಳು ನಿರ್ಮಿತವಾಗುತ್ತವೆ.

೧೦. ಹಗ್ಗಕ್ಕೆ ಸಂಬಂಧಿಸಿದಂಥ ಆ ನೊಗವೂ, ಅಚ್ಚಿನ ತುದಿಯೂ, ಸೂರ್ಯನ ರಥದ ಬಲಭಾಗದಲ್ಲಿ ಏರುಮರದಿಂದ ಕೂಡಿದವುಗಳಾಗಿವೆ. ಸಾರಥಿಯಾದ ಅರುಣನಿಂದಲೂ, ಚಕ್ರಗಳಿಂದಲೂ, ಕುದುರೆಗಳಿಂದಲೂ, ಕೂಡಿದ ಆ ಎರಡುಹಗ್ಗಗಳೂ, ತಿರುಗುತ್ತಿರುವ ಏರುಮರವನ್ನನುಸರಿಸಿ ತಿರುಗುತ್ತವೆ.

೧೧. ವಾಯುವಿನ ಅಲೆಯ ರೂಪವಾಗಿರುವ ಈ ಸೂರ್ಯನ ರಥದ ನೊಗವೂ, ಮತ್ತು ಅಚ್ಚೂ ಕೂಡ ಗೂಟದಲ್ಲಿ ಕಟ್ಟಿದ ಹಗ್ಗವು ಸುತ್ತುವಂತೆ ಎಲ್ಲ ದಿಕ್ಕುಗಳನ್ನೂ, ಸುತ್ತುವುದು.

೧೨-೧೩. ಹೀಗೆ ಸುತ್ತುತ್ತಿರುವ ಆ ಸೂರ್ಯನ ಕಿರಣಗಳು ಉತ್ತರಾಯಣದಲ್ಲಿ ಮಂಡಲಾ ಕಾರವಾಗಿ ಅಭಿವೃದ್ಧಿಯನ್ನು ಹೊಂದುತ್ತವೆ. ದಕ್ಷಿಣಾಯನದಲ್ಲಿ ಆ ಮಂಡಲದ ಆಕಾರವು ಕಡಿಮೆಯಾಗುತ್ತದೆ. ಯಾವಾಗ ಆ ಕಿರಣಗಳು ಧ್ರುವಮಂಡಲದ ಆಕರ್ಷಣೆಗೊಳಗಾಗುವವೋ, ಆಗ ಸೂರ್ಯನು ಎಲ್ಲ ಮಂಡಲಗಳಲ್ಲಿಯೂ ಸಂಚರಿಸುತ್ತಾನೆ.

ಅಶೀತಿಮಂಡಲ ಶತಂ ಕಾಷ್ಠಯೋ ರಂತರಂ ದ್ವಯೋಃ ।
ಧ್ರುವೇಣ ಮುಚ್ಯಮಾನಾಭ್ಯಾಂ ರಶ್ಮಿಭ್ಯಾಂ ಪುನರೇವ ತು ॥೧೪॥

ತಥೈವ ಬಾಹ್ಯತಃ ಸೂರ್ಯೋ ಭ್ರಮತೇ ಮಂಡಲಾನಿ ತು ।
ಉದ್ವೇಷ್ಟಯನ್ ಸ ವೇಗೇನ ಮಂಡಲಾನಿ ತು ಗಚ್ಛತಿ ॥೧೫॥

ದೇವಾಶ್ಚೈವ ತಥಾ ನಿತ್ಯಂ ಮುನಯಶ್ಚ ದಿವಾನಿಶಂ ।
ಯಜಂತಿ ಸತತಂ ದೇವಂ ಭಾಸ್ಕರಂ ಭವಮೀಶ್ವರಂ ॥೧೬॥

ಸ ರಥೋಽಧಿಷ್ಠಿತೋ ದೇವೈರಾದಿತ್ಯೈ ಮುನಿಭಿಸ್ತಥಾ ।
ಗಂಧರ್ವೈ ರಪ್ಸರೋಭಿಶ್ಚ ಗ್ರಾಮಣೀ ಸರ್ಪರಾಕ್ಷಸೈಃ ॥೧೭॥

ಏತೇ ವಸಂತಿ ವೈ ಸೂರ್ಯೇ ದ್ವೌದ್ವೌ ಮಾಸೌ ಕ್ರಮೇಣ ತು ।
ಆಪ್ಯಾಯಯಂತಿ ಚಾದಿತ್ಯಂ ತೇಜೋಭಿ ರ್ಭಾಸ್ಕರಂ ಶಿವಂ ॥೧೮॥

---

೧೪. ಏರುಮುರದಿಂದ ಬೇರೆಬೇರೇ ಕಡೆಗೆ ಹೊರಟಿರುವ ಹಗ್ಗಗಳಿಗೂ ಮತ್ತು ಎರಡು ಕಡೆಗಳಲ್ಲಿರುವ ದಿಕ್ಕುಗಳಿಗೂ, ಮಧ್ಯಭಾಗದಲ್ಲಿ ಎಂಬತ್ತುಸಾವಿರ ಮಂಡಲದ ಅಂತರವಿರುವುದು.

೧೫. ಅವುಗಳ ಸಹಾಯದಿಂದ ಸೂರ್ಯನು ತನ್ನ ವೇಗದಿಂದ ಎಲ್ಲ ಮಂಡಲಗಳನ್ನೂ ಜಾಗ್ರತೆಯಾಗಿ ದಾಟುತ್ತಾ ಮಂಡಲಗಳನ್ನೆಲ್ಲವನ್ನೂ ಸಂಚರಿಸುವನು.

೧೬. ದೇವತೆಗಳೂ, ಮತ್ತು ಋಷಿಗಳೆಲ್ಲರೂ ಸೇರಿ ಹಗಲೂ, ರಾತ್ರಿಯೂ ಎಡಬಿಡದೇ ಯಾವಾಗಲೂ ಭಗವಂತನಾದಂಥ, ಸಾಕ್ಷಾದೀಶ್ವರ ಸ್ವರೂಪನಾದಂಥ ಸೂರ್ಯನನ್ನು ಪೂಜೆಮಾಡುತ್ತಾರೆ.

೧೭. ಆ ಸೂರ್ಯನರಥವು ಮೂವತ್ತುಮೂರುಕೋಟಿ ದೇವತೆಗಳಿಂದಲೂ, ದ್ವಾದಶಾದಿತ್ಯರಿಂದಲೂ, ಸಪ್ತಋಷಿಗಳಿಂದಲೂ, ಗಂಧರ್ವರಿಂದಲೂ, ಅಪ್ಸರರಿಂದಲೂ, ಉತ್ತಮವಾದ ಸರ್ಪಗಳಿಂದಲೂ, ಮತ್ತು ರಾಕ್ಷಸರಿಂದಲೂ ಕೂಡಿರುವುದು.

೧೮. ಇವರೆಲ್ಲರೂ ಸೂರ್ಯನ ರಥದಲ್ಲಿ ಅವನ ಸಂಗಡ ಎರಡೆರಡು ತಿಂಗಳು ಕ್ರಮವಾಗಿ ವಾಸಮಾಡುತ್ತಾ ತಮ್ಮ ತಮ್ಮ ಕಾಂತಿಯಿಂದ ಮಂಗಳಕರನಾದ ಸೂರ್ಯನನ್ನು ಸಂತೋಷಪಡಿಸುತ್ತಾರೆ.

ಗ್ರಥಿತೈಃ ಸ್ವೈರ್ವಚೋಭಿಸ್ತು ಸ್ತುವಂತಿ ಮುನಯೋ ರವಿಂ ।
ಗಂಧರ್ವಾಪ್ಸರಸಶ್ಚೈವ ನೃತ್ಯಗೇಯೈ ರುಪಾಸತೇ ॥೧೯॥
ಗ್ರಾಮಣೀ ಯಕ್ಷಭೂತಾನಿ ಕುರ್ವತೇಽಭೀಷು ಸಂಗ್ರಹಂ ।
ಸರ್ಪಾ ವಹಂತಿ ವೈ ಸೂರ್ಯಂ ಯಾತು ಧಾನಾನುಯಾಂತಿ ಚ ॥೨೦॥
ವಾಲಖಿಲ್ಯಾ ನಯಂತ್ಯಸ್ತಂ ಪರಿವಾರ್ಯೋದಯಾದ್ರವಿಂ ।
ಇತ್ಯೇತೇ ವೈ ವಸಂತೀಹ ದ್ವೌದ್ವೌಮಾಸೌ ದಿವಾಕರೇ ॥೨೧॥
ಮಧುಶ್ಚ ಮಾಧವಶ್ಚೈವ ಶುಕ್ರಶ್ಚ ಶುಚಿ ರೇವಚ।
ನಭೋ ನಭಸ್ಯೋ ವಿಪ್ರೇಂದ್ರ ಇಷಶ್ಚೋರ್ಜ ಸ್ತಥೈವಚ ॥೨೨॥
ಸಹಃ ಸಹಸ್ಯೌ ಚ ತಥಾ ತಪಸ್ಯಶ್ಚ ತಪಃ ಪುನಃ ।
ಏತೇ ದ್ವಾದಶ ಮಾಸಾಸ್ತು ವರ್ಷಂ ವೈ ಮಾನುಷಂ ದ್ವಿಜಾಃ ॥೨೩॥

---

೧೯. ಸಪ್ತಋಷಿಗಳು ಸೂರ್ಯನನ್ನು ತಮ್ಮ ಕೌಶಲ್ಯದಿಂದ ರಚಿಸಿದ ಮಾತುಗಳಿಂದ ಸ್ತೋತ್ರ ಮಾಡುತ್ತಾರೆ. ಗಂಧರ್ವರೂ, ಅಪ್ಸರರೂ ಕೂಡ ನಾಟ್ಯದಿಂದಲೂ ಗಾನಮಾಡುವುದರಿಂದಲೂ ಸೂರ್ಯನನ್ನು ಪೂಜಿಸುತ್ತಾರೆ.

೨೦. ಯಕ್ಷರೂ, ಭೂತಗಳೂ, ಆ ಸೂರ್ಯನ ರಥದ ಹಗ್ಗಗಳನ್ನು ಹಿಡಿದುಕೊಳ್ಳುವರು. ಸರ್ಪಗಳು ಸೂರ್ಯನನ್ನು ಹೊರುತ್ತವೆ. ರಾಕ್ಷಸರು ಸೂರ್ಯನನ್ನು ಅನುಸರಿಸಿ ಸಂಚರಿಸುವರು.

೨೧. ವಾಲಖಿಲ್ಯರೆಂಬ ಹೆಸರುಳ್ಳ ಋಷಿಗಳು ಸೂರ್ಯನ ಸಂಗಡ ಎರಡು ತಿಂಗಳ ಕಾಲ ವಾಸಮಾಡುತ್ತ ಸೂರ್ಯನ ಹುಟ್ಟುವಿಕೆಯಿಂದ ಅಸ್ತಮನಕಾಲದಲ್ಲಿ ಅಸ್ತಾಚಲ ಪರ್ವತಕ್ಕೆ ಸೂರ್ಯನನ್ನು ಒಯ್ಯುತ್ತಾರೆ.

೨೨–೨೩. ಎಲೈ ಬ್ರಾಹ್ಮಣೋತ್ತಮರೇ, ಮನುಜರಿಗೆ ಸಂಬಂಧಿಸಿದ ವರ್ಷಗಳಲ್ಲಿ ಮಧು, ಮಾಧವ, ಶುಕ್ರ, ಶುಚಿ, ನಭ, ನಭಸ್ಯ, ಇಷ, ಓಜ, ಸಹ, ಸಹಸ್ಯ, ತಪಸ್ಯ, ತಪ, ಎಂಬ ಹೆಸರುಳ್ಳ ಹನ್ನೆರಡು ತಿಂಗಳುಗಳಿವೆ.

ವಾಸಂತಿಕ ಸ್ತಥಾಗ್ರೈಷ್ಮಃ ಶುಭೋ ವೈ ವಾರ್ಷಿಕಸ್ತಥಾ ।
ಶಾರದಶ್ಚ ಹಿಮಶ್ಚೈವ ಶೈಶಿರೋ ಋತವಃ ಸ್ಮೃತಾಃ ॥೨೪॥

ಧಾತಾಽರ್ಯಮಾಽಥ ಮಿತ್ರಶ್ಚ ವರುಣಶ್ಚೇಂದ್ರ ಏವಚ ।
ವಿವಸ್ವಾಂ ಶ್ಚೈವ ಪೂಷಾ ಚ ಪರ್ಜನ್ಯೋಽಂಶು ರ್ಭಗಸ್ತಥಾ ॥೨೫॥

ತ್ವಷ್ಟಾ ವಿಷ್ಣುಃ ಪುಲಸ್ತ್ಯಶ್ಚ ಪುಲಹಶ್ಚಾ ತ್ರಿರೇವಚ ।
ವಸಿಷ್ಠ ಶ್ಚಾಂಗಿರಾಶ್ಚೈವ ಭೃಗು ರ್ಬುದ್ಧಿಮತಾಂ ವರಃ ॥೨೬॥

ಭಾರದ್ವಾಜೋ ಗೌತಮಶ್ಚ ಕಶ್ಯಪಶ್ಚ ಕ್ರತುಸ್ತಥಾ ।
ಜಮದಗ್ನಿಃ ಕೌಶಿಕಶ್ಚ ವಾಸುಕಿಃ ಕಂಕಣೀಕರಃ ॥೨೭॥

ತಕ್ಷಕಶ್ಚ ತಥಾ ನಾಗ ಏಲಾಪತ್ರ ಸ್ತಥಾದ್ವಿಜಾಃ ।
ಶಂಖಪಾಲ ಸ್ತಥಾಚಾನ್ಯ ಸ್ತ್ವೈರಾವತ ಇತಿ ಸ್ಮೃತಃ ॥೨೮॥

ಧನಂಜಯೋ ಮಹಾಪದ್ಮ ಸ್ತಥಾ ಕರ್ಕೋಟಕಃ ಸ್ಮೃತಃ ।
ಕಂಬಲೋಽ ಶ್ವತರಶ್ಚೈವ ತುಂಬುರುರ್ನಾರದ ಸ್ತಥಾ ॥೨೯॥

---

೨೪. ಮತ್ತು ವಸಂತ, ಗ್ರೀಷ್ಮ, ವರ್ಷ, ಶರತ್, ಹೇಮಂತ, ಶಿಶಿರ ಎಂಬ ಹೆಸರುಳ್ಳಂಥ ಶುಭಕರವಾದ ಆರು ಋತುಗಳಿವೆ.

೨೫. ಮತ್ತು ಧಾತಾ, ಅರ್ಯಮ, ಮಿತ್ರ, ವರುಣ, ಇಂದ್ರ, ವಿವಸ್ವಾನ್, ಪೂಷಾ, ಪರ್ಜನ್ಯ, ಅಂಶು, ಭಗ, ತ್ವಷ್ಟ್ರ, ವಿಷ್ಣು, ಎಂಬ ಹೆಸರುಳ್ಳ ದ್ವಾದಶಾದಿತ್ಯರೂ ಇದ್ದಾರೆ.

೨೬-೨೭. ಋಷಿಗಳಲ್ಲಿ ಪುಲಸ್ತ್ಯ, ಪುಲಹ, ಅತ್ರಿ, ವಸಿಷ್ಠ, ಅಂಗಿರಸ, ಭೃಗು, ಬುದ್ಧಿವಂತರಲ್ಲಿ ಶ್ರೇಷ್ಠನಾದ ಭಾರದ್ವಾಜ, ಗೌತಮ, ಕಶ್ಯಪ, ಕ್ರತು, ಜಮದಗ್ನಿ, ಕೌಶಿಕರೆಂಬ ಹೆಸರುಳ್ಳ ಹನ್ನೆರಡು ಜನರಿದ್ದಾರೆ.

೨೮-೨೯. ಎಲೈ ಬ್ರಾಹ್ಮಣರುಗಳಿರಾ, ವಾಸುಕಿ, ಕಂಕಣೀಕರ, ತಕ್ಷಕ, ನಾಗ, ಏಲಾಪತ್ರ, ಶಂಖಪಾಲ, ಐರಾವತ, ಧನಂಜಯ, ಮಹಾಪದ್ಮ, ಕರ್ಕೋಟಕ, ಕಂಬಲ, ಅಶ್ವತರ, ಎಂಬ ಹೆಸರುಳ್ಳ ಹನ್ನೆರಡು ಸರ್ಪಗಳಿವೆ.

ಹಾಹಾ ಹೂಹೂ ರ್ಮುನಿಶ್ರೇಷ್ಠಾ ವಿಶ್ವಾವಸುರಸುತ್ತಮಃ ।
ಉಗ್ರಸೇನೋಽಥ ಸುರುಚಿರಸ್ಯಶ್ಚೈವ ಪರಾವಸುಃ ॥೩೦॥
ಚಿತ್ರಸೇನೋ ಮಹಾತೇಜಾ ಶ್ಚೋರ್ಣಾಯುಶ್ಚೈವ ಸುವ್ರತಾಃ ।
ಧೃತರಾಷ್ಟ್ರಃ ಸೂರ್ಯವರ್ಚಾ ದೇವೀಸಾಕ್ಷಾತ್ಕೃತಸ್ಥಲಾ ॥೩೧॥
ಶುಭಾನನಾ ಶುಭ ಶ್ರೋಣಿರ್ದಿವ್ಯಾ ವೈ ಪುಂಜಿಕಸ್ಥಲಾ ।
ಮೇನಕಾ ಸಹಜನ್ಯಾಚ ಪ್ರಮ್ಲೋಚಾ ಚ ಶುಚಿಸ್ಮಿತಾ ॥೩೨॥
ಅನುಮ್ಲೋಚಾ ಘೃತಾಚೀ ಚ ವಿಶ್ವಾಚೀ ಚೋರ್ವಶೀ ತಥಾ ।
ಪೂರ್ವಚಿತ್ತಿ ರಿತಿಖ್ಯಾತಾ ದೇವೀಸಾಕ್ಷಾ ತ್ತಿಲೋತ್ತಮಾ ॥೩೩॥
ರಂಭಾ ಚಾಂಭೋಜವದನಾ ರಥ ಕೃದ್ಗ್ರಾಮಣೀಃ ಶುಭಃ ।
ರಥೌಜಾರಥ ಚಿತ್ರಶ್ಚ ಸುಬಾಹು ರ್ವೈರಥಸ್ವನಃ ॥೩೪॥
ವರುಣಶ್ಚ ತಥೈವಾನ್ಯಃ ಸುಷೇಣಃ ಸೇನಜಿಚ್ಛುಭಃ ।
ತಾರ್ಕ್ಷ್ಯಶ್ಚಾರಿಷ್ಟ ನೇಮಿಶ್ಚ ಕ್ಷತಜಿತ್ಸತ್ಯಜಿತ್ತಥಾ ॥೩೫॥

---

೩೦–೩೧. ಎಲೈ ಮುನಿಶ್ರೇಷ್ಠರೇ, ತುಂಬುರು, ನಾರದ, ಹಾಹಾ, ಹೂಹೂ, ವಿಶ್ವಾವಸು, ಅನುತ್ತಮ, ಉಗ್ರಸೇನ, ಸುರುಚಿ, ಪರಾವಸು, ಚಿತ್ರಸೇನ, ಊರ್ಣಾಯು, ಧೃತರಾಷ್ಟ್ರ, ಎಂಬ ಮಹಾತೇಜಸ್ವಿಗಳಾದ ಹನ್ನೆರಡುಮಂದಿ ಗಂಧರ್ವರಿರುವರು.

೩೨–೩೩. ಸೂರ್ಯನಂತೆಯೇ ತೇಜಸ್ಸುಳ್ಳ, ಸೂರ್ಯವರ್ಚಾ, ದೇವೀ, ಕೃತಸ್ಥಲಾ, ಮನೋಹರವಾದ ಮುಖವುಳ್ಳ ಶುಭಾನನಾ, ಶುಭ ಶ್ರೋಣಿ, ಪುಂಜಿಕಸ್ಥಲಾ, ಘೃತಾಚೀ, ವಿಶ್ವಾಚೀ, ಊರ್ವಶೀ, ಪೂರ್ವಚಿತ್ತಿ ಮತ್ತು ಪ್ರಸಿದ್ಧಳಾದ ತಿಲೋತ್ತಮಾ, ಕಮಲದಂತೆ ಮುಖವುಳ್ಳ ರಂಭಾ ಎಂಬ ಹನ್ನೆರಡು ಜನ ಅಪ್ಸರೆಯರೂ, ಇರುವರು.

೩೪–೩೫. ಇವರಂತೆಯೇ ಗ್ರಾಮಣಿಗಳಲ್ಲಿ ಶುಭಪ್ರದನಾದ, ರಥ ಕೃತ್, ರಥೌಜಾ, ರಥಚಿತ್ರ, ಸುಬಾಹು, ರಥಸ್ವನ, ವರುಣ, ಸುಷೇಣ, ಮಂಗಳಕರನಾದ ಸೇನಜಿತ್, ತಾರ್ಕ್ಷ್ಯ, ಅರಿಷ್ಟನೇಮಿ, ಕ್ಷತಜಿತ್, ಸತ್ಯ ಜಿತ್, ಎಂಬ ಹೆಸರುಳ್ಳ ಹನ್ನೆರಡು ಜನಗಳಿರುವರು.

ರಕ್ಷೋ ಹೇತಿಃ ಪ್ರಹೇತಿಶ್ಚ ಪೌರುಷೇಯೋ ವಧಸ್ತಥಾ ।
ಸರ್ಪೋ ವ್ಯಾಘ್ರಃ ಪುನಶ್ಚಾಪೋ ವಾತೋ ವಿದ್ಯುದ್ದಿವಾಕರಃ॥ ೩೬॥

ಬ್ರಹ್ಮೋಪೇತಶ್ಚ ರಕ್ಷೇಂದ್ರೋ ಯಜ್ಞೋಪೇತ ಸ್ತಥೈವಚ ।
ಏತೇ ದೇವಾದಯಸ್ಸರ್ವೇ ವಸಂತ್ಯರ್ಕೇ ಕ್ರಮೇಣ ತು ॥ ೩೭॥

ಸ್ಥಾನಾಭಿಮಾನಿನೋ ಹ್ಯೇತೇ ಗಣಾ ದ್ವಾದಶ ಸಪ್ತಕಾಃ ।
ಧಾತ್ರಾದಿ ವಿಷ್ಣು ಪರ್ಯಂತಾ ದೇವಾ ದ್ವಾದಶ ಕೀರ್ತಿತಾಃ ॥ ೩೮॥

ಆದಿತ್ಯಂ ಪರಮಂ ಭಾಸಂ ಭಾಭಿರಾಪ್ಯಾಯಯಂತಿ ತೇ ।
ಪುಲಸ್ತ್ಯಾದ್ಯಾಃ ಕೌಶಿಕಾಂತಾಃ ಮುನಯೋ ಮುನಿಸತ್ತಮಾಃ॥ ೩೯॥

ದ್ವಾದಶೈವ ಸ್ತವೈ ರ್ಭಾಸಂ ಸ್ತುವಂತಿ ಚ ಯಥಾ ಕ್ರಮಂ ।
ನಾಗಾಶ್ಚಾಶ್ವತರಾಂತಾಸ್ತು ವಾಸುಕಿ ಪ್ರಮುಖಾಃ ಶುಭಾಃ ॥ ೪೦॥

---

೩೬. ರಾಕ್ಷಸರುಗಳಲ್ಲಿ, ಹೇತಿ, ಪ್ರಹೇತಿ, ಪೌರುಷೇಯ, ವಧ, ಸರ್ಪ, ವ್ಯಾಘ್ರ, ಆಪ, ವಾತ, ವಿದ್ಯುತ್, ದಿವಾಕರ, ಬ್ರಹ್ಮೋಪೇತ, ಯಜ್ಞೋಪೇತರೆಂಬ ಹೆಸರುಳ್ಳ ಹನ್ನೆರಡು ಮಂದಿ ಇರುವರು.

೩೭. ಈ ಮೇಲೆ ಹೇಳಿದ ದೇವತೆಗಳಾದಿಯಾಗಿ ಎಲ್ಲರೂ, ಕ್ರಮ ಕ್ರಮವಾಗಿ ಸೂರ್ಯನೊಡನೆ ವಾಸವಾಗಿರುವರು.

೩೮. ಈ ರೀತಿಯಾಗಿ ಪ್ರತ್ಯೇಕವಾಗಿರುವ ಹನ್ನೆರಡರಂತೆಯೇ ಇರುವ ಏಳು ಗುಂಪಿನ ದೇವತೆಗಳೂ ಸ್ಥಾನಾಭಿಮಾನ ದೇವತೆಗಳು. ಬ್ರಹ್ಮ ನಿಂದ ಮೊದಲುಗೊಂಡು ವಿಷ್ಣುವಿನವರೆಗೆ ಇರುವ ದೇವತೆಗಳು ಹನ್ನೆರಡು ಮಂದಿ ಇರುವರು.

೩೯. ಮೇಲೆ ಹೇಳಿದ ಧಾತ್ರಾದಿಯಾಗಿ ವಿಷ್ಣುಪರ್ಯಂತರಾದ ದ್ವಾದ ಶಾದಿತ್ಯರು ಪರಮ ತೇಜೋರಾಶಿಯಾದ ಸೂರ್ಯನನ್ನು ತಮ್ಮ ತಮ್ಮ ಕಾಂತಿ ಯಿಂದ ಇನ್ನೂ ಉಜ್ವಲವಾಗುವಂತೆ ಮಾಡುತ್ತಾರೆ. ಪುಲಸ್ತ್ಯನೇ ಮೊದಲಾದ ಕೌಶಿಕನವರೆಗೆ ಇರುವ ಹನ್ನೆರೆಡು ಜನ ಋಷಿಗಳು ಯಥಾ ಕ್ರಮವಾಗಿ ಹನ್ನೆರಡು ಸ್ತೋತ್ರಗಳಿಂದ ಸೂರ್ಯನನ್ನು ಸ್ತುತಿಮಾಡುತ್ತಾರೆ.

೪೦. ಸರ್ಪಗಳಲ್ಲಿ ವಾಸುಕಿಯೇ ಮೊದಲುಗೊಂಡು ಅಶ್ವತರನವರೆ

ದ್ವಾದಶೈವ ಮಹಾದೇವಂ ವಹಂತ್ಯೇವಂ ಯಥಾ ಕ್ರಮಂ ।
ಕ್ರಮೇಣ ಸೂರ್ಯವರ್ಚಾಂತಾ ತುಂಬುರು ಪ್ರಮುಖಾಂ ಬುಪಂ ॥
ಗೀತೈರೇನ ಮುಪಾಸಂತೇ ಗಂಧರ್ವಾ ದ್ವಾದಶೋತ್ತಮಾಃ ।
ಕೃತಸ್ಥಲಾದ್ಯಾ ರಂಭಾಂತಾ ದಿವ್ಯಾಶ್ಚಾಪ್ಸರಸೋ ರವಿಂ ॥೪೨॥
ತಾಂಡವೈಃ ಸರಸೈಃ ಸರ್ವಾ ಶ್ಚೋಪಾಸಂತೇ ಯಥಾ ಕ್ರಮಂ ।
ದಿವ್ಯಾಃ ಸತ್ಯಜಿದಂತಾಶ್ಚ ಗ್ರಾಮಣ್ಯೋ ರಥ ಕೃನ್ಮುಖಾಃ ॥೪೩॥
ದ್ವಾದಶಾಸ್ಯ ಕ್ರಮೇಣೈವ ಕುರ್ವತೇಽ ಭೀಷುಸಂಗ್ರಹಂ ।
ಪ್ರಯಾಂತಿ ಯಜ್ಞೋಪೇತಾಂತಾ ರಕ್ಷೋಹೇತಿ ಮುಖಾಃ ಸಹ॥
ಸಾಯುಧಾ ದ್ವಾದಶೈತೇ ರಾಕ್ಷಸಾಶ್ಚ ಯಥಾ ಕ್ರಮಂ ।
ಧಾತಾಽರ್ಯಮಾ ಪುಲಸ್ತ್ಯಶ್ಚ ಪುಲಹಶ್ಚ ಪ್ರಜಾಪತಿಃ ॥೪೫॥

---

ಗಿರುವ ಹನ್ನೆರಡು ಸರ್ಪಗಳೂ ದೇವದೇವನಾದ ಆದಿತ್ಯನನ್ನು ಯಥಾ ಕ್ರಮವಾಗಿ ಹೊರುತ್ತವೆ.

೪೧. ತುಂಬುರರೇ ಮೊದಲಾದ ಸೂರ್ಯವರ್ಚನವರೆಗಿರುವ ಹನ್ನೆರಡು ಜನ ಉತ್ತಮರಾದ ಗಂಧರ್ವರುಗಳು ಸೂರ್ಯನನ್ನು ಗಾನಗಳಿಂದ ಸೇವೆ ಮಾಡುತ್ತಾರೆ.

೪೨. ಕೃತಸ್ಥಲಾ ಮೊದಲಾದ ರಂಭಾವರೆವಿಗೂ ಇರುವ ಹನ್ನೆರಡು ಜನ ಮಹಾಸುಂದರಿಯರಾದ ಅಪ್ಸರೆಯರು ಯಥಾಕ್ರಮವಾಗಿ ಮೃದಂಗ ವಾದನ ನರ್ತನದಿಂದ ಸೂರ್ಯನ ಸೇವೆಯನ್ನು ಮಾಡುತ್ತಾರೆ.

೪೩. ರಥಕೃತ್ ಎಂಬುವನಿಂದ ಮೊದಲುಗೊಂಡು ಸತ್ಯಜಿತ್, ಎಂಬುವವನವರೆಗಿರುವ ಗ್ರಾಮಣಿಗಳು ಯಥಾಕ್ರಮವಾಗಿ ಸೂರ್ಯನ ರಶ್ಮಿಯನ್ನು ಹಿಡಿದುಕೊಳ್ಳುತ್ತಾರೆ.

೪೪. ಹೇತಿ ಎಂಬವನಿಂದ ಮೊದಲುಗೊಂಡು ಯಜ್ಞೋಪೇತನ ವರೆಗಿರುವ ಹನ್ನೆರಡು ಜನ ರಾಕ್ಷಸರು ಯಥಾಕ್ರಮವಾಗಿ ಆಯುಧಗಳನ್ನು ಹಿಡಿದುಕೊಂಡು ಸೂರ್ಯನ ಜೊತೆಯಲ್ಲಿ ಹೊಗುತ್ತಾರೆ.

೪೫—೪೮. ಮಧು ಮತ್ತು ಮಾಧವ, ಈ ಎರಡು ಮಾಸಗಳಲ್ಲಿ ಸೂರ್ಯನ ಸಂಗಡ ದ್ವಾದಶಾದಿತ್ಯರಲ್ಲಿ ಧಾತಾ, ಅರ್ಯಮಾ, ಎಂಬಿಬ್ಬರೂ; ಮುನಿ

ಉರಗೋ ವಾಸುಕಿ ಶ್ಚೈವ ಕಂಕಣೀ ಕಶ್ಚತಾ ವುಭೌ ।
ತುಂಬುರುರ್ನಾರ ದಶ್ಚೈವ ಗಂಧರ್ವೌ ಗಾಯತಾಂ ವತಾ ॥೪೬॥

ಕೃತಸ್ಥಲಾಪ್ಸರಾಶ್ಚೈವ ತಥಾ ವೈ ಪುಂಜಿಕ ಸ್ಥಲಾ ।
ಗ್ರಾಮಣೀ ರಥ ಕೃಚ್ಚೈವ ರಥೌ ಜಾಶ್ಚೈವ ತಾ ವುಭೌ ॥೪೭॥

ರಕ್ಷೋ ಹೇತಿಃ ಪ್ರಹೇತಿಶ್ಚ ಯಾತು ಧಾನಾ ವುದಾಹೃತೌ ।
ಮಧು ಮಾಧವಯೋ ರೇಷ ಗಣೋ ಭವತಿ ಭಾಸ್ಕರೇ ॥೪೮॥

ವಸಂತಿ ಗ್ರೀಷ್ಮಕೌ ಮಾಸೌ ಮಿತ್ರಶ್ಚ ವರುಣಶ್ಚಹ ।
ಋಷಿ ರತ್ರಿರ್ವಸಿಷ್ಠಶ್ಚ ತಕ್ಷಕೋ ನಾಗ ಏವ ಚ ॥೪೯॥

ಮೇನಕಾ ಸಹಜನ್ಯಾ ಚ ಗಂಧರ್ವೌ ಚ ಹಹಾ ಹುಹೂ ।
ಸುಬಾಹುನಾಮಾ ಗ್ರಾಮಣ್ಯೌ ರಥ ಚಿತ್ರಶ್ಚ ತಾವುಭೌ ॥೫೦॥

ಪೌರುಷೇ ಯೋ ವಧಶ್ಚೈವ ಯಾತು ಧಾನಾವುದಾ ಹೃತೌ ।
ಏತೇ ವಸಂತಿ ವೈ ಸೂರ್ಯೇ ಮಾಸಯೋಃ ಶುಚಿ ಶುಕ್ರ ಯೋಃ॥೫೧॥

---

ಗಳಲ್ಲಿ ಪುಲಸ್ತ್ಯ ಪುಲಹ ಎಂಬಿಬ್ಬರೂ; ಸರ್ಪಗಳಲ್ಲಿ ವಾಸುಕಿ, ಕಂಕಣೀ ಕರರೆಂಬ ಇಬ್ಬರೂ; ಗಾನಮಾಡುವುದರಲ್ಲಿ ಸಮರ್ಥರಾದ ತುಂಬುರು, ನಾರದ ಎಂಬಿಬ್ಬರು ಗಂಧರ್ವರ ಪಕ್ಷವಾಗಿಯೂ, ಅಪ್ಸರೆಯರಲ್ಲಿ ಕೃತಸ್ಥಲಾ, ಪುಂಜಿಕಸ್ಥಲಾ, ಎಂಬಿಬ್ಬರೂ; ಗ್ರಾಮಣಿಗಳಲ್ಲಿ ರಥಕೃತ್, ರಥೋಜಾ, ಎಂಬಿಬ್ಬರೂ; ರಾಕ್ಷಸರಲ್ಲಿ ಹೇತಿ, ಪ್ರಹೇತಿ ಎಂಬಿಬ್ಬರೂ, ವಾಸ ಮಾಡುವರು.

೪೯–೫೧. ಗ್ರೀಷ್ಮಋತುವಿನ ಮಾಸಗಳಾದ ಶುಚಿ ಮತ್ತು ಶುಕ್ರ ಇವುಗಳಲ್ಲಿ ಆದಿತ್ಯರಲ್ಲಿ ಮಿತ್ರ, ವರುಣ ಎಂಬಿಬ್ಬರೂ; ಋಷಿಗಳಲ್ಲಿ ಅತ್ರಿ, ವಸಿಷ್ಠ, ಎಂಬಿಬ್ಬರೂ ; ಸರ್ಪಗಳಲ್ಲಿ ತಕ್ಷ, ನಾಗ, ಎಂಬಿಬ್ಬರೂ; ಅಪ್ಸರೆಯರಲ್ಲಿ ಮೇನಕಾ,ಸಹಜನ್ಯಾ, ಎಂಬಿಬ್ಬರೂ ; ಗಂಧರ್ವರಲ್ಲಿ ಹಾಹಾ ಹೂಹೂ, ಎಂಬಿಬ್ಬರೂ; ಗ್ರಾಮಣಿಗಳಲ್ಲಿ ಸುಬಾಹು, ರಥಚಿತ್ರ, ಎಂಬಿಬ್ಬರೂ; ರಾಕ್ಷಸರಲ್ಲಿ ಪೌರುಷೇಯ, ವಧ, ಎಂಬಿಬ್ಬರೂ; ಸೂರ್ಯನ ಸಂಗಡ ವಾಸಮಾಡುವರು.

ತತಸ್ಸೂರ್ಯೇ ಪುನಶ್ಚಾನ್ಯಾ ನಿವಸಂತೀಹ ದೇವತಾಃ ।
ಇಂದ್ರಶ್ಚೈವ ವಿವಸ್ವಾಂಶ್ಚ ಅಂಗಿರಾ ಭೃಗುರೇವಚ ॥೫೨॥
ಏಲಾಪತ್ರ ಸ್ತಥಾ ಸರ್ಪಃ ಶಂಖಪಾಲಶ್ಚ ತಾವುಭೌ ।
ವಿಶ್ವಾ ವಸೂಗ್ರಸೇನೌ ಚ ವರುಣಶ್ಚ ರಥಸ್ವನಃ ॥೫೩॥
ಪ್ರವ್ಲೋಚಾ ಚೈವ ವಿಖ್ಯಾತಾ ಅನುವ್ಲೋಚಾ ಚ ತೇ ಉಭೇ ।
ಯಾತು ಧಾನಾ ಸ್ತಥಾ ಸರ್ಪೋ ವ್ಯಾಘ್ರಶ್ಚೆ ವಚ ತಾವುಭೌ ॥೫೪॥
ನಭೋ ನಭಸ್ಯಯೋರೇಷ ಗಣೋ ವಸತಿ ಭಾಸ್ಕರೇ ।
ಪರ್ಜನ್ಯಶ್ಚೈವ ಪೂಷಾ ಚ ಭಾರದ್ವಾಜೋಽಥ ಗೌತಮಃ ॥೫೫॥
ಧನಂಜಯ ಇರಾವಾಂಶ್ಚ ಸುರುಚಿಃ ಸಪರಾವಸುಃ ।
ಘೃತಾಚೀ ಚಾಪ್ಸರಃ ಶ್ರೇಷ್ಠಾ ವಿಶ್ವಾಚೀ ಚಾತಿಶೋಭನಾ ॥೫೬॥
ಸೇನಜಿಚ್ಚ ಸುಷೇಣಶ್ಚ ಸೇನಾನೀಗ್ರಾಮಣೀಶ್ಚ ತೌ ।
ಆಪೋ ವಾತಶ್ಚ ತಾವೇ ತೌ ಯಾತು ಧಾನಾ ವುಭೌ ಸ್ಮೃತೌ ॥೫೭॥

---

೫೨–೫೪. ನಭ, ನಭಸ್ಯ, ಈ ಎರಡು ಮಾಸಗಳಲ್ಲಿ ಆದಿತ್ಯರಲ್ಲಿ ಇಂದ್ರ, ವಿವಸ್ವಾನ್, ಎಂಬಿಬ್ಬರೂ; ಋಷಿಗಳಲ್ಲಿ ಅಂಗಿರಸ, ಭೃಗು, ಎಂಬಿಬ್ಬರೂ, ಸರ್ಪಗಳಲ್ಲಿ ಏಲಾಪತ್ರ, ಶಂಖಪಾಲ, ಎಂಬಿಬ್ಬರೂ, ಗಂಧರ್ವರಲ್ಲಿ ವಿಶ್ವಾವಸು, ಉಗ್ರಸೇನ, ಎಂಬಿಬ್ಬರೂ, ಗ್ರಾಮಣಿಗಳಲ್ಲಿ ವರುಣ, ರಥಸ್ವನ, ಎಂಬಿಬ್ಬರೂ; ಅಪ್ಸರೆಯರಲ್ಲಿ ಪ್ರಖ್ಯಾತೆಯರಾದ ಪ್ರವ್ಲೋಚಾ, ಅನುವ್ಲೋಚಾ, ಎಂಬಿಬ್ಬರೂ; ರಾಕ್ಷಸರಲ್ಲಿ ಸರ್ಪ, ವ್ಯಾಘ್ರ, ಎಂಬಿಬ್ಬರೂ ಸೂರ್ಯನ ಸಂಗಡ ವಾಸಮಾಡುವರು.

೫೫–೫೭. ಊರ್ಜ (ಕಾರ್ತಿಕ) ಇಷ (ಆಶ್ವಯುಜ) ಈ ಎರಡು ಮಾಸಗಳಲ್ಲಿ ಆದಿತ್ಯರಲ್ಲಿ ಪರ್ಜನ್ಯ, ಪೂಷಾ, ಎಂಬಬ್ಬಿರೂ, ಋಷಿಗಳಲ್ಲಿ ಭಾರದ್ವಾಜ, ಗೌತಮ, ಎಂಬಿಬ್ಬರೂ, ಸರ್ಪಗಳಲ್ಲಿ ಐರಾವತ, ಧನಂಜಯ ಎಂಬಿಬ್ಬರೂ ಗಂಧರ್ವರುಗಳಲ್ಲಿ ಸುರುಚಿ, ಪರಾವಸು, ಎಂಬಿಬ್ಬರೂ ಅಪ್ಸರೆಯರಲ್ಲಿ ಶ್ರೇಷ್ಠರಾದ ಘೃತಾಚೀ, ಸರ್ವಾಂಗ ಸುಂದರಿಯಾದ ವಿಶ್ವಾಚೀ, ಎಂಬಿಬ್ಬರೂ, ಗ್ರಾಮಣಿಗಳಲ್ಲಿ ಸುಷೇಣ, ಸೇನಜಿತ್ ಎಂಬಿಬ್ಬರೂ, ರಾಕ್ಷಸರಲ್ಲಿ ಅಪ, ವಾತ ಎಂಬಿಬ್ಬರೂ, ಸೂರ್ಯನ ಸಂಗಡ ವಾಸ ಮಾಡುವರು.

ವಸಂತ್ಯೇತೇ ತು ವೈ ಸೂರ್ಯೇ ಮಾಸ ಊರ್ಜ ಇಷೇ ಚ ಹ ।
ಹೈಮಂತಿ ಕೌ ತು ದ್ವೌ ಮಾಸೌ ವಸಂತಿ ಚ ದಿವಾಕರೇ ॥೫೮॥

ಅಂಶು ರ್ಭಗಶ್ಚ ದ್ವಾವೇತೌ ಕಶ್ಯಪಶ್ಚ ಕ್ರತುಃ ಸಹ ।
ಭುಜಂಗಶ್ಚ ಮಹಾಪದ್ಮಃ ಸರ್ಪಃ ಕರ್ಕೋಟಕ ಸ್ತಥಾ ॥೫೯॥

ಚಿತ್ರಸೇನಶ್ಚ ಗಂಧರ್ವ ಊರ್ಣಾಯುಶ್ಚೈವ ತಾವುಭೌ ।
ಊರ್ವಶೀ ಪೂರ್ವಚಿತ್ತಿಶ್ಚ ತಥೈ ವಾಪ್ಸರ ಸಾ ವುಭೇ ॥೬೦॥

ತಾರ್ಕ್ಷ್ಯಶ್ಚಾ ರಿಷ್ಟನೇಮಿಶ್ಚ ಸೇನಾನೀಗ್ರಾಮಣೀಶ್ಚ ತೌ ।
ವಿದ್ಯುದ್ದಿವಾಕರಶ್ಚೋಭೌ ಯಾತುಧಾನಾ ವುದಾಹೃತೌ ॥೬೧॥

ಸಹೇ ಚೈವ ಸಹಸ್ಯೇ ಚ ವಸಂತ್ಯೇತೇ ದಿವಾಕರೇ ।
ತತಃ ಶೈಶಿರಯೋಶ್ಚಾಪಿ ಮಾಸಯೋ ರ್ನಿವಸಂತಿ ವೈ ॥೬೨॥

ತ್ವಷ್ಟಾ ವಿಷ್ಣುರ್ಜಮದಗ್ನಿ ರ್ವಿಶ್ವಾಮಿತ್ರಸ್ತಥೈವ ಚ ।
ಕಾದ್ರವೇಯೌ ತಥಾ ನಾಗೌ ಕಂಬಲಾಶ್ವ ತರಾವುಭೌ ॥೬೩॥

---

೫೮–೬೧. ಹೇಮಂತ ಋತುವಿನ ಮಾಸಗಳಾದ ಸಹ (ಮಾರ್ಗಶಿರ), ಸಹಸ್ಯ (ಪುಷ್ಯ), ಈ ಎರಡು ಮಾಸಗಳಲ್ಲಿ ಆದಿತ್ಯರಲ್ಲಿ ಅಂಶು, ಭಗ, ಎಂಬಿಬ್ಬರೂ ಋಷಿಗಳಲ್ಲಿ ಕಶ್ಯಪ, ಕ್ರತು, ಎಂಬಿಬ್ಬರೂ, ಸರ್ಪಗಳಲ್ಲಿ ಮಹಾಪದ್ಮ, ಕಾರ್ಕೋಟಕ, ಎಂಬಿಬ್ಬರೂ, ಗಂಧರ್ವರಲ್ಲಿ ಚಿತ್ರಸೇನ, ಊರ್ಣಾಯು, ಎಂಬಿಬ್ಬರೂ, ಅಪ್ಸರೆಯರಲ್ಲಿ ಊರ್ವಶೀ, ಪೂರ್ವಚಿತ್ತಿ, ಎಂಬಿಬ್ಬರೂ, ಗ್ರಾಮಣಿಗಳಲ್ಲಿ ತಾರ್ಕ್ಷ್ಯ, ಅರಿಷ್ಟನೇಮಿ, ಎಂಬಿಬ್ಬರೂ, ರಾಕ್ಷಸರಲ್ಲಿ ವಿದ್ಯುತ್, ದಿವಾಕರ, ಎಂಬಿಬ್ಬರೂ, ಸೂರ್ಯನ ಸಂಗಡ ವಾಸ ಮಾಡುವರು.

೬೨–೬೫. ಶಿಶಿರಋತುವಿನ ಮಾಸಗಳಾದ ತಪಸ್ಸು (ಮಾಘ), ತಪ (ಫಾಲ್ಗುನ) ಈ ಎರಡು ಮಾಸಗಳಲ್ಲಿ ಆದಿತ್ಯರಲ್ಲಿ ತ್ವಷ್ಟಾ, ವಿಷ್ಣು, ಎಂಬಿಬ್ಬರೂ, ಋಷಿಗಳಲ್ಲಿ ಜಮದಗ್ನಿ, ವಿಶ್ವಾಮಿತ್ರ, ಎಂಬಿಬ್ಬರೂ, ಸರ್ಪಗಳಲ್ಲಿ ಕಂಬಲ, ಅಶ್ವತರ, ಎಂಬಿಬ್ಬರೂ, ಗಂಧರ್ವರುಗಳಲ್ಲಿ ಧೃತರಾಷ್ಟ್ರ, ಸೂರ್ಯ ವರ್ಚ, ಎಂಬಿಬ್ಬರೂ, ಅಪ್ಸರೆಯರಲ್ಲಿ ತ್ರಿಲೋತ್ತಮೆ ಸುಂದರಿಯಾದ ರಂಭಾ, ಎಂಬಿಬ್ಬರೂ, ಗ್ರಾಮಣಿಗಳಲ್ಲಿ ಲೋಕಪ್ರಖ್ಯಾತರಾದ ರಥಜಿತ್,

ಧೃತರಾಷ್ಟ್ರಸ್ಸ ಗಂಧರ್ವಃ ಸೂರ್ಯವರ್ಚಾ ಸ್ತಥೈವ ಚ ।
ತಿಲೋತ್ತಮಾಪ್ಸರಾಶ್ಚೈವ ದೇವೀ ರಂಭಾ ಮನೋಹರಾ ॥೬೪॥
ರಥಜಿತ್ಸತ್ಯಜಿಚ್ಚೈವ ಗ್ರಾಮಣ್ಯೌ ಲೋಕ ವಿಶ್ರುತೌ ।
ಬ್ರಹ್ಮೋಪೇತಸ್ತಥಾ ರಕ್ಷೋ ಯಜ್ಞೋಪೇತಶ್ಚ ಯಃ ಸ್ಮೃತಃ ॥
ಏತೇ ದೇವಾ ವಸಂತ್ಯರ್ಕೇ ದ್ವೌದ್ವೌ ಮಾಸೌ ಕ್ರಮೇಣ ತು ।
ಸ್ಥಾನಾಭಿ ಮಾನಿನೋ ಹ್ಯೇತೇ ಗಣಾ ದ್ವಾದಶ ಸಪ್ತಕಾಃ ॥೬೬॥
ಸೂರ್ಯ ಮಾಪ್ಯಾಯ ಯಂತ್ಯೇತೇ ತೇಜಸಾ ತೇಜ ಉತ್ತಮಂ ।
ಗ್ರಥಿತೈಃ ಸ್ವೈರ್ವಚೋಭಿಸ್ತು ಸ್ತುವಂತಿ ಮುನಯೋ ರವಿಂ ॥೬೭॥
ಗಂಧರ್ವಾಪ್ಸರಸಶ್ಚೈವ ನೃತ್ಯಗೇಯೈ ರುಪಾಸತೇ ।
ಗ್ರಾಮಣೀ ಯಕ್ಷಭೂತಾನಿ ಕುರ್ವತೇ ಭೀಷು ಸಂಗ್ರಹಂ ॥೬೮॥
ಸರ್ಪಾ ವಹಂತಿ ವೈ ಸೂರ್ಯಂ ಯಾತು ಧಾನಾನು ಯಾಂತಿ ವೈ ।
ವಾಲಖಿಲ್ಯಾ ನಯಂತ್ಯಸ್ತಂ ಪರಿವಾರ್ಯೋ ದಯಾದ್ರವಿಂ ॥೬೯॥

---

ಸತ್ಯಜಿತ್ ಎಂಬಿಬ್ಬರೂ, ರಾಕ್ಷಸರಲ್ಲಿ ಬ್ರಹ್ಮೋಪೇತ, ಯಜ್ಞೋಪೇತ ಎಂಬಿಬ್ಬರೂ, ಸೂರ್ಯನ ಸಂಗಡ ವಾಸಮಾಡುವರು.

೬೬. ಈ ಮೇಲೆ ಹೇಳಿದ ದೇವತೆಗಳೆಲ್ಲರೂ ಯಥಾಕ್ರಮವಾಗಿ ಸೂರ್ಯನ ಸಂಗಡ ಎರಡೆರಡು ತಿಂಗಳು ವಾಸಮಾಡುವರು. ಪ್ರತಿಯೊಂದು ಗುಂಪಿನಲ್ಲೂ ಹನ್ನೆರಡರಂತಿರುವ ಏಳು ಗುಂಪಿನವರು ಸ್ಥಾನಾಭಿ ಮಾನಿ ದೇವತೆಗಳು.

೬೭. ಮೇಲೆ ಹೇಳಿದ ಹನ್ನೆರಡು ಜನ ಆದಿತ್ಯರೂ ತಮ್ಮ ತಮ್ಮ ತೇಜಸ್ಸಿನಿಂದ ಸೂರ್ಯನ ತೇಜಸ್ಸನ್ನು ಅಭಿವೃದ್ಧಿ ಪಡಿಸುತ್ತಾರೆ. ಋಷಿಗಳು ತಮ್ಮ ತಮ್ಮ ಪ್ರತಿಭೆಯಿಂದ ನಿರ್ಮಿಸಿದ ಸ್ತೋತ್ರಗಳಿಂದ ಸೂರ್ಯನನ್ನು ಸ್ತುತಿಸುತ್ತಾರೆ.

೬೮. ಗಂಧರ್ವರು ತಮ್ಮ ನರ್ತನಗಳಿಂದಲೂ, ಅಪ್ಸರೆಯರು ನರ್ತನ ಮತ್ತು ಗಾನಗಳಿಂದಲೂ ಸೂರ್ಯನನ್ನು ಸೇವಿಸುತ್ತಾರೆ. ಗ್ರಾಮಣಿ, ಯಕ್ಷ, ಭೂತಗಳು ಸೂರ್ಯನ ರಥದ ಹಗ್ಗಗಳನ್ನು ಹಿಡಿದುಕೊಳ್ಳುತ್ತಾರೆ.

೬೯. ಸರ್ಪಗಳು ಸೂರ್ಯನನ್ನು ವಹಿಸುತ್ತವೆ. ರಾಕ್ಷಸರು ಸೂರ್ಯ

ಏತೇಷಾಮೇವ ದೇವಾನಾಂ ಯಥಾ ತೇಜೋ ಯಥಾ ತಪಃ ।
ಯಥಾಯೋಗಂ ಯಥಾಮಂತ್ರಂ ಯಥಾಧರ್ಮಂ ಯಥಾಬಲಂ ॥
ತಥಾ ತಪತ್ಯಸೌ ಸೂರ್ಯಃ ತೇಷಾಮಿದ್ಧಸ್ತು ತೇಜಸಾ ।
ಇತ್ಯೇತೇ ವೈ ವಸಂತೀಹ ದ್ವೌದ್ವೌಮಾಸೌ ದಿವಾಕರೇ ॥೭೦॥
ಋಷಯೋ ದೇವ ಗಂಧರ್ವ ಪನ್ನಗಾಽಪ್ಸರಸಾಂ ಗಣಾಃ ।
ಗ್ರಾಮಣ್ಯಶ್ಚ ತಥಾ ಯಕ್ಷಾ ಯಾತುಧಾನಾಶ್ಚ ಮುಖ್ಯತಃ ॥೭೧॥
ಏತೇ ತಪಂತಿ ವರ್ಷಂತಿ ಭಾಂತಿ ವಾಂತಿ ಸೃಜಂತಿ ಚ ।
ಭೂತಾನಾಮಶುಭಂ ಕರ್ಮ ವ್ಯಪೋಹಂತೀಹ ಕೀರ್ತಿತಾಃ ॥೭೩॥
ಮಾನವಾನಾಂ ಶುಭಂಹ್ಯೇತೇ ಹರಂತಿ ಚ ದುರಾತ್ಮನಾಮ್ ।
ದುರಿತಂ ಸು ಪ್ರಚಾರಾಣಾಂ ವ್ಯಪೋಹಂತಿ ಕ್ವಚಿತ್ಕ್ವಚಿತ್ ॥೭೪॥

---

ನನ್ನು ಅನುಸರಿಸುತ್ತಾರೆ. ವಾಲಖಿಲ್ಯರೆಂಬ ಋಷಿಗಳು ಉದಯಕಾಲ ದಿಂದ ಸೂರ್ಯನನ್ನು ಅಸ್ತಾಚಲ ಪರ್ವತಕ್ಕೆ ಕರೆದೊಯ್ಯುವರು.

೭೦. ಈ ದೇವತೆಗಳ ತೇಜಸ್ಸಿಗೂ, ತಪಸ್ಸಿಗೂ, ಯೋಗಕ್ಕೂ, ಮಂತ್ರಕ್ಕೂ, ಧರ್ಮಕ್ಕೂ, ಬಲಕ್ಕೂ, ಅನುಗುಣವಾಗಿ ಸೂರ್ಯನು ಪ್ರಕಾಶಿಸುತ್ತಾನೆ.

೭೧. ಈ ದೇವತೆಗಳ ವೃದ್ಧಿಯು ಸೂರ್ಯನ ತೇಜಸ್ಸಿನಿಂದಾಗುವುದಾದಕಾರಣ ಇವರು ಎರಡೆರಡು ತಿಂಗಳು ಸೂರ್ಯನ ಸಂಗಡ ವಾಸಮಾಡುವರು.

೭೨-೭೪. ಋಷಿಗಳು, ದೇವತೆಗಳು, ಗಂಧರ್ವರು, ಸರ್ಪಗಳು, ಅಪ್ಸರಸ್ಸುಗಳು, ಗ್ರಾಮಾಧಿದೇವತೆಗಳು, ಯಕ್ಷರು, ರಾಕ್ಷಸರು ಇವರೇ ಮುಖ್ಯವಾಗಿ ಜಗತ್ತನ್ನು ಸುಡುವರು ಮತ್ತು ಮಳೆಯಿಂದ ತೋಯಿಸುವರು ಮತ್ತು ಇವರು ಪ್ರಪಂಚಕ್ಕೆ ಪ್ರಕಾಶವನ್ನೀಯುವರು. ಗಾಳಿಯು ಯಥೇಚ್ಛವಾಗಿ ಬೀಸುವಹಾಗೆ ಮಾಡುವರು ಮತ್ತು ಸೃಷ್ಟಿ ಯನ್ನೂ ಮಾಡುವರು. ಅಲ್ಲದೆ ಇವರು ಪ್ರಾಣಿಗಳಿಗೆ ಕೆಟ್ಟ ಫಲಗಳನ್ನು ನಿವಾರಣೆ ಮಾಡುವರೆಂದೂ ತಿಳಿಯಬೇಕು. ಇವರು ಮಾನವರಿಗೆ ಶುಭ ಫಲವನ್ನು ಕೊಡುವವರೂ ಮತ್ತು ದುಷ್ಟರಿಗೆ ಅಮಂಗಳವನ್ನು ಉಂಟು

ವಿಮಾನೇ ಚ ಸ್ಥಿತಾ ದಿವ್ಯೇ ಕಾಮಗೇ ವಾತರಂಹಸಿ ।
ಏತೇ ಸಹೈವ ಸೂರ್ಯೇಣ ಭ್ರಮಂತಿ ದಿವಸಾನುಗಾಃ ॥೭೫॥

ವರ್ಷಂತಶ್ಚ ತಪಂತಶ್ಚ ಹ್ಲಾದಯಂತಶ್ಚ ವೈ ದ್ವಿಜಾಃ ।
ಗೋಪಾಯಂತೀಹ ಭೂತಾನಿ ಸರ್ವಾಣಿ ಹ್ಯಾಮನುಕ್ಷಯಾತ್ ॥

ಸ್ಥಾನಾಭಿಮಾನಿನಾಮೇತ ತ್ ಸ್ಥಾನಂ ಮನ್ವಂತರೇಷು ವೈ ।
ಅತೀತಾನಾ ಗತಾನಾಂ ವೈ ವರ್ತಂತೇ ಸಾಂಪ್ರತಂ ಚ ಯೇ ॥೭೭॥

ಏತೇ ವಸಂತಿ ವೈ ಸೂರ್ಯೇ ಸಪ್ತಕಾಸ್ತೇ ಚತುರ್ದಶ ।
ಚತುರ್ದಶಸು ಸರ್ವೇಷು ಗಣಾ ಮನ್ವಂತರೇಷ್ವಿಹ ॥೭೮॥

ಸಂಕ್ಷೇಪಾದ್ವಿಸ್ತ ರಾಚ್ಚೈವ ಯಥಾ ವೃತ್ತಂ ಯಥಾ ಶ್ರುತಮ್ ।
ಕಥಿತಂ ಮುನಿ ಶಾರ್ದೂಲಾ ದೇವದೇವಸ್ಯ ಧೀಮತಃ ॥೭೯॥

---

ಮಾಡುವವರೂ ಆಗಿದ್ದಾರೆಂದು ತಿಳಿಯಬೇಕು. ಇವರು ಸತ್ಪುರುಷರಿಗೂ ಕೆಟ್ಟದ್ದು ಸಂಭವಿಸುವುದಾದರೆ, ಅದನ್ನೂ ನಿವಾರಣೆ ಮಾಡುವರು.

೭೫–೭೭. ಇವರೆಲ್ಲರೂ ದಿವ್ಯವಾದ ಸ್ವೇಚ್ಛೆಯಾಗಿ ಹಾರುವ, ವಾಯು ವೇಗವುಳ್ಳ ವಿಮಾನಗಳಲ್ಲಿ ಕೂತು ಹಗಲನ್ನೂ ಹಿಂಬಾಲಿಸುವವರಾಗಿ ಸೂರ್ಯನ ಜೊತೆಯಲ್ಲಿಯೇ ಸುತ್ತುತ್ತಾರೆ. ಎಲೈ ಬ್ರಾಹ್ಮಣರೇ, ಇವರು ಮನ್ವಂತರ ಕಳೆಯುವವರೆಗೂ, ಮಳೆಗರೆಯುತ್ತಲೂ, ಸುಡುತ್ತಲೂ, ಸಂತೋಷ ಪಡಿಸುತ್ತಲೂ ಎಲ್ಲಾ ಪ್ರಾಣಿಗಳನ್ನೂ ಕಾಪಾಡುತ್ತಾರೆ. ಮನ್ವಂತರಗಳಲ್ಲಿ ಕಳೆದುಹೋದ, ಈಗಿರುವ, ಮುಂದೆಬರುವ, ಇವರು ಅನೇಕ ಸ್ಥಾನಗಳಿಗೆ ಅಭಿಮಾನ ದೇವತೆಗಳಾಗಿದ್ದು ಪ್ರತ್ಯೇಕವಾದ ಸ್ಥಾನಗಳನ್ನೂ ಹೊಂದಿರುತ್ತಾರೆ.

೭೮–೮೦. ಇವರು ಏಳುಮಂದಿ ಒಟ್ಟಾಗಿ ಹದಿನಾಲ್ಕು ಗುಂಪುಗಳು ಸೂರ್ಯನಲ್ಲಿ ವಾಸಮಾಡುತ್ತಾರೆಂದು ತಿಳಿಯಬೇಕು. ಬೇರೆ ಬೇರೆ ಮನ್ವಂತರಗಳಲ್ಲಿ ಹದಿನಾಲ್ಕು ಗುಂಪುಗಳೆಲ್ಲವೂ ಇರುತ್ತವೆ. ಎಲೈ ಋಷಿಶ್ರೇಷ್ಠರೇ, ಪ್ರಜ್ಞಾವಂತನಾದ ದೇವದೇವನ ವಿಚಾರವನ್ನು ಈ ರೀತಿಯಲ್ಲಿ ಹಿಂದೆ ನಡೆದುದನ್ನು ಹೇಗೆ ಕೇಳಿದ್ದೆನೋ, ಅದಕ್ಕೆ ಸ್ವಲ್ಪವೂ ವ್ಯತ್ಯಾಸವಾಗದಂತೆ ಸಂಕ್ಷೇಪವಾಗಿಯೂ ವಿಸ್ತಾರವಾಗಿಯೂ ವಿವರಿಸಿ

ಏತೇ ದೇವಾ ವಸಂತ್ಯರ್ಕೇ ದ್ವೌದ್ವೌ ಮಾಸೌ ಕ್ರಮೇಣ ತು ।
ಸ್ಥಾನಾಭಿಮಾನಿನೋ ಹ್ಯೇತೇ ಗಣಾ ದ್ವಾದಶ ಸಪ್ತಕಾಃ ॥೮೦॥

ಇತ್ಯೇಷ ಏಕ ಚಕ್ರೇಣ ಸೂರ್ಯಸ್ತೂರ್ಣಂ ರಥೇನ ತು ।
ಹರಿತೈ ರಕ್ಷರೈ ರಶ್ವೈಃ ಸರ್ಪತೇಽಸೌ ದಿವಾಕರಃ ॥೮೧॥

ಅಹೋರಾತ್ರಂ ರಥೇನಾಸಾ ವೇಕ ಚಕ್ರೇಣ ತು ಭ್ರಮನ್ ।
ಸಪ್ತದ್ವೀಪ ಸಮುದ್ರಾಂ ಗಾಂ ಸಪ್ತಭಿಃ ಸರ್ಪತೇ ದಿವಿ ॥೮೨॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಜ್ಯೋತಿಶ್ಚಕ್ರೇ ಸೂರ್ಯ
ರಥ ನಿರ್ಣಯಂ ನಾಮ ಪಂಚ ಪಂಚಾಶತ್ತಮೋಽಧ್ಯಾಯಃ

---

ದ್ದೇನೆ. ಈ ದೇವತೆಗಳು ಕ್ರಮವಾಗಿ ಎರಡೆರಡು ತಿಂಗಳು ಸೂರ್ಯ ನಲ್ಲಿ ವಾಸಮಾಡುತ್ತಾರೆ. ಈ ಸ್ಥಾನಗಳಿಗೆ ಅಭಿಮಾನಿಗಳಾದ ದೇವತೆಗಳ ಎಂಬತ್ತುನಾಲ್ಕು ಗುಂಪುಗಳಿವೆ.

೮೧–೮೨. ಹೀಗೆ ಸೂರ್ಯನು ಹಸರು ಬಣ್ಣದ, ನಾಶವಿಲ್ಲದ ಕುದುರೆಗಳಿಂದ ಕೂಡಿದ, ಒಂದೇ ಚಕ್ರವುಳ್ಳ ರಥದಲ್ಲಿ ಸಂಚರಿಸುತ್ತಾನೆ. ಇವನು ಹಗಲು ರಾತ್ರಿ ಈ ರಥದಲ್ಲಿ ಸಂಚರಿಸುವವನಾಗಿ, ಏಳು ದ್ವೀಪಗಳು ಮತ್ತು ಸಮುದ್ರಗಳುಳ್ಳ ಭೂಮಿಯನ್ನು ಅಂತರಿಕ್ಷದಲ್ಲಿ ಸುತ್ತುತ್ತಾನೆ.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಜ್ಯೋತಿಚಕ್ರದಲ್ಲಿ ಸೂರ್ಯ ರಥದ ಗಮನಪ್ರಕಾರದ ನಿರ್ಣಯ ಎಂಬ ಐವತ್ತೈದನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಷಟ್ಪಂಚಾಶತ್ತಮೋಽಧ್ಯಾಯಃ

॥ ಸೂತ ಉವಾಚ ॥

ವೀಥ್ಯಾಶ್ರಯಾಣಿ ಚರತಿ ನಕ್ಷತ್ರಾಣಿ ನಿಶಾಕರಃ ।
ತ್ರಿಚಕ್ರೋಭಯತೋಽಶ್ವಶ್ಚ ವಿಜ್ಞೇಯಸ್ತಸ್ಯ ವೈ ರಥಃ ॥ ೧ ॥
ಶತಾರೈಶ್ಚ ತ್ರಿಭಿಶ್ಚಕ್ರೈರ್ಯುಕ್ತಃ ಶುಕ್ಲೈರ್ಹಯೋತ್ತಮೈಃ ।
ದಶಭಿಸ್ತ್ವಕೃಶೈರ್ದಿವ್ಯೈ ರಸಂಗೈಸ್ತೈರ್ಮನೋಜವೈಃ ॥ ೨ ॥
ರಥೇನಾನೇನ ದೇವೈಶ್ಚ ಪಿತೃಭಿಶ್ಚೈವ ಗಚ್ಛತಿ ।
ಸೋಮೋ ಹ್ಯಂಬುಮಯೈರ್ಗೋಭಿಃ ಶುಕ್ಲೈಃ ಶುಕ್ಲಗಭಸ್ತಿಮಾನ್
ಕ್ರಮತೇ ಶುಕ್ಲಪಕ್ಷಾದೌ ಭಾಸ್ಕರಾತ್ಪರಮಾಸ್ಥಿತಃ ।
ಆಪೂರ್ಯತೇ ಪರಸ್ಯಾಂತಃ ಸತತಂ ದಿವಸಕ್ರಮಾತ್ ॥ ೪ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಐವತ್ತಾರನೆಯ ಅಧ್ಯಾಯವು.

೧. ಸೂತನು ಹೇಳಿದನು: ಚಂದ್ರನು ತನ್ನ ಮಾರ್ಗದಲ್ಲಿರುವ ನಕ್ಷತ್ರಗಳ ಮೂಲಕ, ಕ್ರಮವಾಗಿ ಸಂಚರಿಸುತ್ತಾನೆ. ಅವನ ರಥವು ಮೂರು ಚಕ್ರವುಳ್ಳದ್ದಾಗಿಯೂ, ಮತ್ತು ಎರಡು ಕಡೆಯೂ, ಕುದುರೆಯುಳ್ಳದ್ದಾಗಿಯೂ, ಇದೆ. ಎಂದು ತಿಳಿಯಬೇಕು.

೨-೪. ನೂರು ಪಟ್ಟಿಗಳಿಂದಲೂ, ಮೂರು ಚಕ್ರಗಳಿಂದಲೂ, ಕೂಡಿರುವ ಮತ್ತು ಶುಭವಾದ ಮನೋವೇಗವುಳ್ಳ, ಸಣ್ಣಗಿಲ್ಲದ ಮತ್ತು ಸ್ವರ್ಗೀಯವಾದ ಮತ್ತು ಪರಸ್ಪರ ಸಂಬಂಧವಿಲ್ಲದ,ಹತ್ತು ಶ್ರೇಷ್ಠವಾದ ಕುದುರೆಗಳಿಂದ ಕೂಡಿದ ರಥದಲ್ಲಿ ಚಂದ್ರನು ದೇವತೆಗಳು, ಮತ್ತು ಪಿತೃದೇವತೆಗಳ ಜೊತೆಯಲ್ಲಿ ಹೋಗುತ್ತಾನೆ. ಚಂದ್ರನು ಜಲಪೂರ್ಣವಾದ ಶುಭ್ರವಾದ ಕಿರಣಗಳಿಂದ ಪ್ರಕಾಶವಾಗಿರುವನು. ಶುಕ್ಲಪಕ್ಷದ ಮೊದಲುದಿನ ಸೂರ್ಯನ ಮುಂಭಾಗದ ಮಾರ್ಗದಲ್ಲಿ ಸಂಚರಿಸುತ್ತಾನೆ. ದಿನ ಕಳೆದ ಹಾಗೆಲ್ಲಾ ಶುಕ್ಲಪಕ್ಷದ ಕೊನೆಯ ದಿನದ ಹೊತ್ತಿಗೆ ಚಂದ್ರನು ಕಲಾಪರಿಪೂರ್ಣನಾಗುತ್ತಾನೆ.

ದೇವೈಃ ಪೀತಂ ಕ್ಷಯೇ ಸೋಮ ಮಾಪ್ಯಾಯಯತಿ ನಿತ್ಯಶಃ ।
ಪೀತಂ ಪಂಚದಶಾಹಂ ತು ರಶ್ಮಿನೈಕೇನ ಭಾಸ್ಕರಃ ॥ ೫ ॥

ಆಪೂರಯನ್ ಸುಷುಮ್ನೇನ ಭಾಗಂ ಭಾಗ ಮನುಕ್ರಮಾತ್ ।
ಇತ್ಯೇಷಾ ಸೂರ್ಯ ವೀರ್ಯೇಣ ಚಂದ್ರಸ್ಯಾಪ್ಯಾಯಿತಾ ತನುಃ ॥ ೬ ॥

ಸ ಪೌರ್ಣ ಮಾಸ್ಯಾಂ ದೃಶ್ಯೇತ ಶುಕ್ಲಃ ಸಂಪೂರ್ಣಮಂಡಲಃ ।
ಏವ ಮಾಪ್ಯಾಯಿತಂ ಸೋಮಂ ಶುಕ್ಲಪಕ್ಷೇ ದಿನಕ್ರಮಾತ್ ॥ ೭ ॥

ತತೋ ದ್ವಿತೀಯಾ ಪ್ರಭೃತಿ ಬಹುಳಸ್ಯ ಚತುರ್ದಶೀಂ ।
ಪಿಬಂತ್ಯಂಬುಮಯಂ ದೇವಾ ಮಧು ಸೌಮ್ಯಂ ಸುಧಾಽಮೃತಂ ॥

ಸಂಭೃತಂ ತ್ವ ರ್ಧಮಾಸೇನ ಹ್ಯಮೃತಂ ಸೂರ್ಯತೇಜಸಾ ।
ಪಾನಾರ್ಥಮಮೃತಂ ಸೋಮಂ ಪೌರ್ಣಮಾಸ್ಯಾ ಮುಪಾಸತೇ ॥

---

೫-೭. ಅಮಾವಾಸ್ಯೆಯವರೆಗೂ ಹದಿನೈದು ದಿನಗಳೂ, ಪ್ರತಿನಿತ್ಯದಲ್ಲಿಯೂ ದೇವತೆಗಳಿಂದ ಪಾನಮಾಡಲ್ಪಟ್ಟು ಕ್ಷಯಿಸಿದ ಚಂದ್ರನ ಪ್ರತಿಯೊಂದು ಭಾಗವನ್ನೂ ಕ್ರಮಕ್ರಮವಾಗಿ ಸೂರ್ಯನು ತನ್ನ "ಸುಷುಮ್ನಾ" ಎಂಬ ಹೆಸರಿನ ಕಿರಣದಿಂದ ಪೂರ್ಣಮಾಡುವನು. ಈ ರೀತಿಯಾಗಿ ಸೂರ್ಯನ ತೇಜಸ್ಸಿನಿಂದ ಚಂದ್ರನ ಶರೀರವು ಪುಷ್ಟವಾಗುತ್ತದೆ. ಚಂದ್ರನು ಪೂರ್ಣಿಮಾದಿನ ಪೂರ್ಣಮಂಡಲನಾಗಿ ಶುಭ್ರವಾಗಿ ಕಾಣಿಸುತ್ತಾನೆ. ಹೀಗೆ ದಿನಗಳು ಕಳೆದಂತೆ ಶುಕ್ಲಪಕ್ಷದಲ್ಲಿ ಚಂದ್ರನು ವೃದ್ಧಿಯನ್ನು ಹೊಂದುತ್ತಾನೆ.

೮. ಅನಂತರ ಬಿದಿಗೆಯಿಂದ ಹಿಡಿದು ಕೃಷ್ಣಪಕ್ಷದ ಚತುರ್ದಶಿಯವರೆಗೂ, ದೇವತೆಗಳು ಜಲಪೂರ್ಣವಾದ ಚಂದ್ರನ ಸಂಬಂಧವಾದ, ಮಧುರವಾದ, ಶುದ್ಧವಾದ, ಅಮೃತವನ್ನು ಕುಡಿಯುತ್ತಾರೆ.

೯. ಸೂರ್ಯನ ತೇಜಸ್ಸಿನಿಂದ ಅರ್ಧ ತಿಂಗಳವರೆಗೆ ಶೇಖರಿಸಲ್ಪಟ್ಟ ಚಂದ್ರ ಸಂಬಂಧವಾದ ಅಮೃತವನ್ನು ಪಾನಮಾಡಲು ಎಲ್ಲಾದೇವತೆಗಳೂ, ಪಿತೃದೇವತೆಗಳೊಂದಿಗೂ, ಋಷಿಗಳೊಂದಿಗೂ, ಪೌರ್ಣಮಾಸಿಯ ಒಂದೇ ರಾತ್ರಿಯಲ್ಲಿ ಚಂದ್ರನನ್ನು ಸೇವಿಸುತ್ತಾರೆ.

ಏಕರಾತ್ರಿಂ ಸುರಾಃ ಸರ್ವೇ ಪಿತೃಭಿಸ್ತ್ವೃಷಿಭಿಃ ಸಹ ।
ಸೋಮಸ್ಯ ಕೃಷ್ಣಪಕ್ಷಾದೌ ಭಾಸ್ಕರಾಭಿಮುಖಸ್ಯ ಚ ॥೧೦॥

ಪ್ರಕ್ಷೀಯಂತೇ ಪರಸ್ಯಾಂತಃ ಪೀಯಮಾನಾಃ ಕಲಾಃ ಕ್ರಮಾತ್ ।
ತ್ರಯಸ್ತ್ರಿಂಶಚ್ಛತಾ ಚ್ಚೈವ ತ್ರಯಸ್ತ್ರಿಂಶತ್ತಥೈವಚ ॥೧೧॥

ತ್ರಯಸ್ತ್ರಿಂಶತ್ಸಹಸ್ರಾಣಿ ದೇವಾಃ ಸೋಮಂ ಪಿಬಂತಿ ವೈ ।
ಏವಂ ದಿನಕ್ರಮಾತ್ಪೀತೇ ವಿಬುಧೈಸ್ತು ನಿಶಾಕರೇ ॥೧೨॥

ಪೀತ್ವಾಽರ್ಧಮಾಸಂ ಗಚ್ಛಂತಿ ಅಮಾವಾಸ್ಯಾಂ ಸುರೋತ್ತಮಾಃ ।
ಪಿತರಶ್ಚೋಪತಿಷ್ಠಂತಿ ಅಮಾವಾಸ್ಯಾಂ ನಿಶಾಕರಂ ॥೧೩॥

ತತಃ ಪಂಚದಶೇ ಭಾಗೇ ಕಿಂಚಿಚ್ಛಿಷ್ಟೇ ಕಲಾತ್ಮಕೇ ।
ಅಪರಾಹ್ಣೇ ಪಿತೃಗಣಾ ಜಘನ್ಯಂ ಪರ್ಯುಪಾಸತೇ ॥೧೪॥

ಪಿಬಂತಿ ದ್ವಿಕಲಂ ಕಾಲಂ ಶಿಷ್ಟಾ ತಸ್ಯಕಲಾ ತು ಯಾ ।
ನಿಸ್ಸೃತಂ ತದಮಾವಾಸ್ಯಾಂ ಗಭಸ್ತಿಭ್ಯಃ ಸ್ವಧಾಽಮೃತಂ ॥೧೫॥

---

೧೦–೧೩. ಕಷ್ಣಪಕ್ಷದ ಮೊದಲನೆಯ ದಿನ ಸೂರ್ಯಾಭಿಮುಖನಾದ ಚಂದ್ರನ ಒಳಗೆ ಕುಡಿಯಲ್ಪಡುವ ಕಲೆಗಳು ಕ್ರಮವಾಗಿ ನಾಶ ಹೊಂದುತ್ತವೆ. ಮೂರು ಸಾವಿರದ ಮುನ್ನೂರು, ಮತ್ತು ಮುವ್ವತ್ತ ಮೂರು, ಹಾಗೆಯೇ ಮುವ್ವತ್ತುಮೂರು ಸಾವಿರ ಸಂಖ್ಯೆಯುಳ್ಳ ದೇವತೆ ಗಳೂ, ಚಂದ್ರಕಲೆಗಳನ್ನು ಪಾನಮಾಡುತ್ತಾರೆ. ಹೀಗೆ ಅರ್ಧ ತಿಂಗಳ ವರೆಗೂ ಕ್ರಮವಾಗಿ ಚಂದ್ರಕಲೆಗಳನ್ನು ಪಾನಮಾಡಿ ದೇವತೆಗಳು ಅಮಾವಾಸ್ಯೆಯ ದಿನ ಹೊರಟುಹೋಗುತ್ತಾರೆ. ಪಿತೃದೇವತೆಗಳು ಅಮಾವಾಸ್ಯೆಯ ದಿನ ಚಂದ್ರನನ್ನು ಸೇವಿಸುತ್ತಾರೆ.

೧೪. ಅನಂತರ ಕಲಾ ರೂಪವಾದ ಒಂದು ಹದಿನೈದನೆಯ ಭಾಗವು ಉಳಿದಿರಲು ಪಿತೃದೇವತೆಗಳು ಮಧ್ಯಾಹ್ನದಲ್ಲಿ ಆ ಕೀಳಾದ ಭಾಗವನ್ನು ಸೇವಿಸುತ್ತಾರೆ.

೧೫. ಅವರು ಉಳಿದಿರುವ ಆ ಕಲೆಗಳನ್ನು ಎರಡು ಘಳಿಗೆ ಕಾಲದ ವರೆಗೆ ಪಾನಮಾಡುತ್ತಾರೆ. ಆ ಅಮೃತವು ಅಮಾವಾಸ್ಯೆಯಲ್ಲಿ ಕಿರಣ ಗಳಿಂದ ಹೊರಟುಹೋಗುತ್ತದೆ.

ಮಾಸ ತೃಪ್ತಿ ಮವಾಪ್ಯಾಗ್ರ್ಯಂ ಪೀತ್ವಾ ಗಚ್ಛಂತಿ ತೇಽ ಮೃತಂ ।
ಪಿತೃಭಿಃ ಪೀಯಮಾನಸ್ಯ ಪಂಚದಶ್ಯಾಂ ಕಲಾ ತು ಯಾ ॥೧೬॥

ಯಾವತ್ತು ಕ್ಷೀಯತೇ ತಸ್ಯ ಭಾಗಃ ಪಂಚದಶಸ್ತು ಸಹ ।
ಅಮಾವಾಸ್ಯಾಂ ತತಸ್ತಸ್ಯಾ ಅಂತರಾಪೂರ್ಯತೇ ಪುನಃ ॥೧೭॥

ವೃದ್ಧಿಕ್ಷಯೌ ವೈ ಪಕ್ಷಾದೌ ಷೋಡಶ್ಯಾಂ ಶಶಿನಃ ಸ್ಮೃತೌ ।
ಏವಂ ಸೂರ್ಯನಿಮಿತ್ತೈಷಾ ಪಕ್ಷವೃದ್ಧಿರ್ನಿಶಾಕರೇ ॥೧೮॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಚಂದ್ರಮಂಡಲವರ್ಣನಂ ನಾಮ ಷಟ್ಪಂಚಾಶತ್ತಮೋಽಧ್ಯಾಯಃ

---

೧೬–೧೭. ಒಂದು ತಿಂಗಳವರೆಗೂ ತೃಪ್ತಿಯುಂಟಾಗುವಂತೆ ಮುಂದಾಗಿಯೇ ಚೆನ್ನಾಗಿ ಅಮೃತಪಾನಮಾಡಿ ಅವರು ಹೊರಟು ಹೋಗುತ್ತಾರೆ. ಹದಿನೈದನೆಯ ದಿನ ಪಿತೃದೇವತೆಗಳು ಪಾನಮಾಡುವ ಕಲೆಯು ಕ್ಷಯಿಸುವುದಕ್ಕಿಂತ ಮುಂಚೆ ಚಂದ್ರನ ಹದಿನೈದನೆಯ ಭಾಗದ ಕಲೆಯಾಗಿರುವುದು. ಆನಂತರ ಅಮಾವಾಸ್ಯೆಯಲ್ಲಿ ಆ ಕಲೆಯು ಒಳಗೆ ಪುನಃಪೂರ್ಣವಾಗುವುದು.

೧೮. ಪಕ್ಷದ ಮೊದಲನೆಯ ದಿನವಾದ ಪಾಡ್ಯದಲ್ಲಿ ಹದಿನಾರನೆಯ ಕಲೆಯ ವೃದ್ಧಿಕ್ಷಯಗಳು ಹೇಳಲ್ಪಟ್ಟಿವೆ. ಹೀಗೆ ಶುಕ್ಲಪಕ್ಷದಲ್ಲಿ ಚಂದ್ರನ ಕಲಾಭಿವೃದ್ಧಿಯು ಸೂರ್ಯನಿಂದ ಉಂಟಾಗುವುದು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಚಂದ್ರಮಂಡಲದ ವಿಶೇಷಗಳ ವರ್ಣನೆ ಎಂಬ ಐವತ್ತಾರನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಸಪ್ತ ಪಂಚಾಶತ್ತಮೋಽಧ್ಯಾಯಃ

॥ ಸೂತ ಉವಾಚ ॥

ಅಷ್ಟಭಿಶ್ಚ ಹಯೈರ್ಯುಕ್ತಃ ಸೋಮಪುತ್ರಸ್ಯ ವೈ ರಥಃ ।
ವಾರಿತೇಜೋಮಯಶ್ಚಾಥ ಪಿಶಂಗೈಶ್ಚೈವ ಶೋಭನೈಃ ॥ ೧ ॥

ದಶಭಿಶ್ಚಾಕೃಶೈರಶ್ವೈಃ ನಾನಾವರ್ಣೈ ರಥಃ ಸ್ಮೃತಃ ।
ಶುಕ್ರಸ್ಯ ಕ್ಷ್ಮಾಮಯೈ ರ್ಯುಕ್ತೋ ದೈತ್ಯಾಚಾರ್ಯಸ್ಯ ಧೀಮತಃ ॥ ೨ ॥

ಅಷ್ಟಾಶ್ವಶ್ಚಾಥ ಭೌಮಸ್ಯ ರಥೋ ಹೈಮಃ ಸುಶೋಭನಃ ।
ಜೀವಸ್ಯ ಹೈಮಶ್ಚಾಷ್ಟಾಶ್ವೋ ಮಂದಸ್ಯಾಯಸನಿರ್ಮಿತಃ ॥ ೩ ॥

ರಥ ಆಪೋಮಯೈರಶ್ವೈ ರ್ದಶಭಿಸ್ತು ಸಿತೇತರೈಃ ।
ಸ್ವರ್ಭಾನೋ ರ್ಭಾಸ್ಕರಾರೇಶ್ಚ ತಥಾ ಚಾಷ್ಟಹಯಃ ಸ್ಮೃತಃ ॥ ೪ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಐವತ್ತೇಳನೆಯ ಅಧ್ಯಾಯವು

೧. ಚಂದ್ರನ ಮಗನಾದ ಬುಧನ ರಥವು, ಕಾಂತಿಯುಕ್ತವಾಗಿಯೂ ಮತ್ತು ಹೊಂಬಣ್ಣಉಳ್ಳವೂ ಆದ ಎಂಟು ಕುದುರೆಗಳಿಂದ ಕೂಡಿ, ನೀರು ಮತ್ತು ತೇಜಸ್ಸು ಇವುಗಳಿಂದ ಪೂರ್ಣವಾಗಿದೆ.

೨. ಅಸುರರಿಗೆ ಗುರುವೂ, ಪ್ರತಿಭಾವಂತನೂ, ಆದ ಶುಕ್ರನ ರಥವು ಅನೇಕ ಬಣ್ಣಉಳ್ಳದ್ದಾದ, ಸಣ್ಣಗಿಲ್ಲದ ಮತ್ತು ಭೂಮಿಯಿಂದ ಪೂರ್ಣವಾದ, ಹತ್ತು ಕುದುರೆಗಳಿಂದ ಕೂಡಿದೆಯೆಂದು ಹೇಳಲ್ಪಟ್ಟಿದೆ.

೩–೪. ಮಂಗಳನ ರಥವು ಚಿನ್ನದಿಂದ ನಿರ್ಮಿಸಲ್ಪಟ್ಟು, ಎಂಟು ಕುದುರೆಗಳುಳ್ಳದ್ದಾಗಿ, ಪ್ರಕಾಶಮಾನವಾಗಿದೆ. ಗುರುವಿನ ರಥವೂ, ಚಿನ್ನದಿಂದ ಮಾಡಲ್ಪಟ್ಟು ಎಂಟು ಕುದುರೆಗಳುಳ್ಳದ್ದಾಗಿದೆ. ಶನಿಯ ರಥವು ಕಬ್ಬಿಣದಿಂದ ನಿರ್ಮಿಸಲ್ಪಟ್ಟು ಜಲಪೂರ್ಣವಾಗಿ ಕಪ್ಪಗಿರುವ ಹತ್ತು ಕುದುರೆಗಳಿಂದ ಕೂಡಿದ್ದಾಗಿದೆ. ಸೂರ್ಯನ ಶತ್ರುವಾದ ರಾಹುವಿನ ರಥವಾದರೋ ಶನಿಯ ರಥದಂತೆ ಎಂಟು ಕುದುರೆಗಳಿಂದ ಕೂಡಿದೆ ಎಂದು ಹೇಳಲ್ಪಟ್ಟಿದೆ.

ಸರ್ವೇ ಧ್ರುವ ನಿಬದ್ಧಾ ವೈ ಗ್ರಹಾಸ್ತೇ ವಾತ ರಶ್ಮಿಭಿಃ ।
ಏತೇನ ಭ್ರಾಮ್ಯಮಾಣಾಶ್ಚ ಯಥಾಯೋಗಂ ವ್ರಜಂತಿ ವೈ ॥ ೫ ॥
ಯಾವಂತ್ಯ ಶ್ಚೈವ ತಾರಾಶ್ಚ ತಾವಂತಶ್ಚೈವ ರಶ್ಮಯಃ ।
ಸರ್ವೇ ಧ್ರುವ ನಿಬದ್ಧಾಶ್ಚ ಭ್ರಮಂತೋ ಭ್ರಾಮಯಂತಿ ತಂ ॥ ೬ ॥
ಅಲಾತ ಚಕ್ರವದ್ಯಾಂತಿ ವಾತಚಕ್ರೇರಿತಾನಿ ತು ।
ಯಸ್ಮಾದ್ವಹತಿ ಜ್ಯೋತೀಂಷಿ ಪ್ರವಹಸ್ತೇನ ಸ ಸ್ಮೃತಃ ॥ ೭ ॥
ನಕ್ಷತ್ರ ಸೂರ್ಯಾಶ್ಚ ತಥಾ ಗ್ರಹ ತಾರಾಗಣೈಃ ಸಹ ।
ಉನ್ಮುಖಾಭಿಮುಖಾಃ ಸರ್ವೇ ಚಕ್ರಭೂತಾಃ ಶ್ರಿತಾ ದಿವಿ ॥ ೮ ॥
ಧ್ರುವೇಣಾಧಿಷ್ಠಿತಾಶ್ಚೈವ ಧ್ರುವಮೇವ ಪ್ರದಕ್ಷಿಣಂ ।
ಪ್ರಯಾಂತಿ ಚೇಶ್ವರಂ ದ್ರಷ್ಟುಂ ಮೇಢೀಭೂತಂ ಧ್ರುವಂ ದಿವಿ॥ ೯ ॥

---

೫. ವಾಯುರೂಪವಾದ ಕಿರಣಗಳಿಂದ ಎಲ್ಲಾ ಗ್ರಹಗಳೂ ಸ್ಥಿರ ವಾಗಿ ಮಾಡಲ್ಪಡುತ್ತವೆ. ಸೂರ್ಯನಿಂದ ತಿರುಗಿಸಲ್ಪಡುವ ಈ ಗ್ರಹ ಗಳು ಒಂದು ವ್ಯವಸ್ಥೆಯಿಂದ ಅವನನ್ನು ಸುತ್ತುತ್ತಾಹೋಗುತ್ತಿರುತ್ತವೆ.

೬. ಎಷ್ಟು ನಕ್ಷತ್ರಗಳು ಇವೆಯೋ ಅಷ್ಟು ಸೂರ್ಯಕಿರಣಗಳು ಇವೆ. ಸ್ಥಿರವಾಗಿ ಮಾಡಲ್ಪಟ್ಟ ಈ ನಕ್ಷತ್ರಗಳೆಲ್ಲವೂ ಸುತ್ತುತ್ತಾ ಅವನನ್ನು ತಿರುಗಿಸುತ್ತವೆ.

೭. ಇವುಗಳು ವಾಯುರೂಪವಾದ ಚಕ್ರದಿಂದ ತಿರುಗಿ ಪ್ರೇರಿ ಸಲ್ಪಟ್ಟು ಕೊಳ್ಳಿಯಂತೆ ದುಂಡಗೆ ಚಲಿಸುತ್ತವೆ. ಇವು ತೇಜಸ್ಸನ್ನು ಬೀರುವುದರಿಂದ "ಪ್ರವಹ" ಎಂದು ಹೇಳಲ್ಪಡುತ್ತದೆ.

೮. ನಕ್ಷತ್ರಗಳೂ, ಸೂರ್ಯನೂ, ಗ್ರಹಗಳೂ, ಮತ್ತು ಇತರ ನಕ್ಷತ್ರಗಳೊಡನೆ ಇವೆಲ್ಲಾ ಗ್ರಹಗಳೂ ಊರ್ಧ್ವಮುಖವಾಗಿಯೂ, ಮತ್ತು ಅಭಿಮುಖವಾಗಿಯೂ, ಚಕ್ರದ ಆಕಾರದಲ್ಲಿ ಆಕಾಶದಲ್ಲಿ ಇವೆ.

೯. ಅವುಗಳು ಸ್ಥಿರವಾಗಿಯೇ ಇವೆ. ಅವುಗಳ ಸುತ್ತುವಿಕೆಯೂ ಸ್ಥಿರವಾಗಿಯೇ ಇದೆ. ಇವುಗಳು ಸ್ವಾಮಿಯಾದ ಸೂರ್ಯನನ್ನು ಸಂದ ರ್ಶಿಸಲು ಆಕಾಶದಲ್ಲಿ ತಪ್ಪದೇ ಹೋಗುತ್ತವೆ.

ನವಯೋಜನ ಸಾಹಸ್ರೋ ವಿಷ್ಕಂಭಃ ಸವಿತುಃ ಸ್ಮೃತಃ ।
ತ್ರಿಗುಣಸ್ತಸ್ಯ ವಿಸ್ತಾರೋ ಮಂಡಲಸ್ಯ ಪ್ರಮಾಣತಃ ॥೧೦॥

ದ್ವಿಗುಣಃ ಸೂರ್ಯ ವಿಸ್ತಾರಾ ದ್ವಿಸ್ತಾರಃ ಶಶಿನಃ ಸ್ಮೃತಃ ।
ತುಲ್ಯಸ್ತಯೋಸ್ತು ಸ್ವರ್ಭಾನು ರ್ಭೂತ್ವಾಽಧಸ್ತಾತ್ಪ್ರಸರ್ಪತಿ ॥೧೧॥

ಉದ್ಧೃತ್ಯ ಪೃಥಿವೀ ಚ್ಛಾಯಾಂ ನಿರ್ಮಿತಾಂ ಮಂಡಲಾಕೃತಿಂ ।
ಸ್ವರ್ಭಾನೋಸ್ತು ಬೃಹತ್ಸ್ಥಾನಂ ತೃತೀಯಂ ಯತ್ತಮೋಮಯಂ॥

ಚಂದ್ರಸ್ಯ ಷೋಡಶೋ ಭಾಗೋ ಭಾರ್ಗವಸ್ಯ ವಿಧೀಯತೇ ।
ವಿಷ್ಕಂಭಾನ್ಮಂಡಲಾಚ್ಚೈವ ಯೋಜನಾಚ್ಚ ಪ್ರಮಾಣತಃ ॥೧೩॥

ಭಾರ್ಗವಾತ್ಪಾದ ಹೀನಸ್ತು ವಿಜ್ಞೇಯೋ ವೈ ಬೃಹಸ್ಪತಿಃ ।
ಪಾದಹೀನೌ ವಕ್ರಸಾರೀ ತಥಾಽಽಯಾಮ ಪ್ರಮಾಣತಃ ॥೧೪॥

---

೧೦. ಸೂರ್ಯನ ಮಧ್ಯಭಾಗವು ಒಂಬತ್ತುಸಾವಿರ ಯೋಜನದಷ್ಟು ದೀರ್ಘವಾಗಿರುವುದು. ಸೂರ್ಯಮಂಡಲದ ಅಳತೆಯಂತೆ ಲೆಕ್ಕ ಹಾಕಿದರೆ ಸೂರ್ಯನು ಅದಕ್ಕಿಂತ ಮೂರರಷ್ಟಿರುವನು.

೧೧, ಸೂರ್ಯನ ವಿಸ್ತಾರಕ್ಕಿಂತಲೂ, ಚಂದ್ರನ ವಿಸ್ತಾರವು ಎರಡರಷ್ಟಿದೆ. ಎಂಬುದಾಗಿ ಹೇಳಲ್ಪಟ್ಟಿದೆ. ಅವರಿಬ್ಬರಿಗೂ ಸಮನಾಗಿ ರಾಹುವು ಅವರ ಕೆಳಗಡೆ ಸಂಚರಿಸುತ್ತಾನೆ.

೧೨. ರಾಹುವಿನ ಮೂರನೆಯ ದೊಡ್ಡದಾದ ಸ್ಥಾನವು ಕತ್ತಲೆಯಿಂದ ವ್ಯಾಪಿಸಲ್ಪಟ್ಟಿದೆ. ಇದು ಮಂಡಲಾಕಾರವಾದ ಭೂಮಿಯ ನೆರಳನ್ನು ತೆಗೆದುಕೊಂಡು ನಿರ್ಮಾಣ ಮಾಡಲ್ಪಟ್ಟಿದೆ.

೧೩. ಮಧ್ಯಭಾಗದ ಮತ್ತು ಮಂಡಲದ ಮತ್ತು ಯೋಜನದ ಲೆಕ್ಕದಂತೆ ಶುಕ್ರನ ವಿಸ್ತಾರವು ಚಂದ್ರನ ಹದಿನಾರನೆಯ ಒಂದು ಭಾಗವಾಗಿ ರಚಿಸಲ್ಪಟ್ಟಿದೆ.

೧೪. ಶುಕ್ರನಿಗಿಂತ ಕಾಲುಭಾಗ ಅಳತೆಯುಳ್ಳವನು ಗುರು. ಎಂಬುದಾಗಿ ತಿಳಿಯಬೇಕು. ಗುರುವಿನ ವಿಸ್ತಾರಕ್ಕಿಂತ ಮಂಗಳ ಮತ್ತು ಶನಿ ಇವರುಗಳು ಕಾಲುಭಾಗ ಕಡಿಮೆಯಾಗಿ ಇರುವರು.

ವಿಸ್ತಾರಾನ್ಮಂಡಲಾಚ್ಚೈವ ಪಾದಹೀನಸ್ತಯೋರ್ಬುಧಃ ।
ತಾರಾನಕ್ಷತ್ರ ರೂಪಾಣಿ ವಪುಷ್ಮಂತೀಹ ಯಾನಿ ವೈ ॥೧೫॥

ಬುಧೇನ ತಾನಿ ತುಲ್ಯಾನಿ ವಿಸ್ತಾರಾನ್ಮಂಡಲಾದಪಿ ।
ಪ್ರಾಯಶಶ್ಚಂದ್ರ ಯೋಗೀನಿ ವಿದ್ಯಾದೃಕ್ಷಾಣಿ ತತ್ವವಿತ್ ॥೧೬॥

ತಾರಾನಕ್ಷತ್ರರೂಪಾಣಿ ಹೀನಾನಿ ತು ಪರಸ್ಪರಂ ।
ಶತಾನಿ ಪಂಚ ಚತ್ವಾರಿ ತ್ರೀಣಿ ದ್ವೇ ಚೈವ ಯೋಜನೇ ॥೧೭॥

ಸರ್ವೋಪರಿ ನಿಕೃಷ್ಟಾನಿ ತಾರಕಾಮಂಡಲಾನಿ ತು ।
ಯೋಜನಸ್ದ್ವಯು ಮಾತ್ರಾಣಿ ತೇಭ್ಯೋ ಹ್ರಸ್ವಂ ನ ವಿದ್ಯತೇ ॥೧೮॥

---

೧೫–೧೬. ಬುಧನು, ಮಂಗಳ ಶನಿಗಳಿಗಿಂತಲೂ, ವಿಸ್ತಾರದಲ್ಲಿಯೂ ಮತ್ತು ಮಂಡಲದ ಅಳತೆಗೆ ಸರಿಯಾಗಿ ಕಾಲುಭಾಗ ಕಡಿಮೆಯಾಗಿರುವವನೆಂದು ತಿಳಿಯಬೇಕು. ತಾರೆಗಳೂ, ಮತ್ತು ನಕ್ಷತ್ರಗಳು ಮುಂತಾದ ಆಕಾರವುಳ್ಳ ವಸ್ತುಗಳು ಅವುಗಳ ವಿಸ್ತಾರ ಮತ್ತು ಮಂಡಲದ ಅಳತೆಗೆ ಅನುಸಾರವಾಗಿ ಬುಧನಿಗೆ ಸಮಾನವಾದವೂ, ಮತ್ತು ಚಂದ್ರನ ಸಂಬಂಧ ಉಳ್ಳವೂ ಆಗಿವೆಯೆಂದು ತತ್ತ್ವಜ್ಞರು ತಿಳಿಯಬೇಕು.

೧೭. ಈ ತಾರೆಗಳು ಮತ್ತು ನಕ್ಷತ್ರಗಳು ತಮ್ಮತಮ್ಮಲ್ಲಿಯೇ ಅವುಗಳ ಅಳತೆಗೆ ಅನುಸಾರವಾಗಿ ನೂರು, ಐದು, ನಾಲ್ಕು, ಮೂರು ಮತ್ತು ಎರಡು ಯೋಜನದಷ್ಟು ಕಡಿಮೆಯಾಗಿರುವುವು.

೧೮. ಎಲ್ಲಕ್ಕಿಂತಲೂ ತಾರಾಮಂಡಲವು ಚಿಕ್ಕದು. ಅದು ಎರಡು ಯೋಜನದಷ್ಟು ವಿಸ್ತಾರವುಳ್ಳದ್ದು. ಅವುಗಳಿಗಿಂತ ಚಿಕ್ಕದಾದುದು ಯಾವುದೂ ಇಲ್ಲ.

ಉಪರಿಷ್ಟಾತ್ತ್ರಯಸ್ತೇಷಾಂ ಗ್ರಹಾ ಯೇ ದೂರಸರ್ಪಿಣಃ ।
ಸೌರೋಽಂಗಿರಾಶ್ಚ ವಕ್ರಶ್ಚ ಜ್ಞೇಯಾ ಮಂದ ವಿಚಾರಿಣಃ ॥೧೯॥
ತೇಭ್ಯೋಽಧಸ್ತಾತ್ತು ಚತ್ವಾರಃ ಪುನರನ್ಯೇ ಮಹಾಗ್ರಹಾಃ ।
ಸೂರ್ಯಃ ಸೋಮೋ ಬುಧಶ್ಚೈವ ಭಾರ್ಗವಶ್ಚೈವ ಶೀಘ್ರಗಾಃ ॥೨೦॥
ತಾವಂತ್ಯಸ್ತಾರಕಾಃ ಕೋಟ್ಯೋ ಯಾವಂತ್ಯೃಕ್ಷಾಣಿ ಸರ್ವಶಃ ।
ಧ್ರುವಾತ್ತು ನಿಯಮಾಚ್ಚೈಷಾ ಮೃಕ್ಷಮಾರ್ಗೇ ವ್ಯವಸ್ಥಿತಿಃ ॥೨೧॥
ಸಪ್ತಾಶ್ವಸ್ಯೈವ ಸೂರ್ಯಸ್ಯ ನೀಚೋಚ್ಚತ್ವ ಮನುಕ್ರಮಾತ್ ।
ಉತ್ತರಾಯಣ ಮಾರ್ಗಸ್ಥೋ ಯದಾ ಪರ್ವಸು ಚಂದ್ರಮಾಃ ॥
ಉಚ್ಚತ್ವಾತ್‌ದೃಶ್ಯತೇ ಶೀಘ್ರಂ ನಾತಿವ್ಯಕ್ತೈ ರ್ಗಭಸ್ತಿಭಿಃ ।
ತದಾ ದಕ್ಷಿಣಮಾರ್ಗಸ್ಥೋ ನೀಚಾಂ ವೀಥೀಮುಪಾಶ್ರಿತಃ ॥೨೩॥

---

೧೯–೨೦. ಅವುಗಳ ಮೇಲುಭಾಗದಲ್ಲಿ ಶನಿ, ಗುರು, ಮತ್ತು ಮಂಗಳನೆಂಬ ಮೂರು ಗ್ರಹಗಳು ಬಹುದೂರ ಚಲಿಸುವುವು. ಅವುಗಳ ಕೆಳಗೆ ನಾಲ್ಕು ಮಹಾಗ್ರಹಗಳಾದ ಸೂರ್ಯ, ಚಂದ್ರ, ಬುಧ, ಮತ್ತು ಶುಕ್ರಗ್ರಹಗಳು ಜಾಗ್ರತೆಯಾಗಿ ಚಲಿಸುತ್ತವೆ.

೨೧. ಎಷ್ಟು ನಕ್ಷತ್ರಗಳುಂಟೋ ಅಷ್ಟು ಕೋಟಿ ತಾರೆಗಳಿವೆ. ನಕ್ಷತ್ರಗಳ ಮಾರ್ಗದಲ್ಲಿ ಸ್ಥಿರವಾದ ಒಂದು (ಮಾರ್ಗದಿಂದ) ನಿಯಮ ದಿಂದ ಇವು (ಸ್ಥಿರವಾಗಿ) ವ್ಯವಸ್ಥೆ ಮಾಡಲ್ಪಟ್ಟಿವೆ.

೨೨–೨೪. ಏಳು ಕುದುರೆಗಳುಳ್ಳ ಸೂರ್ಯನಂತೆ, ಚಂದ್ರನ ನೀಚೋಚ್ಚಭಾವವನ್ನು ಕ್ರಮವಾಗಿ ಈ ಮುಂದೆ ಹೇಳುವಂತೆ ತಿಳಿಯಬೇಕು. ಚಂದ್ರನು ಉತ್ತರಾಯಣ ಮಾರ್ಗದಲ್ಲಿರುವಾಗ ಪೂರ್ಣಿಮಾ ದಿನದಲ್ಲಿ ಹೆಚ್ಚು ಸ್ಪಷ್ಟವಲ್ಲದ ಕಿರಣಗಳಿಂದ ಜಾಗ್ರತೆಯಾಗಿ ಕಾಣಿಸಿಕೊಳ್ಳುತ್ತಾನೆ. ದಕ್ಷಿಣಮಾರ್ಗದಲ್ಲಿರುವಾಗ ಕೆಳಗಿನ ಮಾರ್ಗವನ್ನು ಆಶ್ರಯಿಸಿರುತ್ತಾನೆ. ಆವಾಗ ಪೂರ್ಣಿಮಾ, ಅಮಾವಾಸ್ಯೆಗಳ ಕಾಲದಲ್ಲಿ ಭೂಮಿಯ

ಭೂಮಿರೇಖಾವೃತಃ ಸೂರ್ಯಃ ಪೌರ್ಣಿಮಾವಾಸ್ಯಯೋಸ್ತದಾ ।
ದದೃಶೇ ಚ ಯಥಾಕಾಲಂ ಶೀಘ್ರಮಸ್ತಂ ಮುಂಪೈತಿಚ ॥೨೪॥

ತಸ್ಮಾದುತ್ತರ ಮಾರ್ಗಸ್ಥೋ ಹ್ಯಮಾವಾಸ್ಯಾಂ ನಿಶಾಕರಃ ।
ದದೃಶೇ ದಕ್ಷಿಣೇ ಮಾರ್ಗೇ ನಿಯಮಾದ್ದೃಶ್ಯ ತೇ ನ ಚ ॥೨೫॥

ಜ್ಯೋತಿಷಾಂ ಗತಿ ಯೋಗೇನ ಸೂರ್ಯಸ್ಯ ತಮಸಾಽಽ ವೃತಃ ।
ಸಮಾನಕಾಲಾಸ್ತಮಯೌ ವಿಷುವತ್ಸು ಸಮೋದಯೌ ॥೨೬॥

ಉತ್ತರಾಸು ಚ ವೀಥೀಷು ವ್ಯಂತರಾಸ್ತಮ ನೋದಯೌ ।
ಪೂರ್ಣಿಮಾವಾಸ್ಯಯೋ ರ್ಜ್ಞೇಯೌ ಜ್ಯೋತಿಶ್ಚಕ್ರಾನುವರ್ತಿನೌ ॥

ದಕ್ಷಿಣಾಯನ ಮಾರ್ಗಸ್ಥೋ ಯದಾ ಚರತಿ ರಶ್ಮಿವಾನ್ ।
ಗ್ರಹಾಣಾಂ ಚೈವ ಸರ್ವೇಷಾಂ ಸೂರ್ಯೋಽಧಸ್ತಾತ್ಪ್ರಸರ್ಪತಿ ॥೨೮॥

---

ರೇಖೆಯಿಂದ ಆವರಿಸಲ್ಪಟ್ಟು ಕಾಲಕ್ಕೆ ಅನುಸರಿಸಿ ಜಾಗ್ರತೆ ಕಾಣಿಸಿ ಅಸ್ತವಾಗುತ್ತಾನೆ

೨೫. ಆದ್ದರಿಂದ ಅಮಾವಾಸ್ಯೆಯಲ್ಲಿ ಚಂದ್ರನು ಉತ್ತರಮಾರ್ಗದಲ್ಲಿ ಕಾಣಲ್ಪಡುವನು. ಸೂರ್ಯನ ಕಿರಣಗಳ ತೇಜಸ್ಸಿನ ವ್ಯಾಪನೆಯಿಂದ ತನ್ನ ಪ್ರಕಾಶವು ಮುಚ್ಚಿ ದಕ್ಷಿಣಮಾರ್ಗದಲ್ಲಿ ಕ್ಲುಪ್ತವಾಗಿ ಕಾಣುವುದೇ ಇಲ್ಲ.

೨೬. ವಿಷುವತ್ಸಂಕ್ರಾಂತಿಯ ಕಾಲದಲ್ಲಿ ಸೂರ್ಯ ಚಂದ್ರರು ಏಕಕಾಲದಲ್ಲಿ ಉದಯ ಮತ್ತು ಆಸ್ತಮವುಳ್ಳವರಾಗಿರುತ್ತಾರೆ!

೨೭. ಪೌರ್ಣಿಮೆ, ಮತ್ತು ಅಮಾವಾಸ್ಯೆಗಳಲ್ಲಿ ಇವರು ಉತ್ತರಮಾರ್ಗದಲ್ಲಿ ಭಿನ್ನಕಾಲದಲ್ಲಿ ಉದಯ ಮತ್ತು ಅಸ್ತವುಳ್ಳವರಾಗಿಯೂ, ತೇಜಸ್ಸಿನ ಚಕ್ರವನ್ನು ಅನುಸರಿಸುವವರಾಗಿಯೂ, ಇರುವರೆಂಬುದಾಗಿ ತಿಳಿಯಬೇಕು.

೨೮–೩೧. ಸೂರ್ಯನು ದಕ್ಷಿಣ ಮಾರ್ಗದಲ್ಲಿರುವಾಗ ಎಲ್ಲಾ ಗ್ರಹಗಳ ಕೆಳಗಡೆ ಅವನು ಚಲಿಸುತ್ತಾನೆ. ಚಂದ್ರನು ತನ್ನ ಮಂಡಲವನ್ನು

ವಿಸ್ತೀರ್ಣಂ ಮಂಡಲಂ ಕೃತ್ವಾ ತಸ್ಯೋರ್ಧ್ವಂ ಚರತೇ ಶಶೀ ।
ನಕ್ಷತ್ರಮಂಡಲಂ ಕೃತ್ಸ್ನಂ ಸೋಮಾದೂರ್ಧ್ವಂ ಪ್ರಸರ್ಪತಿ ॥೨೯॥
ನಕ್ಷತ್ರೇಭ್ಯೋ ಬುಧಶ್ಚೋರ್ಧ್ವಂ ಬುಧಾದೂರ್ಧ್ವಂ ತು ಭಾರ್ಗವಃ
ವಕ್ರಸ್ತು ಭಾರ್ಗವಾದೂರ್ಧ್ವಂ ವಕ್ರಾದೂರ್ಧ್ವಂ ಬೃಹಸ್ಪತಿಃ ॥
ತಸ್ಮಾಚ್ಛನೈಶ್ಚರಶ್ಚೋರ್ಧ್ವಂ ತಸ್ಮಾತ್ಸಪ್ತರ್ಷಿ ಮಂಡಲಂ ।
ಋಷೀಣಾಂ ಚೈವ ಸಪ್ತಾನಾಂ ಧ್ರುವಸ್ಯೋರ್ಧ್ವಂ ವ್ಯವಸ್ಥಿತಿಃ ॥
ತಂ ವಿಷ್ಣುಲೋಕಂ ಪರಮಂ ಜ್ಞಾತ್ವಾ ಮುಚ್ಯೇತ ಕಿಲ್ಬಿಷಾತ್ ।
ದ್ವಿಗುಣೇಷು ಸಹಸ್ರೇಷು ಯೋಜನಾನಾಂ ಶತೇಷು ಚ ॥೩೨॥
ಗ್ರಹನಕ್ಷತ್ರ ತಾರಾಸು ಉಪರಿಷ್ಟಾದ್ಯಥಾ ಕ್ರಮಂ ।
ಗ್ರಹಾಶ್ಚ ಚಂದ್ರಸೂರ್ಯ್ಯಾಚಯುತೌ ದಿವ್ಯೇನ ತೇಜಸಾ ॥೩೩॥
ನಿತ್ಯ ಮೃಕ್ಷೇಷು ಯುಜ್ಯಂತೇ ಗಚ್ಛಂತೋಽಹರ್ನಿಶಂ ಕ್ರಮಾತ್ ।
ಗ್ರಹನಕ್ಷತ್ರ ಸೂರ್ಯಾಸ್ತೇ ನೀಚೋಚ್ಚ ಋಜು ಸಂಸ್ಥಿತಾಃ ॥೩೪॥

---

ವಿಸ್ತಾರಮಾಡಿಕೊಂಡು ಅವನ ಮೇಲುಭಾಗದಲ್ಲಿ ಸಂಚರಿಸುತ್ತಾನೆ ನಕ್ಷತ್ರಮಂಡಲವೆಲ್ಲವೂ ಚಂದ್ರನ ಮೇಲುಭಾಗದಲ್ಲಿ ಚಲಿಸುತ್ತದೆ. ನಕ್ಷತ್ರಗಳ ಮೇಲೆ ಬುಧನೂ, ಅವನ ಮೇಲೆ ಶುಕ್ರನೂ, ಅವನ ಮೇಲೆ ಮಂಗಳನೂ, ಅವನ ಮೇಲೆ ಗುರುವೂ, ಅವನ ಮೇಲೆ ಶನಿಯೂ, ಅವನ ಮೇಲೆ ಸಪ್ತರ್ಷಿಗಳ ಮಂಡಲವೂ, ಅವರ ಮೇಲೆ ಧ್ರುವನೂ, ಕ್ರಮ. ವಾಗಿ ಇರುತ್ತಾರೆ.

೩೨–೩೫. ಇಂಥಾ ಶ್ರೇಷ್ಠವಾದ ವಿಷ್ಣುಲೋಕವನ್ನು ತಿಳಿದು ಪಾಪದ ಬಿಡುಗಡೆಯನ್ನು ಹೊಂದಬೇಕು. ಎರಡು ಲಕ್ಷಯೋಜನದ ವಿಸ್ತಾರದಲ್ಲಿ ಕ್ರಮವಾಗಿ ಗ್ರಹ, ನಕ್ಷತ್ರ, ಮತ್ತು ತಾರೆಗಳ ಮೇಲುಗಡೆ ತಮ್ಮ ದಿವ್ಯವಾದ ತೇಜಸ್ಸಿನಿಂದ ಗ್ರಹಗಳೂ ಮತ್ತು ಸೂರ್ಯ ಚಂದ್ರರೂ, ಬೆಳಗುತ್ತಿದ್ದಾರೆ. ಗ್ರಹ, ನಕ್ಷತ್ರ, ಮತ್ತು ಸೂರ್ಯರು ಋಜುವಾದ ಮಾರ್ಗದಲ್ಲಿ ರಾತ್ರಿ ಹಗಲು, ನಕ್ಷತ್ರಸಂಬಂಧವನ್ನು ಹೊಂದುತ್ತಾರೆ. ಇವುಗಳು ಸೇರಿದಾಗಲೂ, ಪ್ರತ್ಯೇಕವಾದಾಗಲೂ, ಪ್ರಜೆಗಳು ಏಕಕಾಲ

ಸಮಾಗಮೋ ಚ ಭೇದೇ ಚ ಪಶ್ಯಂತಿ ಯುಗ ಪತ್ಪ್ರಜಾಃ ।
ಋತವಃ ಷಟ್ ಸ್ಮೃತಾಃ ಸರ್ವೇ ಸಮಾಗಚ್ಛಂತಿ ಪಂಚಧಾ ॥೩೫॥

ಪರಸ್ಪರಾಸ್ಥಿತಾಹ್ಯೇತೇ ಯುಜ್ಯಂತೇ ಚ ಪರಸ್ಪರಂ ।
ಅಸಂಕರೇಣ ವಿಜ್ಞೇಯಾ ಸ್ತೇಷಾಂ ಯೋಗಸ್ತು ವೈ ಬುಧೈಃ ॥೩೬॥

ಏವಂ ಸಂಕ್ಷಿಪ್ಯ ಕಥಿತಂ ಗ್ರಹಾಣಾಂ ಗಮನಂ ದ್ವಿಜಾಃ ।
ಭಾಸ್ಕರ ಪ್ರಮುಖಾನಾಂ ಚ ಯಥಾದೃಷ್ಟಂ ಯಥಾ ಶ್ರುತಂ॥೩೭॥

ಗ್ರಹಾಧಿಪತ್ಯೇ ಭಗವಾನ್ ಬ್ರಹ್ಮಣಾ ಪದ್ಮಯೋನಿನಾ ।
ಅಭಿಷಿಕ್ತಃ ಸಹಸ್ರಾಂಶೂ ರುದ್ರೇಣ ತು ಯಥಾಗುಹಃ ॥೩೮॥

---

ದಲ್ಲಿ ನೋಡುತ್ತಾರೆ. ಋತುಗಳು ಆರು ಎಂದು ಹೇಳಲ್ಪಟ್ಟಿದೆ. ಅವು ಐದು ಬಗೆಯಾಗಿ ವರ್ಷವೇ ಮುಂತಾದ ಭೇದದಿಂದ ಸುತ್ತುತ್ತವೆ.

೩೬. ಈ ಗ್ರಹವೇ ಮುಂತಾದುವು ಅನ್ಯೋನ್ಯವಾಗಿ ಆಕರ್ಷಿಸುತ್ತಿದ್ದು ಅನ್ಯೋನ್ಯವಾಗಿ ಸೇರಿಕೊಂಡಿರುತ್ತವೆ. ವಿದ್ವಾಂಸರು ಇವುಗಳ ಸಂಬಂಧವನ್ನು ಒಂದೊಂದಕ್ಕೆ ಬೇರೆಯಾದಂತೆ ತಿಳಿಯಬೇಕು.

೩೭. ಎಲೈ ಬ್ರಾಹ್ಮಣರೇ, ಈ ರೀತಿಯಾಗಿ ಸೂರ್ಯನೇ ಮೊದಲಾದ ಗ್ರಹಗಳ ಚಲನೆಯನ್ನು ಕಂಡು ಕೇಳಿದ್ದಕ್ಕೆ ಅನುಸಾರವಾಗಿ ಸಂಗ್ರಹವಾಗಿ ಹೇಳಲಾಗಿದೆ.

೩೮–೩೯. ರುದ್ರನಿಂದ ಷಣ್ಮುಖನು ಹೇಗೋ ಹಾಗೆ, ಬ್ರಹ್ಮನಿಂದ ಸೂರ್ಯನು ಗ್ರಹಗಳಿಗೆ ಅಧಿಪತಿಯಾಗಿ ಪಟ್ಟಾಭಿಷೇಕಮಾಡಿಸಲ್ಪಟ್ಟಿದ್ದಾನೆ. ಆದ್ದರಿಂದ ಬ್ರಹ್ಮನ ಪೂಜೆಯನ್ನು ಮಾಡಬೇಕು. ಸೂರ್ಯ

ತಸ್ಮಾದ್ಗ್ರಹಾರ್ಚನಾ ಕಾರ್ಯಾ ಅಗ್ನೌಹೋಮ್ಯಂ ಯಥಾವಿಧಿ ।
ಆದಿತ್ಯಗ್ರಹ ಪೀಡಾಯಾಂ ಸದ್ಭಿಃ ಕಾರ್ಯಾರ್ಥ ಸಿದ್ಧಯೇ ॥೩೯॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಜ್ಯೋತಿಶ್ಚಕ್ರೇ
ಗ್ರಹಚಲನವಿಚಾರೋ ನಾಮ ಸಪ್ತಪಂಚಾಶತ್ತಮೋಽಧ್ಯಾಯಃ

---

ಗ್ರಹದಿಂದ ಪೀಡೆ ಸಂಭವಿಸಿದರೆ ಸತ್ಪುರುಷರು ತಮ್ಮ ಕಾರ್ಯಸಿದ್ಧಿಗೋಸ್ಕರ ಶಾಸ್ತ್ರೋಕ್ತವಾದ ರೀತಿಯಲ್ಲಿ ಗ್ರಹಗಳ ಪೂಜೆಯನ್ನೂ ಹೋಮವನ್ನೂ ಅಗ್ನಿಯಲ್ಲಿ ಮಾಡಬೇಕು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಜ್ಯೋತಿಶ್ಚಕ್ರದಲ್ಲಿ
ಗ್ರಹಗಳಚಲನವಿಚಾರವೆಂಬ ಐವತ್ತೇಳನೆಯಅಧ್ಯಾಯವು ಮುಗಿದುದು.

ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
ಅಷ್ಟಪಂಚಾಶತ್ತಮೋಽಧ್ಯಾಯಃ

॥ ಋಷಯ ಊಚುಃ ॥

ಅಭ್ಯಷಿಂಚತ್ಕಥಂ ಬ್ರಹ್ಮಾ ಚಾಧಿಪತ್ಯೇ ಪ್ರಜಾಪತಿಃ ।
ದೇವದೈತ್ಯಮುಖಾನ್ ಸರ್ವಾನ್ ಸರ್ವಾತ್ಮಾವದ ಸಾಂಪ್ರತಂ ॥

॥ ಸೂತ ಉವಾಚ ॥

ಗ್ರಹಾಧಿಪತ್ಯೇ ಭಗವಾನಭ್ಯಷಿಂಚ ದ್ದಿವಾಕರಂ ।
ಋಕ್ಷಾಣಾ ಮೋಷಧೀನಾಂಚ ಸೋಮಂ ಬ್ರಹ್ಮಾ ಪ್ರಜಾಪತಿಃ ॥

ಅಪಾಂಚ ವರುಣಂ ದೇವಂ ಧನಾನಾಂ ಯಕ್ಷಪುಂಗವಂ ।
ಆದಿತ್ಯಾನಾಂ ತಥಾ ವಿಷ್ಣುಂ ವಸೂನಾಂ ಪಾವಕಂ ತಥಾ ॥ ೩ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಐವತ್ತೆಂಟನೆಯ ಅಧ್ಯಾಯವು.

ಋಷಿಗಳು ಹೇಳಿದರು. ಪ್ರಜೆಗಳಿಗೆಲ್ಲರಿಗೂ ಅಧಿಪತಿಯಾದ ಬ್ರಹ್ಮನು, ದೇವತೆಗಳು ಮತ್ತು ಅಸುರರೇ ಮೊದಲಾದವರನ್ನೆಲ್ಲನ್ನೂ ಅಧಿಪತಿಗಳನ್ನಾಗಿ ಮಾಡಿದ ಬಗೆಯನ್ನು ಸರ್ವವನ್ನೂ ತಿಳಿದಿರುವ ತಾವು ಹೇಳಬೇಕು.

೧-೧೦. ಪೂಜ್ಯನಾದ ಮತ್ತು ಪ್ರಜೆಗಳಿಗೆಲ್ಲರಿಗೂ ಅಧಿಪತಿಯಾದ ಬ್ರಹ್ಮನು ಸೂರ್ಯನನ್ನು ಗ್ರಹಗಳ ಅಧಿಪತಿಯಾನ್ನಾಗಿಯೂ, ಹಾಗೆಯೇ ನಕ್ಷತ್ರಗಳಿಗೆ ಮತ್ತು ವನಸ್ಪತಿಗಳಿಗೆ ಚಂದ್ರನನ್ನು ಅಧಿಪತಿಯನ್ನಾಗಿಯೂ, ನೀರಿಗೆ ವರುಣ ದೇವತೆಯನ್ನೂ, ಐಶ್ವರ್ಯಕ್ಕೆ ಯಕ್ಷ ಶ್ರೇಷ್ಠನಾದ ಕುಬೇರನನ್ನೂ, ಆದಿತ್ಯದೇವತೆಗಳಿಗೆ ವಿಷ್ಣುವನ್ನೂ, ದ್ರವ್ಯಗಳಿಗೆ ಅಗ್ನಿಯನ್ನೂ, ಪ್ರಜಾಪತಿ ದೇವತೆಗಳಿಗೆ ದಕ್ಷನನ್ನೂ, ದೇವತೆಗಳಿಗೆ ಇಂದ್ರನನ್ನೂ, ದೈತ್ಯರೂ ಮತ್ತು ದಾನವರೆಂಬ ರಾಕ್ಷಸರಿಗೆ ದೈತ್ಯ ಶ್ರೇಷ್ಠನಾದ ಪ್ರಹ್ಲಾದನನ್ನೂ, ಪಿತೃದೇವತೆಗಳಿಗೆ ಯಮಧರ್ಮ ರಾಜನನ್ನೂ

ಪ್ರಜಾಪತೀನಾಂ ದಕ್ಷಂ ಚ ಮರುತಾಂ ಶಕ್ರಮೇವ ಚ ।
ದೈತ್ಯಾನಾಂ ದಾನವಾನಾಂ ಚ ಪ್ರಹ್ಲಾದಂ ದೈತ್ಯ ಪುಂಗವಂ ॥ ೪ ॥
ಧರ್ಮಂ ಪಿತೃ ಣಾಮಧಿಪಂ ನಿಋೃತಿಂ ಪಿಶಿತಾಶಿನಾಂ ।
ರುದ್ರಂ ಪಶೂನಾಂ ಭೂತಾನಾಂ ನಂದಿನಾಂ ಗಣನಾಯಕಂ ॥ ೫ ॥
ವೀರಾಣಾಂ ವೀರಭದ್ರಂ ಚ ಪಿಶಾಚಾನಾಂ ಭಯಂಕರಂ ।
ಮಾತೃಾಣಾಂ ಚೈವ ಚಾಮುಂಡಾಂ ಸರ್ವದೇವ ನಮಸ್ಕೃತಾಂ ॥
ರುದ್ರಾಣಾಂ ದೇವದೇವೇಶಂ ನೀಲಲೋಹಿತ ಮೀಶ್ವರಂ ।
ವಿಘ್ನಾನಾಂ ವ್ಯೋಮಜಂ ದೇವಂ ಗಜಾಸ್ಯಂ ತು ವಿನಾಯಕಂ॥ ೭ ॥
ಸ್ತ್ರೀಣಾಂ ದೇವೀ ಮುಮಾದೇವೀಂ ವಚಸಾಂ ಚ ಸರಸ್ವತೀಂ ।
ವಿಷ್ಣುಂ ಮಾಯಾವಿನಾಂ ಚೈವ ಸ್ವಾತ್ಮಾನಂ ಜಗತಾಂ ತಥಾ ॥ ೮ ॥
ಹಿಮವಂತಂ ಗಿರೀಣಾಂ ತು ನದೀನಾಂ ಚೈವ ಜಾಹ್ನವೀಂ ।
ಸಮುದ್ರಾಣಾಂ ಚ ಸರ್ವೇಷಾ ಮಧಿಪಂ ಪಯಸಾಂ ನಿಧಿಂ ॥ ೯ ॥
ವೃಕ್ಷಾಣಾಂ ಚೈವ ಚಾಶ್ವತ್ಥಂ ಪ್ಲಕ್ಷಂ ಚ ಪ್ರಪಿತಾಮಹಃ ॥೧೦॥

---

ರಾಕ್ಷಸರಿಗೆ ನಿಋೃತಿ, ಎಂಬುವನನ್ನೂ, ಪಶುಗಳಿಗೂ ಮತ್ತು ಭೂತಗಳಿಗೂ ರುದ್ರನನ್ನೂ, ನಂದಿಗಳಿಗೆ ಗಣಪತಿಯನ್ನೂ, ವೀರರಿಗೂ ಮತ್ತು ಪಿಶಾಚಿಗಳಿಗೂ, ಭಯಂಕರನಾದ ವೀರಭದ್ರನನ್ನೂ, ಮಾತೃ ದೇವತೆಗಳಿಗೆ ಎಲ್ಲಾ ದೇವತೆಗಳಿಂದಲೂ ನಮಸ್ಕರಿಸಲ್ಪಟ್ಟ ಚಾಮುಂಡಾಂಬಿಕೆಯನ್ನೂ, ರುದ್ರದೇವತೆಗಳಿಗೆ ದೇವತೆಗಳಿಗೆಲ್ಲರಿಗೂ ಒಡೆಯನಾದ ಈಶ್ವರನನ್ನೂ, ವಿಘ್ನಗಳಿಗೆ ಶಿವಪುತ್ರನೂ ಗಜಮುಖನೂ ದೇವನೂ ಆದ ಗಣಪತಿಯನ್ನೂ, ಸ್ತ್ರೀಯರಿಗೆ ಪಾರ್ವತೀದೇವಿಯನ್ನೂ, ಮಾತುಗಳಿಗೆ ಸರಸ್ವತಿಯನ್ನೂ, ಕಪಟವುಳ್ಳವರಿಗೆ ವಿಷ್ಣುವನ್ನೂ, ಪ್ರಪಂಚಕ್ಕೆ ತನ್ನನ್ನೂ, ಪರ್ವತಗಳಿಗೆ ಹಿಮವತ್ಪರ್ವತವನ್ನೂ, ನದಿಗಳಿಗೆ ಗಂಗೆಯನ್ನೂ, ಎಲ್ಲಾ ಸಮುದ್ರಗಳಿಗೂ, ಸಾಗರವನ್ನೂ, ಗಿಡ ಮರಗಳಿಗೆಲ್ಲಕ್ಕೂ ಅಶ್ವತ್ಥ ಮತ್ತು ಆಲದ ಮರಗಳನ್ನೂ ಅಧಿಪತಿಗಳನ್ನಾಗಿ ಪಟ್ಟಾಭಿಷೇಕ ಮಾಡಿರುವನು.

ಗಂಧರ್ವ ವಿದ್ಯಾಧರ ಕಿನ್ನರಾಣಾಂ ।
ಈಶಂ ಪುನಶ್ಚಿತ್ರರಥಂ ಚಕಾರ ।
ನಾಗಾಧಿಪಂ ವಾಸುಕಿ ಮುಗ್ರವೀರ್ಯಂ ।
ಸರ್ಪಾಧಿಪಂ ತಕ್ಷಕ ಮುಗ್ರವೀರ್ಯಂ ॥೧೧॥

ದಿಗ್ವಾರಣಾನಾಮ ಧಿಪಂ ಚಕಾರ ।
ಗಜೇಂದ್ರ ಮೈರಾವತ ಮುಗ್ರವೀರ್ಯಂ ॥
ಸುಪರ್ಣಮೀಶಂ ಪತತಾ ಮಥಾಶ್ವ ।
ರಾಜಾನ ಮುಚ್ಚೈಃ ಶ್ರವಸಂ ಚಕಾರ ॥೧೨॥

ಸಿಂಹಂ ಮೃಗಾಣಾಂ ವೃಷಭಂ ಗವಾಂ ಚ ।
ಮೃಗಾಧಿಪಾನಾಂ ಶರಭಂ ಚಕಾರ ॥
ಸೇನಾಧಿಪಾನಾಂ ಗುಹಮಪ್ರಮೇಯಂ ।
ಶ್ರುತಿಸ್ಮೃತೀನಾಂ ಲ (ನ) ಕುಲೀಶಮೀಶಂ ॥೧೩॥

---

೧೧. ಬ್ರಹ್ಮನು ಗಂಧರ್ವರು, ವಿದ್ಯಾಧರರೂ ಮತ್ತು ಕಿನ್ನರರೆಂಬ ದೇವತೆಗಳ ಗುಂಪುಗಳಿಗೆ ಚಿತ್ರರಥನನ್ನೂ, ಹೆಚ್ಚು ಬಲಶಾಲಿಯಾದ ವಾಸುಕಿಯನ್ನು ನಾಗಗಳೆಂಬ ಸರ್ಪಗಳ ಗುಂಪಿಗೂ, ಬಲಿಷ್ಠನಾದ ತಕ್ಷಕನನ್ನು ಸರ್ಪಗಳಿಗೆ ಅಧಿಪತಿಯನ್ನಾಗಿಯೂ, ಮಾಡಿದನು.

೧೨. ಬ್ರಹ್ಮನು ಹೆಚ್ಚು ಬಲವುಳ್ಳ ಗಜಶ್ರೇಷ್ಠವಾದ ಐರಾವತವನ್ನು ದಿಗ್ಗಜಗಳಿಗೆ ಅಧಿಪತಿಯನ್ನಾಗಿಯೂ, ಪಕ್ಷಿಗಳಿಗೆ ಗರುಡನನ್ನೂ, ಕುದರೆಗಳಿಗೆ ಉಚ್ಚೈಃ ಶ್ರವಸ್ಸನ್ನೂ ಅಧಿಪತಿಯನ್ನಾಗಿ ಮಾಡಿದನು.

೧೩. ಬ್ರಹ್ಮನು ಮೃಗಗಳಿಗೆ ಸಿಂಹವನ್ನೂ, ಹಸುಗಳಿಗೆ ಶ್ರೇಷ್ಠವಾದ ಎತ್ತನ್ನೂ, ಮೃಗಗಳಿಗೆ ಅಧಿಪತಿಯನ್ನಾಗಿ ಶರಭವೆಂಬ ಎಂಟು ಕಾಲುಳ್ಳ ಮೃಗವನ್ನೂ, ಸೇನಾಧಿಪತಿಗಳಿಗೆ ಪ್ರಮಾಣಗಳಿಗೆ ಸಿಕ್ಕದ ಷಣ್ಮುಖನನ್ನೂ, ಶ್ರುತಿಸ್ಮೃತಿಗಳಿಗೆ ಈಶ್ವರಾವತಾರವಾದ ಲ (ನ) ಕುಲೀಶನನ್ನೂ, ಅಧಿಪತಿಯನ್ನಾಗಿ ಮಾಡಿದನು.

ಅಭ್ಯಷಿಂಚ ತ್ಸುಧರ್ಮಾಣಂ ತಥಾ ಶಂಖಪದಂ ದಿಶಾಂ ।
ಕೇತುಮಂತಂ ಕ್ರಮೇಣೈವ ಹೇಮ ರೋಮಾಣ ಮೇವಚ ॥೧೪॥

ಪೃಥಿವ್ಯಾಂ ಪೃಥುಮೀಶಾನಂ ಸರ್ವೇಷಾಂ ತು ಮಹೇಶ್ವರಂ ।
ಚತುರ್ಮೂರ್ತಿಷು ಸರ್ವಜ್ಞಂ ಶಂಕರಂ ವೃಷಭಧ್ವಜಂ ॥೧೫॥

ಪ್ರಸಾದಾದ್ಭಗವಚ್ಛಂಭೋ ಶ್ಚಾಭ್ಯಷಿಂಚ ದ್ಯಥಾಕ್ರಮಂ ।
ಪುರಾಽಭಿಷಿಚ್ಯ ಪುಣ್ಯಾತ್ಮಾ ರರಾಜ ಭುವನೇಶ್ವರಃ ॥೧೬॥

ಏತದ್ವೋ ವಿಸ್ತರೇಣೈವ ಕಥಿತಂ ಮುನಿಪುಂಗವಾಃ ।
ಅಭಿಷಿಕ್ತಾಸ್ತತಸ್ತ್ವೇತೇ ವಿಶಿಷ್ಟಾ ವಿಶ್ವಯೋನಿನಾ ॥೧೭॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಸೂರ್ಯಾದ್ಯಭಿಷೇಕ ಕಥನಂ ನಾಮ ಅಷ್ಟ ಪಂಚಾಶತ್ತಮೋಽಧ್ಯಾಯಃ

---

೧೪. ಅವನು ಪೂರ್ವ ಮೊದಲಾದ ದಿಕ್ಕುಗಳ ಕ್ರಮಕ್ಕನುಸಾರವಾಗಿ ಸುಧರ್ಮನನ್ನೂ, ಶಂಖಪದನನ್ನೂ, ಕೇತುಮಂತನನ್ನೂ ಮತ್ತು ಹೇಮ ರೋಮನನ್ನೂ, ಅಧಿಪತಿಯನ್ನಾಗಿ ನಿಯಮಿಸಿದನು.

೧೫. ಅವನು ಎಲ್ಲವಸ್ತುಗಳಿಗೂ ಅಧಿಪತಿಯಾದ, ಪ್ರಂಚದಲ್ಲೆಲ್ಲ ಬಹು ದೊಡ್ಡವಸ್ತುವಾದ, ನಾಲ್ಕು ರೂಪಗಳಲ್ಲಿಯೂ ಸುಖವನ್ನುಂಟು ಮಾಡುವ ಸರ್ವವನ್ನೂ ತಿಳಿದಿರುವ ಮತ್ತು ಧರ್ಮವನ್ನೇ ಧ್ವಜವನ್ನಾಗಿ ಮಾಡಿಕೊಂಡಿರುವ ಮಹೇಶ್ವರನನ್ನು ಅಧಿಪತಿಯನ್ನಾಗಿ ಮಾಡಿದನು.

೧೬–೧೭. ಬ್ರಹ್ಮನು ಪೂಜ್ಯನಾದ ಈಶ್ವರನ ಅನುಗ್ರಹದಿಂದಲೇ ಹಿಂದೆ ಹೇಳಿದವರಿಗೆಲ್ಲರಿಗೂ ಕ್ರಮವಾಗಿ ಆಯಾಸ್ಥಾನಗಳಲ್ಲಿ ಪಟ್ಟಾಭಿಷೇಕ ಮಾಡಿದನು. ಈ ರೀತಿಯಾಗಿ ಹಿಂದೆ ಪಟ್ಟಾಭಿಷೇಕಮಾಡಿ ಪುಣ್ಯಸ್ವರೂಪನಾದ ಮತ್ತು ಪ್ರಪಂಚಕ್ಕೆ ಒಡೆಯನಾದ ಬ್ರಹ್ಮನು ಪ್ರಕಾಶಿಸಿದನು. ಎಲೈ ಋಷಿಶ್ರೇಷ್ಟರೇ, ಕೊನೆಗೆ ಸೃಷ್ಟಿಕರ್ತನಾದ ಬ್ರಹ್ಮನು ಇವರೆಲ್ಲರಿಗೂ ಒಟ್ಟಿಗೆ ಪಟ್ಟಾಭಿಷೇಕ ಮಾಡಿದನೆಂಬ ವಿಚಾರವನ್ನು ವಿಸ್ತಾರವಾಗಿ ಹೇಳಿದೇನೆ.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಸೂರ್ಯನೇ ಮೊದಲಾದವರ ಅಭಿಷೇಕವಿಚಾರವೆಂಬ ಐವತ್ತೆಂಟನೆಯ ಅಧ್ಯಾಯವು ಮುಗಿದುದು.

अथ श्री लिंगमहापुराणे पूर्वभागे
ಏಕೋನ ಷಷ್ಟಿತಮೋऽಧ್ಯಾಯಃ

॥ ಸೂತ ಉವಾಚ ॥

ಏತಚ್ಛ್ರುತ್ವಾ ತು ಮುನಯಃ ಪುನಸ್ತಂ ಸಂಶಯಾನ್ವಿತಾಃ ।
ಪಪ್ರಚ್ಛುರುತ್ತರಂ ಭೂಯಸ್ತದಾ ತೇ ರೋಮಹರ್ಷಣಂ ॥ ೧ ॥

॥ ಋಷಯ ಊಚುಃ ॥

ಯದೇತದುಕ್ತಂ ಭವತಾ ಸೂತೇಹ ವದತಾಂ ವರ ।
ಏತದ್ವಿಸ್ತರತೋ ಬ್ರೂಹಿ ಜ್ಯೋತಿಷಾಂ ಚ ವಿನಿರ್ಣಯಂ ॥ ೨ ॥

ಶ್ರುತ್ವಾ ತು ವಚನಂ ತೇಷಾಂ ತದಾ ಸೂತಃ ಸಮಾಹಿತಃ ।
ಉವಾಚ ಪರಮಂ ವಾಕ್ಯಂ ತೇಷಾಂ ಸಂಶಯ ನಿರ್ಣಯೇ ॥ ೩ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಐವತ್ತೊಂಬತ್ತನೆಯ ಅಧ್ಯಾಯವು.

೧. ಸೂತನು ಹೇಳಿದನು: ಋಷಿಗಳು ಈ ವಿಷಯನ್ನು ಕೇಳಿದ ಮೇಲೂ, ಪುನಃ ಸಂಶಯದಿಂದ ಕೂಡಿದವರಾಗಿ, ರೋಮಾಂಚವನ್ನುಂಟು ಮಾಡುವ ಅವನ ಉತ್ತರವನ್ನು ಕೇಳಬೇಕೆಂದು ಅಭಿಪ್ರಾಯದಿಂದ ಪ್ರಶ್ನೆಯನ್ನು ಮಾಡಿದರು.

೨. ಋಷಿಗಳು ಹೇಳಿದರು: ಮಾತನಾಡುವವರಲ್ಲಿ ಶ್ರೇಷ್ಠನಾದ ಸೂತನೇ, ಹಿಂದೆ ಹೇಳಿದ ವಿಷಯವನ್ನೇ ವಿಸ್ತಾರವಾಗಿಯೂ, ಜ್ಯೋತಿಗಳ ವಿಚಾರದಲ್ಲಿ ನಿಷ್ಕರ್ಷೆಯಾಗಿಯೂ, ತಾವು ಹೇಳಬೇಕು.

೩. ಆಗ ಅವರ ಮಾತನ್ನು ಕೇಳಿ ಸೂತನು ಏಕಾಗ್ರಚಿತ್ತನಾಗಿ ಅವರ ಸಂಶಯಪರಿಹಾರಕ್ಕಾಗಿ ಶ್ರೇಷ್ಠವಾದ ಮಾತುಗಳನ್ನು ಹೇಳಿದನು.



25

ಅಸ್ಮಿನ್ನರ್ಥೇ ಮಹಾಪ್ರಾಜ್ಞೈರ್ಯದುಕ್ತಂ ಶಾಂತಬುದ್ಧಿಭಿಃ ।
ಏತದ್ವೋಽಹಂ ಪ್ರವಕ್ಷ್ಯಾಮಿ ಸೂರ್ಯಾ ಚಂದ್ರ ಮಸೋರ್ಗತಿಂ ॥

ಯಥಾ ದೇವ ಗೃಹಾಣೀಹ ಸೂರ್ಯ ಚಂದ್ರಾದಯೋ ಗ್ರಹಾಃ ।
ಅತಃ ಪರಂ ತು ತ್ರಿವಿಧ ಮಗ್ನೇ ರ್ವಕ್ಷ್ಯೇ ಸ ಮುದ್ಭವಂ ॥ ೫ ॥

ದಿವ್ಯಸ್ಯ ಭೌತಿಕಸ್ಯಾಗ್ನೇ ರಥೋಽಗ್ನೇಃ ಪಾರ್ಥಿವಸ್ಯ ಚ ।
ವ್ಯುಷ್ಟಾಯಾಂ ತು ರಜನ್ಯಾಂ ಚ ಬ್ರಹ್ಮಣೋಽ ವ್ಯಕ್ತ ಜನ್ಮನಃ॥ ೬ ॥

ಅವ್ಯಾಕೃತಮಿದಂ ತ್ವಾಸೀ ನ್ನೈ ಶೇನ ತಮಸಾ ವೃತಂ ।
ಚತು ರ್ಭಾಗಾವ ಶಿಷ್ಟೇಽಸ್ಮಿನ್ ಲೋಕೇ ನಷ್ಟೇ ವಿಶೇಷತಃ ॥ ೭ ॥

ಸ್ವಯಂ ಭೂರ್ಭಗವಾಂಸ್ತತ್ರ ಲೋಕ ಸರ್ವಾರ್ಥ ಸಾಧಕಃ ।
ಖದ್ಯೋತ ವತ್ಸ ವ್ಯಚರದಾ ವಿರ್ಭಾವ ಚಿಕೀರ್ಷಯಾ ॥ ೮ ॥

---

೪. ಈ ವಿಚಾರದಲ್ಲಿ ಶಾಂತಸ್ವಭಾವದವರೂ, ಮಹಾಜ್ಞಾನಿಗಳೂ, ಆದ ವ್ಯಾಸಾದಿಮಹರ್ಷಿಗಳಿಂದ ಹೇಳಲ್ಪಟ್ಟ ಸೂರ್ಯ ಮತ್ತು ಚಂದ್ರರ ಚಲನ ವಿಚಾರವನ್ನು ನಾನು ನಿಮಗೆ ಹೇಳುತ್ತೇನೆ.

೫. ಸೂರ್ಯ ಚಂದ್ರರೇ ಮೊದಲಾದ ಗ್ರಹಗಳು ದೇವತೆಗಳಿಗೆ ಆಶ್ರಯಸ್ಥಾನವಾಗಿರುತ್ತವೆ. ಎಂಬುದನ್ನೂ, ಅನಂತರ ಅಗ್ನಿಗೆ ಮೂರು ವಿಧವಾದ ಉತ್ಪತ್ತಿಯನ್ನೂ, ಹೇಳುವೆನು.

೬-೮. ದೇವಸಂಬಂಧವಾದ ಮತ್ತು ಭೌತಿಕವೂ ಆದ, ಅನಂತರ ಭೂಮಿ ಸಂಬಂಧವಾದ, ಅಗ್ನಿಯ ಉತ್ಪತ್ತಿಗೆ ಮುಂಚೆ, ಅವ್ಯಕ್ತವಾದ ಸ್ವರೂಪವುಳ್ಳ ಬ್ರಹ್ಮನ ದೆಸೆಯಿಂದ, ರಾತ್ರಿಯು ಮುಗಿಯುವ ಹೊತ್ತಿನಲ್ಲಿ ಈ ಪ್ರಪಂಚವು ರಾತ್ರಿ ಸಂಬಂಧವಾದ ಕತ್ತಲಿನಿಂದ ಸ್ಪಷ್ಟವಾಗಿ ಸೃಷ್ಟಿಸಲ್ಪಟ್ಟು ವಿಸ್ತಾರವಾಗಿ ಕಾಣುತ್ತಿರಲಿಲ್ಲ. ನಾಲ್ಕರಲ್ಲಿ ಒಂದು ಭಾಗ ಮಾತ್ರ ಉಳಿದು ಈ ಲೋಕವು ವಿಶೇಷವಾಗಿ ನಾಶಹೊಂದಿರಲು, ಆಗ ಪೂಜ್ಯನಾದ ಮತ್ತು ಲೋಕದಲ್ಲಿ ಎಲ್ಲಾ ಕಾರ್ಯಸಿದ್ಧಿಯನ್ನೂ ಉಂಟುಮಾಡಬಲ್ಲ ಬ್ರಹ್ಮನು ಪ್ರಪಂಚವನ್ನು ತನ್ನಿಂದ ಹೊರಗೆ ಪ್ರಕಾಶಪಡಿಸುವುದಕ್ಕಾಗಿ ಉರಿಬಿಸಿಲಿನಂತೆ, ಮಿಣುಕು ಹುಳುವಿನಂತೆ, ಸಂಚರಿಸಿದನು.

ಸೋಽಗ್ನಿಂ ಸೃಷ್ಟ್ವಾಽಥ ಲೋಕಾದೌ ಪೃಥಿವೀಜಲ ಸಂಶ್ರಿತಃ ।
ಸಂಹೃತ್ಯ ತತ್ಪ್ರಕಾಶಾರ್ಥಂ ತ್ರಿಧಾ ವ್ಯಭಜದೀಶ್ವರಃ ॥ ೯ ॥

ಪವನೋ ಯಸ್ತು ಲೋಕೇಽಸ್ಮಿನ್ ಪಾರ್ಥಿವೋ ವಹ್ನಿರುಚ್ಯತೇ ।
ಯಶ್ಚಾ ಸೌ ತಪತೇ ಸೂರ್ಯೇ ಶುಚಿರಗ್ನಿಸ್ತು ಸ ಸ್ಮೃತಃ ॥೧೦॥

ವೈದ್ಯುತೋಽಬ್ಜಸ್ತು ವಿಜ್ಞೇಯ ಸ್ತೇಷಾಂ ವಕ್ಷ್ಯೇ ತು ಲಕ್ಷಣಂ ।
ವೈದ್ಯುತೋ ಜಾಠರಃ ಸೌರೋ ವಾರಿಗರ್ಭಾ ಸ್ತ್ರಯೋಽಗ್ನಯಃ ॥

ತಸ್ಮಾದಾಪಃ ಪಿಬನ್ ಸೂರ್ಯೋ ಗೋಭಿರ್ದೀಪ್ಯತ್ಯಸೌ ವಿಭುಃ ।
ಜಲೇ ಚಾಬ್ಜಃ ಸಮಾವಿಷ್ಟೋ ನಾದ್ಭಿರಗ್ನಿಃ ಪ್ರಶಾಮ್ಯತಿ ॥೧೨॥

ಮಾನವಾನಾಂ ಚ ಕುಕ್ಷಿಸ್ಥೋ ನಾದ್ಭಿಃ ಶಾಮ್ಯತಿ ಪಾವಕಃ ।
ಅರ್ಚಿಷ್ಮಾನ್ಪವನಃ ಸೋಽಗ್ನಿ ರ್ನಿಷ್ಪ್ರಭೋ ಜಾಠರಃಸ್ಮೃತಃ ॥೧೩॥

---

೯. ಈಶ್ವರನು ಪ್ರಪಂಚದ ಸೃಷ್ಟಿಯ ಪ್ರಾರಂಭದಲ್ಲಿ ಭೂಮಿಯನ್ನೂ, ನೀರನ್ನೂ ಆಶ್ರಯಿಸಿದವನಾಗಿ ಅಗ್ನಿಯನ್ನು ಸೃಷ್ಟಿಮಾಡಿ, ಭೂಮಿ ಮತ್ತು ನೀರನ್ನು ನಾಶಮಾಡಿ, ಬೆಳಕಿಗೋಸ್ಕರ ಆ ಅಗ್ನಿಯನು ಮೂರು ವಿಧವಾಗಿ ವಿಭಾಗಮಾಡಿದನು.

೧೦. ಈ ಲೋಕದಲ್ಲಿ ಭೂಮಿಗೆ ಸಂಬಂಧಪಟ್ಟ ಅಗ್ನಿಯು "ಪಾರ್ಥಿವ" ಅಗ್ನಿಯೆಂದು ಹೇಳಲ್ಪಡುತ್ತದೆ. ಸೂರ್ಯನಿಂದ ಜ್ವಲಿಸಲ್ಪಡುವ ಅಗ್ನಿಯು "ಶುಚಿ" ಅಗ್ನಿಯೆಂದು ಕರೆಯಲ್ಪಡುತ್ತದೆ.

೧೧. ಅವುಗಳ ಮಧ್ಯೆ ನೀರಿನಿಂದ ಹುಟ್ಟಿದ ಅಗ್ನಿಯನ್ನು "ವೈದ್ಯುತ" ಎಂದು ತಿಳಿಯಬೇಕು. ಇವುಗಳ ಲಕ್ಷಣಗಳನ್ನು ಮುಂದೆ ಹೇಳುವೆನು. ವೈದ್ಯುತ ಜಾಠರ, ಸೌರ, ಎಂಬ ಈ ಅಗ್ನಿಗಳೊಳಗೆ ಮೂರು ಬಗೆಯು ಇದೆ.

೧೨. ಇದರಿಂದ ನೀರನ್ನು ಪಾನಮಾಡಿ ವ್ಯಾಪಿಯಾದ ಸೂರ್ಯನು ಕಿರಣಗಳಿಂದ ಜ್ವಲಿಸುತ್ತಾನೆ. ನೀರಿನಿಂದಲೇ ಹುಟ್ಟಿದ ಅಗ್ನಿಯು, ನೀರಿನಲ್ಲೇ ಸೇರಿಕೊಂಡಿರಲಾಗಿ ನೀರಿನಿಂದ ನಾಶವಾಗುವುದಿಲ್ಲ.

೧೩. ಮನುಷ್ಯರ ಜಠರದಲ್ಲಿರುವ ಅಗ್ನಿಯು ನೀರಿನಿಂದ ನಾಶವಾಗಲಾರದು. ಭೂಮಿಗೆ ಸಂಬಂಧಪಟ್ಟ, ಆದರೆ ಪ್ರಕಾಶವಿಲ್ಲದ ಅಗ್ನಿಯು "ಜಾಠರಾಗ್ನಿ" ಎಂದು ಹೇಳಲ್ಪಡುತ್ತದೆ.

ಯಸ್ಮಾದ್ಯಂ ಮಂಡಲೀ ಶುಕ್ಲೀ ನಿರೂಷ್ಮಾ ಸಂಪ್ರಜಾಯತೇ ।
ಪ್ರಭಾ ಸೌರೀ ತು ಪಾದೇನ ಹ್ಯಸ್ತಂ ಯಾತೇ ದಿವಾಕರೇ ॥೧೪॥
ಅಗ್ನಿಮಾವಿಶತೇ ರಾತ್ರೌ ತಸ್ಮಾದ್ದೂರಾತ್ಪ್ರಕಾಶತೇ ।
ಉದ್ಯಂತಂ ಚ ಪುನಃ ಸೂರ್ಯ ಮೌಷ್ಣ್ಯಮಗ್ನೇಃ ಸಮಾವಿಶೇತ್ ॥
ಪಾದೇನ ಪಾರ್ಥಿವಸ್ಯಾಗ್ನೇಃ ತಸ್ಮಾದಗ್ನಿ ಸ್ತಪತ್ಯಸೌ ।
ಪ್ರಕಾಶೋಷ್ಣ ಸ್ವರೂಪೇ ಚ ಸೌರಾಗ್ನೇ ಯೇ ತು ತೇಜಸೀ ॥೧೬॥
ಪರಸ್ಪರಾನು ಪ್ರವೇಶಾ ದಾಪ್ಯಾಯೇತೇ ಪರಸ್ಪರಂ ।
ಉತ್ತರೇ ಚೈವ ಭೂಮ್ಯರ್ಧೇ ತಥಾ ಹ್ಯಗ್ನಿಶ್ಚ ದಕ್ಷಿಣೇ ॥೧೭॥
ಉತ್ತಿಷ್ಠತಿ ಪುನಃ ಸೂರ್ಯಃ ಪುನರ್ವೈ ಪ್ರವಿಶತ್ಯಪಃ ।
ತಸ್ಮಾತ್ತಾಮ್ರಾ ಭವಂತ್ಯಾಪೋ ದಿವಾರಾತ್ರಿ ಪ್ರವೇಶನಾತ್ ॥೧೮॥

---

೧೪–೧೬. ಸೂರ್ಯನು ಅಸ್ತಮಿಸಲು ಇವನ ಮಂಡಲವು ಬೆಳ್ಳಗೂ, ಸುಡುವ ಶಕ್ತಿ ಇಲ್ಲದ್ದೂ ಆಗುತ್ತದೆ. ಇವನ ಕಾಲುಭಾಗ ತೇಜಸ್ಸು ರಾತ್ರಿಯಲ್ಲಿ ಅಗ್ನಿಯನ್ನು ಸೇರುತ್ತದೆ. ಆದ್ದರಿಂದ ಬಹುದೂರ ಪ್ರಕಾಶವನ್ನು ಬೀರುತ್ತದೆ, ಪುನಃ ಸೂರ್ಯನು ಉದಯಿಸುವಾಗ ಅಗ್ನಿಯ ಶಾಖ ಸ್ವಭಾವವು ಸೂರ್ಯನನ್ನು ಸೇರುತ್ತದೆ. ಭೂಮಿಗೆ ಸಂಬಂಧಪಟ್ಟ ಅಗ್ನಿಗೆ ಕಾಲುಭಾಗ ಶಾಖವೂ ಸೇರಿರುವುದರಿಂದ ಅಗ್ನಿ ಸುಡಬಲ್ಲದು. ಸೂರ್ಯನ ಮತ್ತು ಅಗ್ನಿಗೆ ಸಂಬಂಧಪಟ್ಟ ತೇಜಸ್ಸು, ಪ್ರಕಾಶ ಮತ್ತು ಸುಡುವ ಸ್ವಭಾವವುಳ್ಳದ್ದಾಗಿದೆ.

೧೭–೨೦. ಭೂಮಿಯ ಉತ್ತರಾರ್ಧದಲ್ಲಿ ಸೂರ್ಯನು ಮತ್ತು ದಕ್ಷಿಣಾರ್ಧದಲ್ಲಿ ಅಗ್ನಿಯೂ, ಪರಸ್ಪರ ತೇಜಸ್ಸಿನಿಂದ ಸೇರುವುದರಿಂದ ಎರಡೂ ಪ್ರಕಾಶಮಾನವಾಗಿವೆ. ಸೂರ್ಯನು ಪುನಃ ಹುಟ್ಟುತ್ತಾನೆ. ಪುನಃ ನೀರನ್ನು ಸೇರುತ್ತಾನೆ. ಆದ್ದರಿಂದ ಹಗಲೂರಾತ್ರಿ ಸೂರ್ಯನ ತೇಜಸ್ಸಿನ ಸೇರುವಿಕೆಯಿಂದ ನೀರು ಕೆಂಪಗಿರುತ್ತದೆ. ಪುನಃ ಸೂರ್ಯನು ಅಸ್ತಮಿಸುತ್ತಾನೆ. ಹಗಲಲ್ಲಿ ನೀರನ್ನು ಸೇರುತ್ತಾನೆ. ಆದ್ದರಿಂದ

ಅಸ್ತಂ ಯಾತಿ ಪುನಃ ಸೂರ್ಯೇ ಅಹರ್ವೈ ಪ್ರವಿಶತ್ಯಪಃ ।
ತಸ್ಮಾನ್ನಕ್ತಂ ಪುನಃ ಶುಕ್ಲಾ ಆಪೋ ದೃಶ್ಯಂತಿ ಭಾಸ್ವರಾಃ ॥೧೯॥

ಏತೇನ ಕ್ರಮಯೋಗೇನ ಭೂಮ್ಯರ್ಧೇ ದಕ್ಷಿಣೋತ್ತರೇ ।
ಉದಯಾಸ್ತಮನೇ ನಿತ್ಯ ಮಹೋರಾತ್ರಂ ವಿಶತ್ಯಪಃ ॥೨೦॥

ಯಚ್ಚಾಸೌ ತಪತೇ ಸೂರ್ಯೋ ಪಿಬನ್ನಂಭೋ ಗಭಸ್ತಿಭಿಃ ।
ಪಾರ್ಥಿವಾಗ್ನಿ ವಿ ಮಿಶ್ರೋಽಸೌ ದಿವ್ಯಃ ಶುಚಿರಿತಿ ಸ್ಮೃತಃ ॥೨೧॥

ಸಹಸ್ರ ಪಾದಸೌ ವಹ್ನಿ ರ್ವೃತ್ತ ಕುಂಭನಿಭಃ ಸ್ಮೃತಃ ।
ಆದತ್ತೇ ಸ ತು ನಾಡೀನಾಂ ಸಹಸ್ರೇಣ ಸಮಂತತಃ ॥೨೨॥

ನಾದೇಯೀ ಶ್ಚೈವ ಸಾಮುದ್ರೀಃ ಕೂಪಾಶ್ಚೈವ ತಥೋ ಘನಾಃ ।
ಸ್ಥಾವರಾ ಜಂಗಮಾ ಶ್ಚೈವ ವಾಪೀ ಕುಲ್ಯಾದಿಕಾ ಅಪಃ ॥೨೩॥

---

ಹಗಲುವೇಳೆ ನೀರು ಬೆಳ್ಳಗೂ ಮತ್ತು ಪ್ರಕಾಶಮಾನವಾಗಿಯೂ ಇರುತ್ತದೆ. ಈ ರೀತಿಯಲ್ಲಿ ಕ್ರಮವಾಗಿ ಭೂಮಿಯ ದಕ್ಷಿಣೋತ್ತರ ಅರ್ಧಭಾಗದಲ್ಲಿ, ನಿತ್ಯವೂ ಉದಯಾಸ್ತಮಯ ಕಾಲಗಳಲ್ಲಿ, ಹಗಲೂ ರಾತ್ರಿ, ಸೂರ್ಯನು ನೀರನ್ನು ಪ್ರವೇಶಿಸುತ್ತಾನೆ.

೨೧. ಸೂರ್ಯನು ತನ್ನ ಕಿರಣಗಳಿಂದ ನೀರನ್ನು ಪಾನಮಾಡಿ ಭೂಸಂಬಂಧವಾದ ಅಗ್ನಿಯಿಂದ ಮಿಶ್ರವಾಗಿರುವುದರಿಂದ "ಶುಚಿ" ಎಂದು ಕರೆಯಲ್ಪಡುತ್ತಾನೆ.

೨೨–೨೬. ಸಾವಿರಾರು ಕಿರಣಗಳುಳ್ಳ ಸೂರ್ಯನು ದುಂಡಗಿರುವ ಗಡಿಗೆಗೆ ಸಮಾನವಾದದ್ದೆಂದು ಹೇಳಲ್ಪಟ್ಟಿದೆ. ಅವನು ತನ್ನ ಸುತ್ತಲೂ ಸಾವಿರಾರು ಕಿರಣಗಳಿಂದ, ನದಿಗಳ ಮತ್ತು ಸಮುದ್ರಗಳ, ಭಾವಿಗಳ ಮತ್ತು ಹರಿಯುವ ಜಲಪೂರ್ಣವಾದ ಹೊಳೆಗಳ ಮತ್ತು ನಿಂತಿರುವ ಕೆರೆ, ಕಟ್ಟೆ, ಮೊದಲಾದುವುಗಳಿಂದ ನೀರನ್ನು ತೆಗೆದುಕೊಳ್ಳುತ್ತಾನೆ. ಅವನ ಸಾವಿರಾರು ಕಿರಣಗಳು ತಣ್ಣಗಿರುವ ಮತ್ತು ಬೆಚ್ಚಗಿರುವ, ಮಳೆಯನ್ನು ಹುಯ್ಯುತ್ತವೆ. ಆ ನಾನೂರು ನಾಡಿಗಳು (ಮತ್ತು) ಅಥವಾ

**ತಸ್ಯ ರಶ್ಮಿ ಸಹಸ್ರಂ ತಚ್ಛೀತವರ್ಷೋಷ್ಣನಿ ಸ್ಸ್ರವಂ ।**
**ತಾಸಾಂ ಚತುಃ ಶತಾ ನಾಡ್ಯೋ ವರ್ಷಂತೇ ಚಿತ್ರ ಮೂರ್ತಯಃ ॥**

**ಭಜನಾ ಶ್ಚೈವ ಮಾಲ್ಯಾಶ್ಚ ಕೇತನಾಃ ಪತನಾಸ್ತಥಾ ।**
**ಅಮೃತಾ ನಾಮತಃ ಸರ್ವಾ ರಶ್ಮಯೋ ವೃಷ್ಟಿ ಸರ್ಜನಾಃ ॥೨೫॥**

**ಹಿಮೋದ್ವಹಾಶ್ಚ ತಾ ನಾಡ್ಯೋ ರಶ್ಮಯಸ್ತ್ರಿಶತಾಃ ಪುನಃ ।**
**ರೇಶಾಮೇಘಾಶ್ಚ ವಾತ್ಸ್ಯಾಶ್ಚ ಹ್ಲಾದಿನ್ಯೋ ಹಿಮ ಸರ್ಜನಾಃ॥ ೨೬॥**

**ಚಂದ್ರಭಾ ನಾಮತಃ ಸರ್ವಾಃ ಪೀತಾಭಾಶ್ಚ ಗಭಸ್ತಯಃ ।**
**ಶುಕ್ಲಾಶ್ಚ ಕಕುಭಾಶ್ಚೈವ ಗಾವೋ ವಿಶ್ವ ಭೃತ ಸ್ತಥಾ ॥೨೭॥**

**ಶುಕ್ಲಾಸ್ತಾ ನಾಮತಃ ಸರ್ವಾಸ್ತ್ರಿ ಶತೀರ್ಘರ್ಮ ಸರ್ಜನಾಃ ।**
**ಸೋಮೋ ಬಿಭರ್ತಿ ತಾಭಿಸ್ತು ಮನುಷ್ಯ ಪಿತೃ ದೇವತಾಃ ॥೨೮॥**

---

ಕಿರಣಗಳು ವಿಚಿತ್ರವಾದ ಸ್ವರೂಪವುಳ್ಳವು, ಮತ್ತು ಮಳೆಗರೆಯು ವಂಥವು. ಹೀಗೆ ಮಳೆಗರೆಯುವ ಕಿರಣಗಳು ಭಜನ, ಮಾಲ್ಯ, ಕೇತನ, ಪತನ,, ಮತ್ತು ಅಮೃತ, ಎಂದು ಬೇರೆಬೇರೆಯಾಗಿ ಕರೆಯುಲ್ಪಡುತ್ತವೆ. ಹಿಮವುಳ್ಳ ಕಿರಣಗಳು ಮುನ್ನೂರು ಬೇರೇ ಇವೆ. ಇವುಗಳು ಹಿಮವನ್ನು ಸುರಿಸುವುವು. ಅವುಗಳಿಗೆ, ಶೇಶ, ಮೇಘ, ವಾತ್ಸ್ಯ, ಹ್ಲಾದಿನೀ, ಎಂದು ಬೇರೆಬೇರೇ ಹೆಸರು ಕೊಡಲ್ಪಟ್ಟಿದೆ.

೨೭. ಹಿಮವನ್ನು ಸುರಿಸುವ ಕಿರಣಗಳು ಚಂದ್ರಭಾ, ಪೀತಾಭಾ, ಶುಕ್ಲ, ಕಕುಭ, ಗೌ, ವಿಶ್ವಭೃತ್, ಎಂದು ಬೇರೆಬೇರೇ ಹೆಸರುಗಳಿಂದ ಕರೆಯಲ್ಪಡುತ್ತವೆ.

೨೮–೨೯. ಶುಕ್ಲ, ಎಂಬ ಹೆಸರುಳ್ಳ ಕಿರಣಗಳು ಬಿಸಿಲನ್ನುಂಟು ಮಾಡುತ್ತವೆ. ಚಂದ್ರಸೂರ್ಯ ಸ್ವರೂಪನಾದ ಈಶ್ವರನು ಮನುಷ್ಯರನ್ನೂ ಪಿತೃದೇವತೆಗಳನ್ನೂ, ಪೋಷಿಸುತ್ತಾನೆ. ಮನುಷ್ಯರನ್ನು ಗಿಡಮೂಲಿಕೆಗಳಿಂದಲೂ, '' ಸ್ವಧೆ '' ಎಂಬ ಮಂತ್ರ ದ್ರವ್ಯದಿಂದ ಪಿತೃದೇವತೆಗಳನ್ನೂ,

ಮನುಷ್ಯಾ ನೌಷಧೇನೇಹ ಸ್ವಧಯಾಚ ಪಿತೄ ನಪಿ ।
ಅಮೃತೇನ ಸುರಾನ್ಸರ್ವಾಂ ಸ್ತ್ರಿಸೃಭಿಸ್ತರ್ಪಯತ್ಯಸೌ ॥೨೯॥

ವಸಂತೇ ಚೈವ ಗ್ರೀಷ್ಮೇ ಚ ಶತೈಃ ಸ ತಪತೇ ತ್ರಿಭಿಃ ।
ವರ್ಷಾ ಸ್ವಥೋ ಶರದಿ ಚ ಚತುರ್ಭಿಃ ಸಂಪ್ರವರ್ಷತಿ ॥೩೦॥

ಹೇಮಂತೇ ಶಿಶಿರೇ ಚೈವ ಹಿಮ ಮುತ್ಸೃಜತೇ ತ್ರಿಭಿಃ ।
ಇಂದ್ರೋ ಧಾತಾ ಭಗಃ ಪೂಷಾ ಮಿತ್ರೋಽಥ ವರುಣೋಽರ್ಯಮಾ ॥೩೧॥

ಅಂಶುರ್ವಿವಸ್ವಾಂ ಸ್ತ್ವಷ್ಟಾ ಚ ಪರ್ಜನ್ಯೋ ವಿಷ್ಣು ರೇವಚ ।
ವರುಣೋ ಮಾಘಮಾಸೇ ತು ಸೂರ್ಯ ಏವತು ಫಾಲ್ಗುನೇ ॥೩೨॥

ಚೈತ್ರೇ ಮಾಸಿ ಭವೇದಂಶು ರ್ಧಾತಾ ವೈಶಾಖ ತಾಪನಃ ।
ಜ್ಯೇಷ್ಠೇ ಮಾಸಿ ಭವೇದಿಂದ್ರ ಆಷಾಢೇ ಚಾರ್ಯಮಾ ರವಿಃ ॥೩೩॥

---

ಅಮೃತದಿಂದ ದೇವತೆಗಳನ್ನೂ, ಹೀಗೆ ಮೂರು ವಿಧಾನಗಳಿಂದ ಅವರಿಗೆ ತೃಪ್ತಿಯನ್ನುಂಟು ಮಾಡುತ್ತಾನೆ.

೩೦. ಅವನು ವಸಂತ ಕಾಲದಲ್ಲಿಯೂ, ಮತ್ತು ಬೇಸಗೆಯ ಕಾಲ ದಲ್ಲಿಯೂ, ಮುನ್ನೂರು ಕಿರಣಗಳಿಂದ ಜ್ವಲಿಸುತ್ತಾನೆ. ಮಳೆಗಾಲದಲ್ಲಿ ಮತ್ತು ಶರತ್ಕಾಲದಲ್ಲಿಯಾದರೋ ನಾನೂರು ಕಿರಣಗಳಿಂದ ಮಳೆಗರೆ ಯುತ್ತಾನೆ.

೩೧. ಅವನು ಹೇಮಂತ ಮತ್ತು ಶಶಿರ ಋತುವಿನಲ್ಲಿ ಮುನ್ನೂರು ಕಿರಣಗಳಿಂದ ಹಿಮವನ್ನು ಸುರಿಸುತ್ತಾನೆ. ಇವನು ಬೇರೆಬೇರೆ ಕಾಲ ಗಳಲ್ಲಿ ಇಂದ್ರ, ಧಾತೃ, ಭಗ, ಪೂಷನ್, ಮಿತ್ರ, ವರುಣ, ಆರ್ಯ ಮನ್, ಎಂಬ ಹೆಸರುಗಳಿಂದ ಕರೆಯಲ್ಪಡುತ್ತಾನೆ.

೩೨-೩೪. ಅಲ್ಲದೆ ಇವನನ್ನು ಅಂಶು, ವಿವಸ್ವಾನ್, ತ್ವಷ್ಟೃ, ಪರ್ಜನ್ಯ, ವಿಷ್ಣು, ಎಂಬ ಹೆಸರುಗಳಿಂದಲೂ, ಕರೆಯುತ್ತಾರೆ. ಮಾಘ ಮಾಸದಲ್ಲಿ ವರುಣನೆಂಬುದಾಗಿಯೂ, ಫಾಲ್ಗುನಮಾಸದಲ್ಲಿ ಸೂರ್ಯ ನೆಂದೂ, ಜ್ಯೇಷ್ಠಮಾಸದಲ್ಲಿ ಇಂದ್ರನೆಂದೂ, ಆಷಾಢಮಾಸದಲ್ಲಿ ಆರ್ಯ

ವಿವಸ್ವಾನ್ ಶ್ರಾವಣೇ ಮಾಸಿ ಪ್ರೋಷ್ಠಪಾದೇ ಭಗಃ ಸ್ಮೃತಃ ।
ಪರ್ಜನ್ಯಾಶ್ವಯುಜೇ ಮಾಸಿ ತ್ವಷ್ಟಾ ವೈ ಕಾರ್ತಿಕೇ ರವಿಃ ॥೩೪॥
ಮಾರ್ಗಶೀರ್ಷೇ ಭವೇ ನ್ಮಿತ್ರಃ ಪೌಷೇ ವಿಷ್ಣುಃ ಸನಾತನಃ ।
ಪಂಚರಶ್ಮಿ ಸಹಸ್ರಾಣಿ ವರುಣಸ್ಯಾರ್ಕ ಕರ್ಮಣಿ ॥೩೫॥
ಷಡ್ಭಿಃ ಸಹಸ್ರೈಃ ಪೂಷಾ ತು ದೇವೋಽಂಶುಃ ಸಪ್ತಭಿಸ್ತಥಾ ।
ಧಾತಾಽಷ್ಟಭಿಃ ಸಹಸ್ರೈಸ್ತು ನವಭಿಸ್ತು ಶತಕ್ರತುಃ ॥೩೬॥
ವಿವಸ್ವಾನ್ ದಶಭಿರ್ಯಾತಿ ರ್ಯಾತ್ಯೇಕಾದಶಭಿ ರ್ಭಗಃ ।
ಸಪ್ತಭಿಸ್ತಪತೇ ಮಿತ್ರಸ್ತ್ವಷ್ಟಾ ಚೈವಾಷ್ಟಭಿಃ ಸ್ಮೃತಃ ॥೩೭॥
ಅರ್ಯಮಾ ದಶಭಿರ್ಯಾತಿ ಪರ್ಜನ್ಯೋ ನ್ವಭಿ ಸ್ತಥಾ ।
ಷಡ್ಭೀ ರಶ್ಮಿ ಸಹಸ್ರೈಸ್ತು ವಿಷ್ಣುಸ್ತಪತಿ ಮೇದಿನೀಂ ॥೩೮॥

---

ಮನ್ ಎಂದೂ, ಶ್ರಾವಣಮಾಸದಲ್ಲಿ ವಿವಸ್ವಾನ್ ಎಂದೂ, ಭಾದ್ರಪದಮಾಸದಲ್ಲಿ ಭಗ ಎಂದೂ, ಆಶ್ವಯುಜಮಾಸದಲ್ಲಿ, ಪರ್ಜನ್ಯ ಎಂದೂ, ಕಾರ್ತಿಕ ಮಾಸದಲ್ಲಿ ತ್ವಷ್ಟೃ, ಎಂದೂ, ಇವನಿಗೆ ಬೇರೆಬೇರೆ ಹೆಸರುಗಳಿವೆ.

೩೫–೩೬. ಅಲ್ಲದೆ ಮಾರ್ಗಶೀರ್ಷಮಾಸದಲ್ಲಿ ಮಿತ್ರನೆಂದೂ, ಪುಷ್ಯಮಾಸದಲ್ಲಿ ಸನಾತನನಾದ ವಿಷ್ಣು ಎಂದೂ, ಕರೆಯಲ್ಪಡುತ್ತಾನೆ. ವರುಣನು ಐದು ಸಾವಿರ ಕಿರಣಗಳಿಂದಲೂ, ಪೂಷನ್, ಆರುಸಾವಿರ ಕಿರಣಗಳಿಂದಲೂ, ಅಂಶುವು, ಏಳುಸಾವಿರ ಕಿರಣಗಳಿಂದಲೂ, ಧಾತೃವು ಎಂಟುಸಾವಿರ ಕಿರಣಗಳಿಂದಲೂ, ಶತಕ್ರತುವು ಒಂಬತ್ತುಸಾವಿರ ಕಿರಣಗಳಿಂದಲೂ, ಪ್ರಕಾಶಿಸುತ್ತಾನೆ.

೩೭–೩೮. ವಿವಸ್ವಾನ್, ಹತ್ತುಸಾವಿರ ಕಿರಣಗಳಿಂದಲೂ, ಭಗನು ಹನ್ನೊಂದಸಾವಿರ ಕಿರಣಗಳಿಂದಲೂ, ಮಿತ್ರನು ಏಳುಸಾವಿರ ಕಿರಣಗಳಿಂದಲೂ, ತ್ವಷ್ಟೃವು ಎಂಟುಸಾವಿರ ಕಿರಣಗಳಿಂದಲೂ, ಅರ್ಯಮನ್, ಹತ್ತುಸಾವಿರ ಕಿರಣಗಳಿಂದಲೂ, ಪರ್ಜನ್ಯನು ಒಂಬತ್ತುಸಾವಿರ ಕಿರಣಗಳಿಂದಲೂ, ವಿಷ್ಣುವು ಆರುಸಾವಿರ ಕಿರಣಗಳಿಂದಲೂ, ಬೆಳಗುತ್ತಾ ಭೂಮಿಗೆ ಶಾಖವನ್ನುಂಟುಮಾಡುತ್ತಾರೆ.

ವಸಂತೇ ಕಪಿಲಃ ಸೂರ್ಯೋ ಗ್ರೀಷ್ಮೇ ಕಾಂಚನ ಸಪ್ರಭಃ ।
ಶ್ವೇತೋ ವರ್ಷಾಸು ವರ್ಣೇನ ಪಾಂಡುಃ ಶರದಿ ಭಾಸ್ಕರಃ ॥೩೯॥
ಹೇಮಂತೇ ತಾಮ್ರವರ್ಣಸ್ತು ಶಶಿರೇ ಲೋಹಿತೋ ರವಿಃ ।
ಇತಿವರ್ಣಾಃ ಸಮಾಖ್ಯಾತಾ ಮಯಾ ಸೂರ್ಯ ಸಮುದ್ಭವಾಃ ॥೪೦॥
ಓಷಧೀಷು ಬಲಂ ಧತ್ತೇ ಸ್ವಧಯಾ ಚ ಪಿತೃಷ್ವಪಿ ।
ಸೂರ್ಯೋಽ ಮರೇ ಷ್ವಪ್ಯ ಮೃತಂ ತ್ರಯಂ ತ್ರಿ ಷು ನಿಯಚ್ಛತಿ॥೪೧॥
ಏವಂ ರಶ್ಮಿ ಸಹಸ್ರಂ ತತ್ ಸೌರಂ ಲೋಕಾರ್ಥ ಸಾಧಕಂ ।
ಭಿದ್ಯತೇ ಲೋಕಮಾಸಾದ್ಯ ಜಲಶೀತೋಷ್ಣ ನಿ ಸ್ರವಂ ॥೪೨॥
ಇತ್ಯೇತನ್ಮಂಡಲಂ ಶುಕ್ಲಂ ಭಾಸ್ಕರಂ ಸೂರ್ಯ ಸಂಜ್ಞಿತಂ ।
ನಕ್ಷತ್ರ ಗ್ರಹ ಸೋಮಾನಾಂ ಪ್ರತಿಷ್ಠಾ ಯೋನಿ ರೇವಚ ॥೪೩॥

---

೩೯-೪೦. ಸೂರ್ಯನು ವಸಂತ ಮಾಸದಲ್ಲಿ ಹೊಂಬಣ್ಣ ವುಳ್ಳವನೂ, ಬೇಸಗೆಯಲ್ಲಿ ಚಿನ್ನದ ಬಣ್ಣವುಳ್ಳವನೂ, ಮಳೆಗಾಲದಲ್ಲಿ ಬೆಳ್ಳಗೂ, ಶರತ್ಕಾಲದಲ್ಲಿ ಮಾಸಿದ ಬಿಳುಪುಳ್ಳವನೂ, ಹೇಮಂತ ಋತುವಿನಲ್ಲಿ ಸ್ವಲ್ಪ ಕೆಂಪಾಗಿಯೂ, ಶಿಶಿರ ಋತುವಿನಲ್ಲಿ ಕೆಂಪಾಗಿಯೂ, ಇರುತ್ತಾನೆ. ಸೂರ್ಯನ ನಾನಾ ವರ್ಣದ ವಿಷಯವು ಈ ರೀತಿಯಾಗಿ ಹೇಳಲ್ಪಟ್ಟಿದೆ.

೪೧. ಸೂರ್ಯನು ಮನುಷ್ಯರ ಮೂಲಕ ಗಿಡ ಮೂಲಿಕೆಗಳಿಂದಲೂ, ಪಿತೃದೇವತೆಗಳ ಮೂಲಕ "ಸ್ವಧಾ" ಎಂಬ ಮಂತ್ರ ದ್ರವ್ಯದಿಂದಲೂ, ದೇವತೆಗಳ ಮೂಲಕ ಅಮೃತದಿಂದಲೂ, ಶಕ್ತಿಯನ್ನು ಪಡೆಯುತ್ತಾನೆ. ಅನಂತರ ಅದೇ ತನ್ನ ಶಕ್ತಿಯನ್ನು ಆ ಮೂರು ಜನಗಳಿಗೂ ವಿನಿಯೋಗಿಸುತ್ತಾನೆ.

೪೨. ಹೀಗೆ ಲೋಕೋಪಯೋಗಿಯಾದ ಸೂರ್ಯಸಂಬಂಧವಾದ ಸಾವಿರಾರು ಕಿರಣಗಳು ನೀರನ್ನೂ, ಶೈತ್ಯವನ್ನೂ, ಬಿಸಿಯನ್ನೂ, ಕೊಡುವುದಾಗಿ ಲೋಕದಲ್ಲಿ ಬೇರೆಬೇರೆ ಸ್ವರೂಪವನ್ನು ತಾಳುತ್ತವೆ.

೪೩-೪೫. ಈ ರೀತಿಯಾಗಿ ಶುಭ್ರವಾದ ಸೂರ್ಯನೆಂಬ ಹೆಸರುಳ್ಳ ತೇಜೋಮಂಡಲವು ನಕ್ಷತ್ರಗಳು, ಗ್ರಹಗಳು ಮತ್ತು ಚಂದ್ರ ಇವರಿಗೆ

**ಚಂದ್ರ ಋಕ್ಷಗ್ರಹಾಃ ಸರ್ವೇ ವಿ ಜ್ಞೇಯಾಃ ಸೂರ್ಯ ಸಂಭವಾಃ ।**
**ನಕ್ಷತ್ರಾಧಿ ಪತಿಃ ಸೋಮೋ ನಯನಂ ವಾಮ ಮೀಶಿತುಃ** ॥೪೪॥
**ನಯನಂ ಚೈವ ಮೀಶಸ್ಯ ದಕ್ಷಿಣಂ ಭಾಸ್ಕರಃ ಸ್ವಯಂ ।**
**ತೇಷಾಂ ಜನಾನಾಂ ಲೋಕೇಽ ಸ್ಮಿನ್ನಯನಂ ನಯತೇ ಯತಃ**॥೪೫॥

**ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಸೂರ್ಯಕಿರಣ ಸ್ವರೂಪ ವಿವರಣಂ ನಾಮ ಏಕೋನ ಷಷ್ಟಿತಮೋಽಧ್ಯಾಯಃ**

---

ಆಶ್ರಯ ಭೂತವಾದುದು. ಈ ಚಂದ್ರ, ನಕ್ಷತ್ರ, ಮತ್ತು ಗ್ರಹಗಳು ಸೂರ್ಯನಿಂದಲೇ ಹುಟ್ಟಿದುವು. ಈ ಸೂರ್ಯಭಗವಂತನು ಈಶ್ವರನ ಬಲಗಣ್ಣಾಗಿಯೂ, ಚಂದ್ರನು ಎಡಗಣ್ಣಾಗಿಯೂ ಇರುತ್ತಾರೆ. ಏಕೆಂದರೆ ಲೋಕದ ಪ್ರಜೆಗಳಿಗೆಲ್ಲರಿಗೂ ಪ್ರಕಾಶವನ್ನು ಬೀರಿ ಇವರು ದಾರಿ ತೋರಿಸುವುದರಿಂದ ಈಶ್ವರನ ಕಣ್ಣುಗಳೇ ಇವರಾಗಿದ್ದಾರೆ.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಜ್ಯೋತಿರ್ಮಂಡಲದಲ್ಲಿ ಸೂರ್ಯನ ಕಿರಣಗಳ ವಿವರಣೆ ಎಂಬ ಐವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಷಷ್ಟಿತಮೋಽಧ್ಯಾಯಃ

॥ ಸೂತ ಉವಾಚ ॥

ಶೇಷಾಃ ಪಂಚಗ್ರಹಾ ಜ್ಞೇಯಾ ಈಶ್ವರಾಃ ಕಾಮಚಾರಿಣಃ ।
ಪಠ್ಯತೇ ಚಾಗ್ನಿರಾದಿತ್ಯ ಉದಕಂ ಚಂದ್ರಮಾಃ ಸ್ಮೃತಃ ॥ ೧ ॥

ಶೇಷಾಣಾಂ ಪ್ರಕೃತಿಂ ಸಮ್ಯಗ್ವಕ್ಷ್ಯಮಾಣಾಂ ನಿಬೋಧತ ।
ಸುರಸೇನಾಪತಿಃ ಸ್ಕಂದಃ ಪಠ್ಯತೇಽಂಗಾರಕೋ ಗ್ರಹಃ ॥ ೨ ॥

ನಾರಾಯಣಂ ಬುಧಂ ಪ್ರಾಹುರ್ದೇವಂ ಜ್ಞಾನವಿದೋ ಜನಾಃ ।
ಸರ್ವಲೋಕಪ್ರಭುಃ ಸಾಕ್ಷಾದ್ಯಮೋ ಲೋಕಪ್ರಭುಃ ಸ್ವಯಂ ॥

ಮಹಾಗ್ರಹೋ ದ್ವಿಜಶ್ರೇಷ್ಠಾ ಮಂದಗಾಮೀ ಶನೈಶ್ಚರಃ ।
ದೇವಾಸುರ ಗುರೂ ದ್ವೌ ತು ಭಾನುಮಂತೌ ಮಹಾಗ್ರಹೌ ॥ ೪ ॥

---

೧–೨. ಹಿಂದೆ ಹೇಳಿದ ಚಂದ್ರ ಸೂರ್ಯರನ್ನು ಬಿಟ್ಟು ಉಳಿದ ಐದು ಗ್ರಹಗಳೂ, ವೈಭವವುಳ್ಳವೂ, ಸ್ವೇಚ್ಛೆಯಿಂದ ಸಂಚರಿಸುವಂಥವೂ ಎಂದು ತಿಳಿಯಬೇಕು. ಅಗ್ನಿಯು ಆದಿತ್ಯನೆಂಬುದಾಗಿಯೂ, ಚಂದ್ರನು ಉದಕ ಸ್ವರೂಪ ನೆಂದೂ ಶಾಸ್ತ್ರದಲ್ಲಿ ಹೇಳಲ್ಪಟ್ಟಿದ್ದಾರೆ. ಉಳಿದ ಈ ಗ್ರಹಗಳ ಸ್ವರೂಪವನ್ನು ಮುಂದೆ ಹೇಳುವ ರೀತಿಯಲ್ಲಿ ತಿಳಿಯಬೇಕು. ಅಂಗಾರಕ ಗ್ರಹವು ದೇವತೆಗಳಿಗೆ ಸೇನಾಧಿಪತಿಯಾದ ಷಣ್ಮುಖಸ್ವಾಮಿಯಾಗಿ ಹೇಳಲ್ಪಟ್ಟಿದೆ.

೩–೫. ಪ್ರಾಜ್ಞರಾದವರು ಬುಧಗ್ರಹವನ್ನು ಸ್ವಾಮಿಯಾದ ನಾರಾಯಣನೆಂದು ಕರೆಯುತ್ತಾರೆ. ಎಲೈ ಬ್ರಾಹ್ಮಣರಿರಾ, ಮೆಲ್ಲಗೆ ಚಲಿಸುವ ದೊಡ್ಡಗ್ರಹವಾದ ಶನಿಗ್ರಹವು, ಸರ್ವಲೋಕಕ್ಕೂ ಸ್ವಾಮಿಯಾದ ಸಾಕ್ಷಾತ್ ಯಮಧರ್ಮರಾಯನೇ ಎಂದು ತಿಳಿಯಿರಿ. ದೊಡ್ಡ ಗ್ರಹಗಳಾದ, ದೇತೆಲಿಗ್ಗಗಳ, ರಾಕ್ಷಸರಿಗೂ ಗುರುಗಳಾದ ಗುರು, ಶುಕ್ರರನ್ನು

ಪ್ರಜಾಪತಿ ಸುತಾ ವುಕ್ತಾ ತತಃ ಶುಕ್ರ ಬೃಹಸ್ಪತೀ ।
ಆದಿತ್ಯ ಮೂಲ ಮಖಿಲಂ ತ್ರೈಲೋಕ್ಯಂ ನಾತ್ರ ಸಂಶಯಃ ॥ ೫ ॥

ಭವತ್ಯಸ್ಮಾತ್ ಜಗತ್ಕೃತ್ಸ್ನಂ ಸದೇವಾಸುರ ಮಾನುಷಂ ।
ರುದ್ರೇಂದ್ರೋಪೇನ್ದ್ರ ಚಂದ್ರಾಣಾಂ ವಿಪ್ರೇಂದ್ರಾಗ್ನಿದಿ ವೌಕಸಾಂ॥

ದ್ಯುತಿ ರ್ದ್ಯುತಿಮತಾಂ ಕೃತ್ಸ್ನಂ ಯತ್ತೇಜಃ ಸಾರ್ವಲೌಕಿಕಂ ।
ಸರ್ವಾತ್ಮಾ ಸರ್ವ ಲೋಕೇಶೋ ಮಹಾದೇವಃ ಪ್ರಜಾಪತಿಃ ॥

ಸೂರ್ಯ ಏವ ತ್ರಿಲೋಕೇಶೋ ಮೂಲಂ ಪರಮದೈವತಂ ।
ತತಃ ಸಂಜಾಯತೇ ಸರ್ವಂ ತತ್ರೈವ ಪ್ರವಿಲೀಯತೇ ॥ ೮ ॥

ಭಾವಾ ಭಾವೌ ಹಿ ಲೋಕಾನಾ ಮಾದಿತ್ಯಾನ್ನಿಸ್ಸೃತೌ ಪುರಾ ।
ಅವಿಜ್ಞೇಯೋ ಗ್ರಹೋ ವಿಪ್ರಾ ದೀಪ್ತಿಮಾನ್ಸು ಪ್ರಭೋ ರವಿಃ ॥

---

ಬ್ರಹ್ಮನ ಮಕ್ಕಳೆಂದೇ ತಿಳಿಯಿರಿ. ಈ ಮೂರು ಲೋಕವೂ ಸೂರ್ಯನ ಆಶ್ರಯದಲ್ಲಿಯೇ ಇದೆ, ಎಂಬುದರಲ್ಲಿ ಸಂದೇಹವೇ ಇಲ್ಲ.

೬–೮. ಈ ಸೂರ್ಯ ಭಗವಂತನಿಂದಲೇ ದೇವತೆಗಳೂ ರಾಕ್ಷಸರೂ ಮತ್ತು ಮನುಷ್ಯರೇ ಮೊದಲಾದವರಿಂದ ಕೂಡಿದ ಈ ಜಗತ್ತು ಉಂಟಾಗಿದೆ. ರುದ್ರ, ಇಂದ್ರ, ಉಪೇಂದ್ರ, ಬ್ರಾಹ್ಮಣ, ಅಗ್ನಿ ಮತ್ತು ದೇವತೆಗಳೇ ಮೊದಲಾದ ತೇಜಸ್ವಿಗಳಾದವರಿಗೂ, ಎಲ್ಲ ಲೋಕದಲ್ಲಿಯೂ ಪ್ರಕಾಶಿಸುವ ತೇಜಸ್ಸಿಗೂ, ಈ ಸೂರ್ಯನೇ ಮೂಲ ಕಾರಣನು. ಸರ್ವಸ್ವರೂಪನೂ, ಎಲ್ಲಾ ಲೋಕಕ್ಕೂ ಅಧಿಪತಿಯೂ, ಆದ ಪರಮೇಶ್ವರನೂ, ಈ ಸೂರ್ಯನೇ; ಅವನು ಈ ಮೂರು ಲೋಕಕ್ಕೂ ಅಧಿಪತಿಯೂ, ಮೂಲಭೂತವಾದ ಪರಮದೇವತೆಯೂ ಆಗಿದ್ದಾನೆ. ಇವನಿಂದಲೇ ಸಮಸ್ತ ಜಗತ್ತು ಹಟ್ಟಿ ಇವನಲ್ಲೇ ಕೊನೆಗೆ ನಾಶವನ್ನು ಹೊಂದುತ್ತವೆ.

೯. ಹಿಂದೆ ಪ್ರಪಂಚದ ಉತ್ಪತ್ತಿಲಯಗಳು ಸೂರ್ಯನಿಂದಲೇ ಉಂಟಾದುವು. ಎಲೈ ಬ್ರಾಹ್ಮಣರೇ, ಬಹಳ ತೇಜಸ್ವಿಯೂ, ಬೆಳಗುವವನೂ ಆದ ಸೂರ್ಯನ ಸ್ವರೂಪವನ್ನು ತಿಳಿಯಲು ಬಹಳ ಕಷ್ಟ.

ಅತ್ರ ಗಚ್ಛಂತಿ ನಿಧನಂ ಜಾಯಂತೇ ಚ ಪುನಃ ಪುನಃ ।
ಕ್ಷಣಾ ಮುಹೂರ್ತಾ ದಿವಸಾ ನಿಶಾಃ ಪಕ್ಷಾಶ್ಚ ಕೃತ್ಸ್ನಶಃ ॥೧೦॥
ಮಾಸಾಃ ಸಂವತ್ಸರಾಶ್ಚೈವ ಋತವೋಽಥ ಯುಗಾನಿ ಚ ।
ತದಾದಿತ್ಯಾದೃತೇ ಹ್ಯೇಷಾ ಕಾಲಸಂಖ್ಯಾ ನ ವಿದ್ಯತೇ ॥೧೧॥
ಕಾಲಾದೃತೇ ನ ನಿಯಮೋ ನ ದೀಕ್ಷಾನಾಹ್ನಿಕ ಕ್ರಮಃ ।
ಋತೂನಾಂ ಚ ವಿಭಾಗಶ್ಚ ಪುಷ್ಪಂ ಮೂಲಂ ಫಲಂ ಕುತಃ ॥೧೨॥
ಕುತಃ ಸಸ್ಯ ವಿನಿಷ್ಪತ್ತಿ ಸ್ತೃಣೌಷಧಿ ಗಣೋಽಪಿ ಚ ।
ಅಭಾವೋ ವ್ಯವಹಾರಾಣಾಂ ಜಂತೂನಾಂ ದಿವಿ ಚೇಹ ಚ ॥೧೩॥
ಜಗತ್ಪ್ರತಾಪನ ಮೃತೇ ಭಾಸ್ಕರಂ ರುದ್ರ ರೂಪಿಣಂ ।
ಸ ಏಷ ಕಾಲ ಶ್ಚಾಗ್ನಿಶ್ಚ ದ್ವಾದಶಾತ್ಮಾ ಪ್ರಜಾಪತಿಃ ॥೧೪॥

---

೧೦–೧೨. ಇವನಲ್ಲಿ ಕ್ಷಣಗಳೂ, ಮುಹೂರ್ತಗಳೂ, ದಿವಸಗಳೂ, ರಾತ್ರಿಗಳೂ, ಪಕ್ಷಗಳೂ, ಸಮಸ್ತಗಳೂ, ಪುನಃ ಪುನಃ ನಾಶಹೊಂದಿ ಹುಟ್ಟುತ್ತಿರುತ್ತವೆ. ಅಲ್ಲದೇ ಇವನಲ್ಲಿಯೇ, ಮಾಸಗಳೂ, ವರ್ಷಗಳೂ, ಋತುಗಳೂ ಮತ್ತು ಯುಗಗಳೂ, ಪುನಃ ಪುನಃ ನಾಶವಾಗಿ ಉತ್ಪತ್ತಿಯಾಗುತ್ತವೆ. ಆದ್ದರಿಂದ ಸೂರ್ಯನಿಲ್ಲದಿದ್ದರೆ ಕಾಲವನ್ನು ನಿರ್ಣಯಿಸುವುದಕ್ಕೆ ಆಗುತ್ತಲೇ ಇರಲಿಲ್ಲ. ಕಾಲದ ಲೆಕ್ಕವಿಲ್ಲದಿದ್ದರೆ ಯಾವುದೊಂದು ವ್ಯವಸ್ಥೆಯಾಗಲಿ, ವ್ರತಾಚರಣೆಯಾಗಲಿ, ಸಂಧ್ಯಾವಂದನಾದಿ ಕರ್ಮಗಳಾಗಲಿ, ಅಥವಾ ಋತುಗಳನ್ನು ವಿಭಾಗ ಮಾಡುವುದಾಗಲಿ, ಒಂದೂ ಸಂಭವಿಸುತ್ತಿರಲಿಲ್ಲ. ಇವನಿಲ್ಲದೇ ಹುವ್ವಾಗಲೀ, ಗಿಡಗಳಾಗಲಿ, ಹಣ್ಣಾಗಲಿ ಎಲ್ಲಿ ಆಗುತ್ತಿತ್ತು?

೧೩–೧೪. ಪ್ರಪಂಚಕ್ಕೆ ಬೆಳಕನ್ನುಂಟುಮಾಡುವ ರುದ್ರಸ್ವರೂಪನಾದ ಸೂರ್ಯನಿಲ್ಲದಿದ್ದರೆ ಸಸ್ಯಗಳೂ ವನಸ್ಪತಿಗಳೂ, ಎಲ್ಲಿ ಹುಟ್ಟುತ್ತಿದ್ದುವು? ಈ ಲೋಕದಲ್ಲಿಯೂ, ಸ್ವರ್ಗಲೋಕದಲ್ಲಿಯೂ, ಪ್ರಾಣಿಗಳು ಬದುಕುವುದಕ್ಕೂ ಆಗುತ್ತಿರಲಿಲ್ಲ. ಎಲೈ ಬ್ರಾಹ್ಮಣರೇ, ಈ ಸೂರ್ಯ ಭಗವಂತನು ಕಾಲಸ್ವರೂಪನೂ, ಅಗ್ನಿಸ್ವರೂಪನೂ, ಮತ್ತು ಲೋಕಾಧಿ

ತಪತ್ಯೇಷ ದ್ವಿಜಶ್ರೇಷ್ಠಾ ಸ್ತ್ರೈಲೋಕ್ಯಂ ಸಚರಾಚರಂ ।
ಸ ಏಷ ತೇಜಸಾಂ ರಾಶಿಃ ಸಮಸ್ತಃ ಸಾರ್ವ ಲೌಕಿಕಃ ॥೧೫॥

ಉತ್ತಮಂ ಮಾರ್ಗ ಮಾಸ್ಥಾಯ ರಾತ್ರ್ಯಹೋಭಿ ರಿದಂ ಜಗತ್ ।
ಪಾರ್ಶ್ವತೋ ಧ್ವರ್ಮಥ ಶ್ಚೈವ ತಾಪಯತ್ಯೇಷ ಸರ್ವಶಃ ॥೧೬॥

ಯಥಾ ಪ್ರಭಾಕರೋ ದೀಪೋ ಗೃಹಮಧ್ಯೇ ವ ಲಂಬಿತಃ ।
ಪಾರ್ಶ್ವತೋ ಧ್ವರ್ಮಥ ಶ್ಚೈವ ತಮೋ ನಾಶಯತೇ ಸಮಂ ॥೧೭॥

ತದ್ವತ್ ಸಹಸ್ರ ಕಿರಣೋ ಗ್ರಹರಾಜೋ ಜಗತ್ಪ್ರಭುಃ ।
ಸೂರ್ಯೋ ಗೋಭಿ ರ್ಜಗತ್ಸರ್ವಂ ಆದೀಪಯತಿ ಸರ್ವತಃ ॥೧೮॥

ರವೇ ರಶ್ಮಿ ಸಹಸ್ರಂ ಯತ್ಪ್ರಾಙ್ಮಯಾ ಸಮುದಾಹೃತಂ ।
ತೇಷಾಂ ಶ್ರೇಷ್ಠಾಃ ಪುನಃ ಸಪ್ತ ರಶ್ಮಯೋ ಗ್ರಹ ಯೋನಯಃ॥೧೯॥

---

ಪತಿಯೂ ಆಗಿದ್ದಾನೆ. ಸ್ಥಾವರ ಜಂಗಮಾತ್ಮಕವಾದ ಸಕಲ ಜಗತ್ತನ್ನೂ ಇವನು ಸುಡುತ್ತಾನೆ. ಇವನು ಎಲ್ಲಾ ಲೋಕಗಳ ಸಮಸ್ತವಾದ ತೇಜಸ್ಸಿನ ರಾಶಿಯೇ ಆಗಿದ್ದಾನೆ.

೧೬–೧೮. ಪ್ರಕಾಶಮಾನವಾದ ದೀಪವು ಮನೆಯ ಮಧ್ಯಭಾಗದಲ್ಲಿ ತೂಗು ಹಾಕಲ್ಪಟ್ಟರೆ ಅದು ಹೇಗೆ ಪಕ್ಕಕ್ಕೂ, ಮೇಲಕ್ಕೂ, ಕೆಳಗಡೆಯೂ ಕತ್ತಲೆಯನ್ನು ನಿವಾರಣೆ ಮಾಡಬಲ್ಲದೋ ಹಾಗೆ ಉತ್ತಮವಾದ ಮಾರ್ಗದಲ್ಲಿದ್ದು ಸೂರ್ಯನು ರಾತ್ರಿ ಹಗಲುಗಳಿಂದ ಕೂಡಿದ ಈ ಜಗತ್ತಿನ ಕತ್ತಲನ್ನು ಹೋಗಲಾಡಿಸುತ್ತಾನೆ, ಮತ್ತು ಸಾವಿರಾರು ಕಿರಣಗಳುಳ್ಳ ಗ್ರಹಗಳಿಗೆ ಪತಿಯಾದ ಮತ್ತು ಜಗತ್ತಿಗೆ ಸ್ವಾಮಿಯಾದ ಸೂರ್ಯನು ತನ್ನ ಕಿರಣಗಳಿಂದ ಎಲ್ಲಾ ಕಡೆಯಲ್ಲಿಯೂ, ಪ್ರಕಾಶವನ್ನು ಬೀರುತ್ತಾನೆ.

೧೯. ನಾನು ಮೊದಲು ಹೇಳಿದ ಸೂರ್ಯನ ಸಾವಿರಾರು ಕಿರಣಗಳ ಜೊತೆಗೆ ಇನ್ನೇಳು ಶ್ರೇಷ್ಠವಾದ ಕಿರಣಗಳಿವೆ. ಇವು ಗ್ರಹಗಳನ್ನು ಉತ್ಪತ್ತಿ ಮಾಡಬಲ್ಲವು.

ಸುಷುಮ್ನೋ ಹರಿಕೇಶಶ್ಚ ವಿಶ್ವಕರ್ಮಾ ತಥೈವಚ ।
ವಿಶ್ವವ್ಯಚಾಃ ಪುನಶ್ಚಾದ್ಯಃ ಸನ್ನದ್ಧಶ್ಚ ತತಃ ಪರಃ ॥೨೦॥

ಸರ್ವಾವಸುಃ ಪುನಶ್ಚಾನ್ಯಃ ಸ್ವರಾಡನ್ಯಃ ಪ್ರಕೀರ್ತಿತಃ ।
ಸುಷುಮ್ನಃ ಸೂರ್ಯ ರಶ್ಮಿಸ್ತು ದಕ್ಷಿಣಾಂ ರಾಶಿನ್ಯೈಧಯುತ್ ॥೨೧॥

ತಿರ್ಯಗೂರ್ಧ್ವಃ (ನ್ಯಗೂರ್ಧ್ವಾಧಃ) ಪ್ರಚಾರೋಽಸ್ಯ ಸುಷುಮ್ನಃ ಪರಿ
ಕೀರ್ತಿತಃ ।
ಹರಿಕೇಶಃ ಪುರಸ್ತಾದ್ಯೋ ಋಕ್ಷ್ಯಯೋನಿಃ ಪ್ರಕೀರ್ತ್ಯತೇ ॥೨೨॥

ದಕ್ಷಿಣೇ ವಿಶ್ವಕರ್ಮಾ ಚ ರಶ್ಮಿ ರ್ವರ್ಧಯತೇ ಬುಧಂ ।
ವಿಶ್ವವ್ಯಚಾಸ್ತು ಯಃ ಪಶ್ಚಾತ್ ಶುಕ್ರಯೋನಿಃ ಸ್ಮೃತೋ ಬುಧೈಃ॥

ಸನ್ನದ್ಧಶ್ಚ ತು ಯೋ ರಶ್ಮಿಃ ಸ ಯೋನಿರ್ಲೋಹಿತಸ್ಯ ತು ।
ಷಷ್ಠಃ ಸರ್ವಾವಸೂ ರಶ್ಮಿಃ ಸ ಯೋನಿಸ್ತು ಬೃಹಸ್ಪತೇಃ ॥೨೪॥

---

೨೦–೨೧. ಈ ಏಳು ಶ್ರೇಷ್ಠ ಕಿರಣಗಳು, ಸುಷುಮ್ನಾ, ಹರಿಕೇಶ, ವಿಶ್ವಕರ್ಮ, ವಿಶ್ವವ್ಯಚ, ಸನ್ನದ್ಧ, ಸರ್ವಾವಸು, ಸ್ವರಾಟ್ ಎಂದು ಕರೆಯಲ್ಪಡುತ್ತವೆ. ಸುಷುಮ್ನ ಎಂಬ ಕಿರಣವು ಚಂದ್ರರೂಪವಾದ ದಕ್ಷಿಣ ರಾಶಿಯನ್ನು ಪ್ರಕಾಶಪಡಿಸುತ್ತದೆ.

೨೨. ಈ ಸುಷುಮ್ನೆಯೆಂಬ ಕಿರಣವು ಮಧ್ಯದಲ್ಲಿ, ಕೆಳಗೆ, ಮೇಲೆ ಬೆಳಕನ್ನು ಕೊಡುವುದೆಂದು ಹೇಳಲ್ಪಟ್ಟಿದೆ. ಹರಿಕೇಶ, ಎಂಬುದು ಮುಂದುಗಡೆ ನಕ್ಷತ್ರಗಳಿಗೆ ಪ್ರಕಾಶವನ್ನುಂಟುಮಾಡುತ್ತದೆ.

೨೩. ವಿಶ್ವಕರ್ಮಾ ಎಂಬ ಕಿರಣವು ದಕ್ಷಿಣಭಾಗದಲ್ಲಿ ಬುಧ ಗ್ರಹವನ್ನು ಪ್ರಕಾಶ ಪಡಿಸುತ್ತದೆ. ವಿಶ್ವವ್ಯಚ ಎಂಬ ಕಿರಣವು ಶುಕ್ರಗ್ರಹವನ್ನು ಪ್ರಕಾಶಪಡಿಸುತ್ತದೆ, ಎಂದು ಜ್ಞಾನಿಗಳಿಂದ ಹೇಳಲ್ಪಟ್ಟಿದೆ.

೨೪. ಸನ್ನದ್ಧ ಎಂಬ ಕಿರಣವು ಲೋಹಿತ ವನ್ನು ಪ್ರಕಾಶಪಡಿಸುತ್ತದೆ. ಆರನೆಯದಾದ ಸರ್ವಾವಸು ಎಂಬ ಕಿರಣವು ಗುರುವನ್ನು ಪ್ರಕಾಶಪಡಿಸುತ್ತದೆ.

ಶನೈಶ್ಚರಂ ಪುನಶ್ಚಾಪಿ ರಶ್ಮಿರಾಪ್ಯಾಯತೇ ಸ್ವರಾಟ್ ।
ಏವಂ ಸೂರ್ಯಪ್ರಭಾವೇನ ನಕ್ಷತ್ರ ಗ್ರಹತಾರಕಾಃ ॥೨೫॥
ದೃಶ್ಯಂತೇ ದಿವಿ ತಾಃ ಸರ್ವಾಃ ವಿಶ್ವಂ ಚೇದಂ ಪುನರ್ಜಗತ್ ।
ನ ಕ್ಷೀಯಂತೇ ಯತಸ್ತಾನಿ ತಸ್ಮಾನ್ನಕ್ಷತ್ರತಾ ಸ್ಮೃತಾ ॥೨೬॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಸೂರ್ಯ ಕಿರಣ ಸ್ವರೂಪ
ವಿವರಣಂ ನಾಮ ಷಷ್ಟಿತಮೋಽಧ್ಯಾಯಃ

---

೨೫–೨೬. ಸ್ವರಾಟ್ ಎಂಬ ಕಿರಣವು ಶನಿಗ್ರಹವನ್ನು ಪ್ರಕಾಶಪಡಿಸುತ್ತದೆ. ಹೀಗೆ ಸೂರ್ಯನ ತೇಜಸ್ಸಿನಿಂದ ನಕ್ಷತ್ರಗಳು, ಗ್ರಹಗಳು, ಮತ್ತು ತಾರೆಗಳು, ಆಕಾಶದಲ್ಲಿ ಬೆಳಗುತ್ತಾ ಕಾಣುತ್ತವೆ. ಈ ಜಗತ್ತಿನಲ್ಲಿ ಇವುಗಳಿಗೆ ನಾಶವಿಲ್ಲದೇ ಇರುವುದರಿಂದ ಇವಕ್ಕೆ ನಕ್ಷತ್ರ ಎಂಬ ಹೆಸರು ಕೊಡಲ್ಪಟ್ಟಿದೆ.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಜ್ಯೋತಿರ್ಮಂಡಲದಲ್ಲಿ ಸೂರ್ಯನ
ಕಿರಣಗಳ ಸ್ವರೂಪದ ವಿವರಣೆ ಎಂಬ ಅರವತ್ತನೆಯ ಅಧ್ಯಾಯವು
ಮುಗಿದುದು.



## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಏಕ ಷಷ್ಟಿತಮೋಽಧ್ಯಾಯಃ

**॥ ಸೂತ ಉವಾಚ ॥**

ಕ್ಷೇತ್ರಾಣ್ಯೇತಾನಿ ಸರ್ವಾಣಿ ಅತಪಂತಿ ಗಭಸ್ತಿಭಿಃ ।
ತೇಷಾಂ ಕ್ಷೇತ್ರಾಣ್ಯಥಾ ದತ್ತೇ ಸೂರ್‍ಯೋ ನಕ್ಷತ್ರ ತಾರಕಾಃ ॥ ೧ ॥

ಚೀರ್ಣೇನ ಸುಕೃತೇ ನೇಹ ಸುಕೃತಾಂ ತೇ ಗ್ರಹಾಶ್ರಯಾಃ ।
ತಾರಣಾತ್ತಾರಕಾ ಹ್ಯೇತಾಃ ಶುಕ್ಲತ್ವಾ ಚ್ಚೈವ ತಾರಕಾಃ ॥ ೨ ॥

ದಿವ್ಯಾನಾಂ ಪಾರ್ಥಿವಾನಾಂ ಚ ನೈಶಾನಾಂ ಚೈವ ಸರ್ವಶಃ ।
ಆದಾನಾನ್ನಿತ್ಯ ಮಾದಿತ್ಯ ಸ್ತೇಜಸಾಂ ತಮಸಾಮಪಿ ॥ ೩ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಅರವತ್ತೊಂದನೆಯ ಅಧ್ಯಾಯವು

೧. ಸೂತನು ಹೇಳಿದನು: ರಾತ್ರಿಯ ವೇಳೆಯಲ್ಲಿ ಕಾಣುವ ಎಲ್ಲಾ ತೇಜಸ್ಥಾನಗಳನ್ನೂ ಸೂರ್ಯನು ತನ್ನ ಕಿರಣಗಳಿಂದ ಪ್ರಕಾಶಿಸುತ್ತಾನೆ. ಆ ನಕ್ಷತ್ರ, ತಾರೆ, ಮೊದಲಾದ ಸ್ಥಾನಗಳನ್ನು ತನ್ನ ಕಡೆಗೆ ಆಕರ್ಷಿಸುತ್ತಾನೆ.

೨. ಈ ನಕ್ಷತ್ರಸ್ಥಾನಗಳು ಪುಣ್ಯಮಾಡಿದವರ ಪುಣ್ಯದಿಂದ ಹೊಂದಲ್ಪಡುತ್ತವೆ. ಮತ್ತು ಅವರನ್ನು ಉದ್ಧಾರಮಾಡುತ್ತವೆ. ಅವು ಬೆಳ್ಳಗೂ ಇವೆ. ಆದ್ದರಿಂದ ಅವುಗಳಿಗೆ ತಾರೆಗಳೆಂದು ಹೆಸರು.

೩. ಭೂಮಿಯಲ್ಲಿರುವ ದೇವಗುಣವುಳ್ಳ ಜನರನ್ನೂ, ಮತ್ತು ರಾತ್ರಿಯಲ್ಲಿ ಕಾಣುವ ಭೂ, ಸ್ವರ್ಗಲೋಕಗಳ ನಕ್ಷತ್ರಗಳನ್ನೂ, ತನ್ನ ಕಡೆಗೆ ಸೆಳೆಯುವುದರಿಂದಲೂ, ಮತ್ತು ತಮಸ್ಸನ್ನು ನಾಶಮಾಡಿ ತೇಜಸ್ಸನ್ನು ಬೀರುವುದರಿಂದಲೂ ಸೂರ್ಯನಿಗೆ '' ಆದಿತ್ಯ '' ನೆಂದು ಹೆಸರು.

ಸವನೇ ಸ್ಯಂದನೇಽರ್ಥೇ ಚ ಧಾತುರೇಷ ವಿಭಾಷ್ಯತೇ ।
ಸವನಾತ್ತೇಜಸೋಽಪಾಂ ಚ ತೇನಾಸೌ ಸವಿತಾ ಮತಃ ॥ ೪ ॥

ಬಹುಲ ಶ್ಚಂದ್ರ ಇತ್ಯೇಷ ಹ್ಲಾದನೇ ಧಾತುರುಚ್ಯತೇ ।
ಶುಕ್ಲತ್ವೇ ಚಾ ಮೃತತ್ವೇ ಚ ಶೀತತ್ವೇ ಚ ವಿಭಾವ್ಯತೇ ॥ ೫ ॥

ಸೂರ್ಯಾ ಚಂದ್ರ ಮಸೋರ್ದಿವ್ಯೇ ಮಂಡಲೇ ಭಾಸ್ವರೇ ಖಗೇ ।
ಜಲ ತೇಜೋಮಯೇ ಶುಕ್ಲೇ ವೃತ್ತ ಕುಂಭನಿಭೇ ಶುಭೇ ॥ ೬ ॥

ಘನ ತೋಯಾತ್ಮಕಂ ತತ್ರ ಮಂಡಲಂ ಶಶಿನಃ ಸ್ಮೃತಂ ।
ಘನ ತೇಜೋಮಯಂ ಶುಕ್ಲಂ ಮಂಡಲಂ ಭಾಸ್ಕರಸ್ಯ ತು ॥ ೭ ॥

ವಸಂತಿ ಸರ್ವ ದೇವಾಶ್ಚ ಸ್ಥಾನಾನ್ಯೇತಾನಿ ಸರ್ವಶಃ ।
ಮನ್ವಂತರೇಷು ಸರ್ವೇಷು ಋಕ್ಷ ಸೂರ್ಯಗ್ರಹಾ ಶ್ರಯಾಃ ॥ ೮ ॥

---

೪. ಸವಿತೃ, ಎಂಬ ಶಬ್ದದ ಮೂಲ ಭೂತವಾದ ಧಾತುವು ಪ್ರಸವಿಸು ಎಂಬ ಅರ್ಥವನ್ನು ಕೊಡುತ್ತದೆ. ತೇಜಸ್ಸನ್ನು ಮತ್ತು ನೀರನ್ನು ಧಾರಾಕಾರವಾಗಿ ಬಿಡುವುದರಿಂದ ಇವನಿಗೆ ಸವಿತೃ ಎಂಬ ಹೆಸರು ಬಂದಿದೆ.

೫. ಚಂದ್ರ ಎಂಬ ಶಬ್ದದ ಮೂಲ ಭೂತವಾದ ಧಾತುವಿನ ಅರ್ಥವು ಸಂತೋಷಪಡಿಸುವುದು ಎಂದಿದ್ದರೂ ಅದರಲ್ಲಿ ಬಿಳಿಯವರ್ಣ ಮತ್ತು ಅಮೃತ ಮುಂತಾದ ಅನೇಕ ಅರ್ಥವೂ ಸೇರಿಕೊಂಡಿದೆ.

೬. ಆಕಾಶದಲ್ಲಿ ತೇಜೋಮಯವೂ ಜಲಮಯವೂ ಆಗಿ ಗಡಿಗೆ ಯಂತೆ ದುಂಡಾಗಿ ಬೆಳಗುತ್ತಿರುವ ದಿವ್ಯವಾದ ಸೂರ್ಯ, ಚಂದ್ರ ಮಂಡಲ ಗಳು ಬೆಳ್ಳಗೂ, ನಿರ್ಮಲವಾಗಿ ಮಂಗಳಕರಗಳಾಗಿವೆ.

೭. ಇವುಗಳಲ್ಲಿ ಚಂದ್ರಮಂಡಲವು ಗಡ್ಡೆಯಾದ ಜಲ ಪೂರ್ಣವಾಗಿ ರುವುದೆಂದೂ, ವಿಶೇಷ ತೇಜಸ್ಸಿನಿಂದ ಪೂರ್ಣವಾದದ್ದು ಸೂರ್ಯಮಂಡಲ ವೆಂದೂ ತಿಳಿಯಬೇಕು.

೮. ಎಲ್ಲಾ ದೇವತೆಗಳೂ ಸ್ವಾಯಂಭುವಾದಿ ಮನ್ವಂತರಗಳಲ್ಲಿ ನಕ್ಷತ್ರ, ಸೂರ್ಯನೇ ಮೊದಲಾದ ಈ ಗ್ರಹಗಳಲ್ಲಿ ಬಹಳಕಾಲ ವಾಸ ಮಾಡುತ್ತಾರೆ.

ತೇನ ಗ್ರಹಾ ಗೃಹಾಣ್ಯೇವ ತದಾಖ್ಯಾಸ್ತೇ ಭವಂತಿ ಚ ।
ಸೌರಂ ಸೂರ್ಯೋऽವಿಶತ್ಸ್ಥಾನಂ ಸೌಮ್ಯಂ ಸೋಮಸ್ತಥೈವಚ ॥ ೯ ॥
ಶೌಕ್ರಂ ಶುಕ್ರೋऽವಿಶತ್ಸ್ಥಾನಂ ಷೋಡಶಾರ್ಚಿಃ ಪ್ರತಾಪವಾನ್ ।
ಬೃಹದ್ಬೃಹಸ್ಪತಿಶ್ಚೈವ ಲೋಹಿತಶ್ಚೈವ ಲೋಹಿತಂ ॥೧೦॥
ಶನೈಶ್ಚರಂ ತಥಾ ಸ್ಥಾನಂ ದೇವಶ್ಚಾಪಿ ಶನೈಶ್ಚರಃ ।
ಬೌಧಂ ಬುಧಸ್ತು ಸ್ವರ್ಭಾನುಃ ಸ್ವರ್ಭಾನು ಸ್ಥಾನ ಮಾಶ್ರಿತಃ ॥೧೧॥
ನಕ್ಷತ್ರಾಣಿ ಚ ಸರ್ವಾಣಿ ನಕ್ಷತ್ರಾಣಿ ವಿಶಂತಿ ಚ ।
ಗೃಹಾಣ್ಯೇತಾನಿ ಸರ್ವಾಣಿ ಜ್ಯೋತೀಂಷಿ ಸುಕೃತಾತ್ಮನಾಂ ॥೧೨॥
ಕಲ್ಪಾದೌ ಸಂಪ್ರವೃತ್ತಾನಿ ನಿರ್ಮಿತಾನಿ ಸ್ವಯಂಭುವಾ ।
ಸ್ಥಾನಾನ್ಯೇತಾನಿ ತಿಷ್ಠಂತಿ ಯಾವದಾ ಭೂತ ಸಂಪ್ಲವಂ ॥೧೩॥

---

೯–೧೦. ಆಯಾಯ ಗ್ರಹಗಳಿಗೆ ಅವುಗಳೇ ಮನೆಯಾಗಿವೆ. ಆದ್ದರಿಂಲೇ ಗ್ರಹಗಳೆಂಬ ಹೆಸರು ಅವುಗಳಿಗೆ ಬಂದಿದೆ. ಸೂರ್ಯನು ತನ್ನದೇ ಆದ ಸೌರಸ್ಥಾನವನ್ನೂ, ಚಂದ್ರನು ಅವನ ಸೌಮ್ಯಸ್ಥಾನವನ್ನೂ, ಶುಕ್ರನು ಶೌಕ್ರಸ್ಥಾನವನ್ನೂ, ಹದಿನಾರು ಕಿರಣಗಳುಳ್ಳ ತೇಜಸ್ವಿಯಾದ ಗುರುವು ಬೃಹತ್ಸ್ಥಾನವನ್ನೂ, ಮಂಗಳನು ಲೋಹಿತ ಸ್ಥಾನವನ್ನೂ, ಆಶ್ರಯಿಸಿದ್ದಾರೆ.

೧೧. ಹೀಗೆಯೇ ಶನಿಯೂ ಶನಿಸ್ಥಾನವನ್ನೂ, ಬುಧನು ಬುಧಸ್ಥಾನವನ್ನೂ, ರಾಹುವು ರಾಹುಸ್ಥಾನವನ್ನೂ ಆಶ್ರಯಿಸಿದ್ದಾರೆ.

೧೨. ಪುಣ್ಯಶಾಲಿಗಳಾದವರ ತೇಜಸ್ಸು ನಾಶವಿಲ್ಲದ ಈ ನಕ್ಷತ್ರಗಳನ್ನು ಸೇರಿ ಅವುಗಳಲ್ಲೇ ಇರುತ್ತವೆ.

೧೩. ಈ ಗ್ರಹಗಳು ಬ್ರಹ್ಮನಿಂದಲೇ ಮನ್ವಂತರದ ಆದಿಯಲ್ಲಿ ನಿರ್ಮಿಸಲ್ಪಟ್ಟವು. ಇವುಗಳು ಕಲ್ಪಾಂತದವರಿಗೂ ಸ್ಥಿರವಾಗಿರುತ್ತವೆ.

ಮನ್ವಂತರೇಷು ಸರ್ವೇಷು ದೇವಸ್ಥಾನಾನಿ ತಾನಿ ವೈ ।
ಅಭಿಮಾನಿನೋಽ ವತಿಷ್ಠಂತೇ ದೇವಾಃ ಸ್ಥಾನಂ ಪುನಃ ಪುನಃ ॥೧೪॥

ಅತೀತೈಸ್ತು ಸಹೈತಾನಿ ಭಾವ್ಯಾ ಭಾವ್ಯೈಃ ಸುರೈಃ ಸಹ ।
ವರ್ತಂತೇ ವರ್ತಮಾನೈಶ್ಚ ಸ್ಥಾನಿಭಿಸ್ತೈಃ ಸುರೈಃ ಸಹ ॥೧೫॥

ಅಸ್ಮಿನ್ಮ ನ್ವಂತರೇ ಚೈವ ಗ್ರಹಾ ವೈಮಾನಿಕಾಃ ಸ್ಮೃತಾಃ ।
ವಿವಸ್ವಾನದಿತೇಃ ಪುತ್ರಃ ಸೂರ್ಯೋ ವೈವಸ್ವತೇಽಂತರೇ ॥೧೬॥

ದ್ಯುತಿಮಾ ನೃಷಿ ಪುತ್ರಸ್ತು ಸೋಮೋ ದೇವೋ ವಸುಃ ಸ್ಮೃತಃ ।
ಶುಕ್ರೋ ದೇವಸ್ತು ವಿಜ್ಞೇಯೋ ಭಾರ್ಗವೋಽ ಸುರ ಯಾಜಕಃ ॥

ಬೃಹತ್ತೇಜಾಃ ಸ್ಮೃತೋ ದೇವೋ ದೇವಾಚಾರ್ಯೋಽಂಗಿರಾ ಸುತಃ ।
ಬುಧೋ ಮನೋಹರಶ್ಚೈವ ಋಷಿಪುತ್ರಸ್ತು ಸ ಸ್ಮೃತಃ ॥೧೮॥

---

೧೪–೧೫. ಎಲ್ಲಾ ಮನ್ವಂತರಗಳಲ್ಲಿಯೂ, ಇವು ದೇವತೆಗಳಿಗೆ ವಾಸಸ್ಥಾನವಾಗಿವೆ. ಇಲ್ಲಿ ಇವಕ್ಕೆ ಅಭಿಮಾನಿಗಳಾದ ದೇವತೆಗಳು ವಾಸಮಾಡುತ್ತಾರೆ. ಹಿಂದೆ ಇದ್ದ, ಈಗ ಇರುವ, ಮುಂದೆ ಬರುವ ದೇವತೆಗಳಿಗೆ ಈ ರೀತಿಯಾಗಿ ತ್ರಿಕಾಲದಲ್ಲಿಯೂ, ಅವು ಆಶ್ರಯಸ್ಥಾನ ಗಳಾಗಿವೆ

೧೬. ಈ ಮನ್ವಂತರದಲ್ಲಿಯೂ ಗ್ರಹಗಳು ದೇವತಾಸ್ಥಾನಗಳಾ ಗಿಯೇ ಇವೆ. ಅದಿತಿಯ ಮಗನಾದ ವಿವಸ್ವಂತನಾದ ಎಂದರೆ ರಶ್ಮಿ ಗಳುಳ್ಳ, ಸೂರ್ಯನು, ಈ ವೈವಸ್ವತಮನ್ವಂತರದಲ್ಲಿ ಸೂರ್ಯನಾಗಿರುತ್ತಾನೆ.

೧೭. ಕಾಂತಿಯುಳ್ಳ ಋಷಿಯ ಮಗನಾದ ಚಂದ್ರನು 'ವಸು' ಎಂದು ಕರೆಯಲ್ಪಡುತ್ತಾನೆ. ಅಸುರರಿಗೆ ಯಾಗಮಾಡಿಸುವ ಪುರೋ ಹಿತನಾದ ಭಾರ್ಗವನು "ಶುಕ್ರನೆಂದು" ಕರೆಯಲ್ಪಡುತ್ತಾನೆ.

೧೮. ವಿಶೇಷ ಪ್ರಕಾಶವುಳ್ಳ ಅಂಗಿರಸ್ಸಿನ ಮಗನಾದ ಗುರುವು ದೇವತೆಗಳಿಗೆ ಗುರುವಾಗಿದ್ದಾನೆ. ಮನೋಹರನಾದ ಬುಧನು ಋಷಿಯ ಮಗನಾಗಿದ್ದಾನೆ.

ಶನೈಶ್ಚರೋ ವಿರೂಪಸ್ತು ಸಂಜ್ಞಾ ಪುತ್ರೋ ವಿವಸ್ವತಃ ।
ಅಗ್ನಿ ರ್ವಿಕೇಶ್ಯಾಂ ಜಜ್ಞೇ ತು ಯುವಾಽ ಸೌ ಲೋಹಿತಾರ್ಚಿಷಃ ॥
ನಕ್ಷತ್ರ ಋಕ್ಷ ನಾಮಿನ್ಯೋ ದಾಕ್ಷಾಯಣ್ಯ ಸ್ತು ತಾಃ ಸ್ಮೃತಾಃ ।
ಸ್ವರ್ಭಾನುಃ ಸಿಂಹಿಕಾ ಪುತ್ರೋ ಭೂತ ಸಂತಾಪನೋಽ ಸುರಃ॥೨೦॥
ಸೋಮರ್ಕ್ಷ್ರಗ್ರಹ ಸೂರ್ಯೇಷು ಕೀರ್ತಿತಾ ಸ್ತ್ವಭಿಮಾನಿನಃ ।
ಸ್ಥಾನಾ ನ್ಯೇತಾ ನ್ಯಥೋಕ್ತಾನಿ ಸ್ಥಾನಿ ನ್ಯಶ್ಚೈವ ದೇವತಾಃ ॥೨೧॥
ಸೌರಮಗ್ನಿಮಯಂ ಸ್ಥಾನಂ ಸಹಸ್ರಾಂಶೋ ರ್ವಿವಸ್ವತಃ ।
ಹಿಮಾಂಶೋಸ್ತು ಸ್ಮೃತಂ ಸ್ಥಾನ ಮಮ್ಮಯಂ ಶುಕ್ಲಮೇವ ಚ ॥

---

೧೯. ಒಳ್ಳೆಯ ರೂಪವಿಲ್ಲದ ಶನಿಯು ವಿವಸ್ವಂತನ ಹೆಂಡತಿಯಾದ ಸಂಜ್ಞಾದೇವಿಯ ಮಗನು. ಆದರೆ ಪ್ರಕಾಶಮಾನನಾದ ಅಗ್ನಿಯು ರುದ್ರಪತ್ನಿಯಾದ ವಿಕೇಶಿಯಲ್ಲಿ ಹುಟ್ಟಿದನು. ಇವನೇ ಕುಮಾರನಾದ ಅಂಗಾರಕನು.

೨೦. ನಕ್ಷತ್ರಗಳು ಮತ್ತು ತಾರೆಗಳು "ದಾಕ್ಷಾಯಣಿ" ಎಂದೂ ಹೆಸರಾಗಿವೆ. ಜಗತ್ತಿಗೆ ಸಂತಾಪವನ್ನುಂಟುಮಾಡುವ ರಾಹುವು ಸಿಂಹಿಕಾದೇವಿಯ ಮಗನಾದ್ದಾನೆ.

೨೧. ಚಂದ್ರ, ನಕ್ಷತ್ರಗಳು, ಗ್ರಹಗಳು, ಮತ್ತೂ ಸೂರ್ಯನೂ, ಅಭಿಮಾನದೇವತೆಗಳೆಂದು ಹೇಳಲ್ಪಟ್ಟಿದ್ದಾರೆ. ಇವರಿಗೆ ಕೆಳಗೆ ಈ ಮುಂದೆ ಹೇಳುವಂತೆ ಸ್ಥಾನಗಳುಂಟು. ಅಲ್ಲಿ ವಾಸವಾಗಿರುವ ದೇವತೆಗಳೂ ಇವರೇ.

೨೨. ಸಾವಿರಾರು ಕಿರಣಗಳುಳ್ಳ ಸೂರ್ಯನಿಗೆ ಪ್ರಕಾಶಮಾನವಾದ ಸೌರಸ್ಥಾನವೆಂದು ತಿಳಿಯಬೇಕು. ಚಂದ್ರನಿಗೆ ಜಲರೂಪವಾದ ಶುಭ್ರವಾದ ಸ್ಥಾನವಿದೆ.

ಆಪ್ಯಂ ಶ್ಯಾಮಂ ಮನೋಜ್ಞಂಚ ಬುಧ ರಶ್ಮಿಗ್ರಹಂ ಸ್ಮೃತಂ ।
ಶುಕ್ರ ಸ್ಯಾಪ್ಯ ಮ್ಮಯಂ ಶುಕ್ಲಂ ಪದಂ ಷೋಡಶ ರಶ್ಮಿವತ್ ॥

ನವರಶ್ಮಿ ತು ಭೌಮಸ್ಯ ಲೋಹಿತಂ ಸ್ಥಾನ ಮುತ್ತಮಂ ।
ಹರಿದ್ರಾಭಂ ಬೃಹಚ್ಚಾಪಿ ಷೋಡಶಾರ್ಚಿಃ ಬೃಹಸ್ಪತೇಃ ॥೨೪॥

ಅಷ್ಟರಶ್ಮಿ ಗ್ರಹಂ ಚಾಪಿ ಪ್ರೋಕ್ತಂ ಕೃಷ್ಣಂ ಶನೈಶ್ಚರೇ ।
ಸ್ವರ್ಭಾನೋಃ ಸ್ತಾಮಸಂ ಸ್ಥಾನಂ ಭೂತ ಸಂತಾಪನಾಲಯಂ ॥

ವಿಜ್ಞೇಯಾಸ್ತಾರಕಾಃ ಸರ್ವಾಸ್ತ್ವೃಷಯಃ ಸ್ತ್ವೇಕ ರಶ್ಮಯಃ ।
ಆಶ್ರಯಾಃ ಪುಣ್ಯಕೀರ್ತೀನಾಂ ಶುಕ್ಲಾಶ್ಚಾಪಿ ಸ್ವವರ್ಣತಃ ॥೨೬॥

ಘನತೋಯಾತ್ಮಿಕಾಜ್ಞೇಯಾಃ ಕಲ್ಪಾದಾವೇವ ನಿರ್ಮಿತಾಃ ।
ಆದಿತ್ಯ ರಶ್ಮಿಸಂಯೋಗಾತ್ ಸಂಪ್ರಕಾಶಾತ್ಮಿಕಾಃ ಸ್ಮೃತಾಃ ॥೨೭॥

---

೨೩. ಬುಧನ ಪ್ರಕಾಶಮಾನವಾದ ಮನೆಯು ಜಲಪೂರ್ಣವಾಗಿಯೂ, ನೀಲಿಬಣ್ಣವುಳ್ಳದ್ದಾಗಿಯೂ, ಮನೋಹರವಾಗಿಯೂ, ಇದೆ, ಎಂದು ತಿಳಿಯಬೇಕು. ಶುಕ್ರನಸ್ಥಾನವೂ ಕೂಡ ಜಲಪೂರ್ಣವಾಗಿಯೂ, ಶುಭ್ರವಾಗಿಯೂ, ಹದಿನಾರು ಕಿರಣಗಳ ಪ್ರಕಾಶದಿಂದ ಕೂಡಿದ್ದಾಗಿಯೂ ಇದೆ.

೨೪. ಮಂಗಳನ ಸ್ಥಾನವು ಒಂಬತ್ತು ಕಿರಣಗಳಿಂದ ಪ್ರಕಾಶಮಾನವಾಗಿಯೂ, ಕೆಂಪಾಗಿಯೂ, ಶ್ರೇಷ್ಠವಾಗಿದೆ. ಗುರುವಿನ ಸ್ಥಾನವು ದೊಡ್ಡದಾಗಿಯೂ, ಹದಿನಾರು ಕಿರಣಗಳಿಂದ ಬೆಳಗುತ್ತಲೂ, ಹಳದಿಯ ಬಣ್ಣವಾಗಿಯೂ ಇದೆ.

೨೫. ಶನಿಯ ಮನೆಯು ಎಂಟು ಕಿರಣಗಳುಳ್ಳದ್ದಾಗಿಯೂ, ಕಪ್ಪಾಗಿಯೂ, ಇದೆ. ರಾಹುವಿನ ಕತ್ತಲಾದ ಸ್ಥಾನವು ಲೋಕಕ್ಕೆ ಸಂಕಟ ವನ್ನೂ ಪ್ರಾಣಿಗಳಿಗೆ ಸಂತಾಪವನ್ನೂ ಕೊಡತಕ್ಕದ್ದಾಗಿದೆ.

೨೬-೨೭. ತಾರೆಗಳೆಲ್ಲವೂ ಪುಣ್ಯವಂತರಿಗೆ ಆಶ್ರಯಗಳಾಗಿಯೂ, ಬೆಳ್ಳಗೂ, ಒಂದು ಕಿರಣದಿಂದ ಬೆಳಗುತ್ತಲೂ, ಪವಿತ್ರವಾದವುಗಳಾಗಿವೆ, ಎಂದು ತಿಳಿಯಬೇಕು. ಇವು ಸೂರ್ಯಕಿರಣಗಳ ಸಂಬಂಧದಿಂದ ಪ್ರಕಾಶಮಾನವಾಗಿಯೂ ಇವೆ.

ನವಯೋಜನ ಸಾಹಸ್ರೋ ವಿಷ್ಕಂಭಃ ಸವಿತುಃ ಸ್ಮೃತಃ ।
ತ್ರಿಗುಣಸ್ತಸ್ಯವಿಸ್ತಾರೋ ಮಂಡಲಸ್ಯ ಪ್ರಮಾಣತಃ ॥೨೮॥

ದ್ವಿಗುಣಃ ಸೂರ್ಯವಿಸ್ತಾರಾ ದ್ವಿಸ್ತಾರಃ ಶಶಿನಃ ಸ್ಮೃತಃ ।
ತುಲ್ಯಸ್ತಯೋಸ್ತು ಸ್ವರ್ಭಾನು ರ್ಭೂತ್ವಾಽಧಸ್ತಾತ್ಪ್ರಸರ್ಪತಿ ॥೨೯॥

ಉದ್ಧೃತ್ಯ ಪೃಥಿವೀಛಾಯಾಂ ನಿರ್ಮಿತಾಂ ಮಂಡಲಾಕೃತಿಂ ।
ಸ್ವರ್ಭಾನೋಸ್ತು ಬೃಹತ್ಸ್ಥಾನಂ ತೃತೀಯಂ ಯತ್ತಮೋಮಯಂ॥

ಆದಿತ್ಯಾತ್ತಚ್ಚ ನಿಷ್ಕ್ರಮ್ಯ ಸಮಂ ಗಚ್ಛತಿ ಪರ್ವಸು ।
ಆದಿತ್ಯಮೇತಿ ಸೋಮಾಚ್ಚ ಪುನಃ ಸೌರೇಷು ಪರ್ವಸು ॥೩೦॥

ಸ್ವರ್ಭಾನುಂ ನುದತೇ ಯಸ್ಮಾತ್ತಸ್ಮಾತ್ಸ್ವರ್ಭಾನು ರುಚ್ಯತೇ ।
ಚಂದ್ರಸ್ಯ ಷೋಡಶೋ ಭಾಗೋ ಭಾರ್ಗವಸ್ಯ ವಿಧೀಯತೇ ॥೩೨॥

---

೨೮. ಸೂರ್ಯನ ಮಂಡಲದ ವ್ಯಾಸವು ಒಂಬತ್ತುಸಾವಿರಯೋಜನ ವಿಸ್ತಾರವುಳ್ಳದ್ದಾಗಿದೆ. ಮಂಡಲದ ಪರಿಧಿಯು ಅಳತೆಯಲ್ಲಿ ವ್ಯಾಸದ ಮೂರರಷ್ಟು ಹೆಚ್ಚಾಗಿರುತ್ತದೆ.

೨೯. ಸೂರ್ಯನ ವಿಸ್ತಾರಕ್ಕಿಂತಲೂ, ಚಂದ್ರನ ವಿಸ್ತಾರವು ಇಮ್ಮಡಿಯಾಗಿರುವುದೆಂದು ಹೇಳಲ್ಪಟ್ಟಿದೆ. ಅವರಿಬ್ಬರಿಗೂ ಒಟ್ಟು ವಿಸ್ತಾರದಲ್ಲಿ ಸಮನಾಗಿ ರಾಹುವು ಕೆಳಗಡೆ ಚಲಿಸುತ್ತಾನೆ.

೩೦. ಮಂಡಲಾಕಾರವಾಗಿರುವ ಭೂಮಿಯ ನೆರಳನ್ನು ತೆಗೆದುಕೊಂಡು ರಾಹುವಿನ ಸ್ಥಾನವು ನಿರ್ಮಾಣಮಾಡಲ್ಪಟ್ಟಿದೆ. ಅದು ಬಹು ದೊಡ್ಡದಾಗಿ ಕತ್ತಲೆಯಿಂದ ತುಂಬಿದೆ.

೩೧–೩೨. ಸೂರ್ಯನಿಂದ ತೇಜಸ್ಸು ಪೌರ್ಣಿಮೆಗಳಲ್ಲಿ ಚಂದ್ರನನ್ನು ಸೇರುತ್ತದೆ. ಪುನಃ ಸೂರ್ಯನನ್ನು ಚಂದ್ರನಿಂದ ಹಿಂತಿರುಗಿ ಬಂದು ಪರ್ವ ದಿನಗಳಲ್ಲಿ ಸೇರುತ್ತದೆ. ಆಕಾಶದಲ್ಲಿರುವ ಸೂರ್ಯನನ್ನು ಪ್ರೇರಿಸೋಣದ ರಿಂದ ರಾಹುವಿಗೆ "ಸ್ವರ್ಭಾನು" ಎಂಬ ಹೆಸರು ಬಂದಿದೆ. ಚಂದ್ರನ ಹದಿನಾರನೆಯ ಒಂದು ಭಾಗದಷ್ಟು ವಿಸ್ತಾರವು ಶುಕ್ರನಿಗಿದೆ ಎಂದು ತಿಳಿಯಬೇಕು.

ವಿಷ್ಕಂಭಾ ನ್ಮಂಡಲಾ ಚ್ಚೈವ ಯೋಜನಾಗ್ರಾತ್ಪ್ರಮಾಣತಃ ।
ಭಾರ್ಗವಾತ್ಪಾದ ಹೀನಸ್ತು ವಿಜ್ಞೇಯೋ ವೈ ಬೃಹಸ್ಪತಿಃ ॥೩೩॥

ಬೃಹಸ್ಪತೇಃ ಪಾದಹೀನೌ ವಕ್ರ ಸೌರೀ ಉಭೌ ಸ್ಮೃತೌ ।
ವಿಸ್ತಾರಾ ನ್ಮಂಡಲಾ ಚ್ಚೈವ ಪಾದಹೀನಸ್ತಯೋ ರ್ಬುಧಃ ॥೩೪॥

ತಾರಾ ನಕ್ಷತ್ರ ರೂಪಾಣಿ ವಪುಷ್ಮಂತೀಹ ಯಾನಿ ವೈ ।
ಬುಧೇನ ತಾನಿ ತುಲ್ಯಾನಿ ವಿಸ್ತಾರಾ ನ್ಮಂಡಲಾ ಚ್ಚ ವೈ ॥೩೫॥

ಪ್ರಾಯಶ ಶ್ಚಂದ್ರ ಯೋಗೀನಿ ವಿದ್ಯಾ ದೃಕ್ಷಾಣಿ ತತ್ತ್ವವಿತ್ ।
ತಾರಾ ನಕ್ಷತ್ರ ರೂಪಾಣಿ ಹೀನಾನಿ ತು ಪರಸ್ಪರಂ ॥೩೬॥

ಶತಾನಿ ಪಂಚ ಚತ್ವಾರಿ ತ್ರೀಣಿ ದ್ವೇ ಚೈವ ಯೋಜನೇ ।
ಸರ್ವೋಪರಿ ನಿಕೃಷ್ಟಾನಿ ತಾರಕಾ ಮಂಡಲಾನಿ ತು ॥೩೭॥

---

೩೩. ಗುರುವಿನ ಮಧ್ಯಭಾಗ ವ್ಯಾಸ ಮತ್ತು ಮಂಡಲ ಪರಿಧಿಗಳ ಯೋಜನವನ್ನು ಲೆಕ್ಕ ಹಾಕಿದರೆ ಅವನು ಶುಕ್ರನಿಗಿಂತಲೂ ಕಾಲುಭಾಗ ಕಡಿಮೆಯಾಗಿರುವನೆಂದು ಗೊತ್ತಾಗುವುದು.

೩೪. ಮಂಡಲದ ವಿಸ್ತಾರವನ್ನು ಲೆಕ್ಕ ಹಾಕಿದರೆ ಮಂಗಳ ಮತ್ತು ಗುರುಗಳು ಗುರುವಿಗಿಂತ ಕಾಲುಭಾಗ ಕಡಿಮೆಯಾಗಿ ಇರುವವರೂ, ಇವರುಗಳಿಗಿಂತ ಬುಧನು ಕಾಲುಭಾಗ ಕಡಿಮೆ ಇರುವವನೂ, ಎಂಬುದು ಗೊತ್ತಾಗುವುದು.

೩೫. ಆಕಾರವುಳ್ಳ ತಾರೆಗಳು, ನಕ್ಷತ್ರಗಳು ಮುಂತಾದುವುಗಳು ಒಟ್ಟುಕೂಡಿ ಬುಧನ ಮಂಡಲದ ವಿಸ್ತಾರಕ್ಕೆ ಸಮವಾಗುವುವು, ಎಂದು ತಿಳಿಯಬೇಕು.

೩೬–೩೭. ತಾರೆಗಳು ಮತ್ತು ನಕ್ಷತ್ರಗಳು ಇವೆಲ್ಲವೂ ಪ್ರಾಯಃ ಚಂದ್ರನ ಸಂಬಂಧವುಳ್ಳವುಗಳು ಎಂದು ಪ್ರಾಜ್ಞನಾದವನು ತಿಳಿಯಬೇಕು. ಈ ತಾರೆಗಳು ಮತ್ತು ನಕ್ಷತ್ರಗಳು ತಂತಮ್ಮಲ್ಲಿಯೇ ನೂರು, ಐದು ನಾಲ್ಕು, ಮತ್ತು ಮೂರು, ಯೊಜನಗಳಷ್ಟು ವಿಸ್ತಾರದಲ್ಲಿ ಕಡಿಮೆಯಾ

ಯೋಜನಾ ನ್ಯರ್ಧಮಾತ್ರಾಣಿ ತೇಭ್ಯೋ ಹ್ರಸ್ವಂ ನ ವಿದ್ಯತೇ ।
ಉಪರಿಷ್ಟಾತ್ ತ್ರಯಸ್ತೇಷಾಂ ಗ್ರಹಾಸ್ತೇ ದೂರಸರ್ಪಿಣಃ ॥೩೮॥
ಸೌರೋಽಂಗಿರಾಶ್ಚ ವಕ್ರಶ್ಚ ಜ್ಞೇಯಾ ಮಂದ ವಿಚಾರಿಣಃ ।
ಪೂರ್ವಮೇವ ಸಮಾಖ್ಯಾತಾ ಗತಿ ಸ್ತೇಷಾಂ ಯಥಾ ಕ್ರಮಂ ॥
ಏತೇ ಷ್ವೇವ ಗ್ರಹಾಃ ಸರ್ವೇ ನಕ್ಷತ್ರೇಷು ಸಮುತ್ಥಿತಾಃ ।
ವಿವಸ್ವಾ ನದಿತೇಃ ಪುತ್ರಃ ಸೂರ್ಯೋ ವೈ ಮುನಿ ಸತ್ತಮಾಃ ॥೪೦॥
ವಿಶಾಖಾಸು ಸಮುತ್ಪನ್ನೋ ಗ್ರಹಾಣಾಂ ಪ್ರಥಮೋ ಗ್ರಹಃ ।
ತ್ವಿಷಿಮಾನ್ ಧರ್ಮ ಪುತ್ರಸ್ತು ಸೋಮೋ ದೇವೋ ವಸು ಸ್ತು ಸಃ॥
ತಾರಾಗ್ರಹಾಣಾಂ ಪ್ರವರ ಸ್ತಿಷ್ಯೇ ಕ್ಷೇತ್ರೇ ಸಮುತ್ಥಿತಃ ।
ಗ್ರಹಶ್ಚಾಂಗಿರಸಃ ಪುತ್ರೋ ದ್ವಾದಶಾರ್ಚಿ ಬೃಹಸ್ಪತಿಃ ॥೪೩॥

---

ಗಿವೆ. ಎಲ್ಲದಕ್ಕಿಂತಲೂ ಕಮ್ಮಿ ವಿಸ್ತಾರವುಳ್ಳದ್ದು ತಾರಾಮಂಡಲವು. ಎಂದು ತಿಳಿಯಬೇಕು. ಅವುಗಳಲ್ಲಿ ಅರ್ಧಯೋಜನ ವಿಸ್ತಾರವುಳ್ಳವುಗಳೂ ಇವೆ. ಅವಕ್ಕಿಂತ ಕಮ್ಮಿಯಾಗಿರುವುವೇ ಇಲ್ಲ. ಇವುಗಳ ಮೇಲೆ ಬಹುದೂರ ಚಲಿಸುವ ಮೂರು ಗ್ರಹಗಳಿವೆ.

೩೯. ಈ ಗ್ರಹಗಳು ಸೂರ್ಯ, ಗುರು ಮತ್ತು ಮಂಗಳಗಳೆಂದು ತಿಳಿಯಬೇಕು. ಇವರುಗಳ ಚಲನ ವಿಚಾರವನ್ನು ಹಿಂದೆಯೇ ಹೇಳಿದೆ.

೪೦. ಈ ನಕ್ಷತ್ರಗಳಿಂದಲೇ ಎಲ್ಲಾ ಗ್ರಹಗಳೂ ಹುಟ್ಟಿವೆ. ಎಲೈ ಋಷಿಶ್ರೇಷ್ಠರೇ, "ವಿವಸ್ವಾನ್" ಎಂದು ಕರೆಯಲ್ಪಡುವ ಸೂರ್ಯನು ಅದಿತಿಯ ಮಗನು.

೪೧. ಗ್ರಹಗಳಲ್ಲೆಲ್ಲಾ ಮೊದಲನೆಯ ಗ್ರಹವಾದ ಸೂರ್ಯಗ್ರಹವು, ವಿಶಾಖಾ ನಕ್ಷತ್ರಗಳಲ್ಲಿ ಹುಟ್ಟಿದ್ದು ಎಂದೂ, ಕಾಂತಿಯುಕ್ತನಾದ ಚಂದ್ರನು ಧರ್ಮನ ಮಗನು ಎಂದೂ ತಿಳಿಯಬೇಕು.

೪೨–೪೩. ತಾರೆಗಳಲ್ಲಿಯೂ, ಗ್ರಹಗಳಲ್ಲಿಯೂ ಶ್ರೇಷ್ಠನಾದ, ಜಗತ್ತಿಗೆ ಗುರುವಾದ ಮತ್ತು ಹನ್ನೆರಡು ಕಿರಣಗಳಿಂದ ಪ್ರಕಾಶಿಸುವ ಗುರುವು

ಫಾಲ್ಗುನೀಷು ಸಮುತ್ಪನ್ನಃ ಪೂರ್ವಾಖ್ಯಾಸು ಜಗದ್ಗುರುಃ ।
ನವಾರ್ಚಿ ರ್ಲೋಹಿತಾಂಗಶ್ಚ ಪ್ರಜಾಪತಿ ಸುತೋ ಗ್ರಹಃ ॥೪೪॥

ಆಷಾಢಾಸ್ವಿಹ ಪೂರ್ವಾಸು ಸಮುತ್ಪನ್ನ ಇತಿ ಸ್ಮೃತಃ ।
ರೇವತೀಷ್ವೇವ ಸಪ್ತಾರ್ಚಿಃ ಸ್ಥಾನೇ ಸೌರಿಃ ಶನೈಶ್ಚರಃ ॥೪೫॥

ಸೌಮ್ಯೋ ಬುಧೋ ಧನಿಷ್ಠಾಸು ಪಂಚಾರ್ಚಿರುದಿತೋ ಗ್ರಹಃ ।
ತಮೋಮಯೋ ಮೃತ್ಯುಸುತಃ ಪ್ರಜಾಕ್ಷಯ ಕರಃ ಶಿಖೀ ॥೪೬॥

ಆಶ್ಲೇಷಾಸು ಸಮುತ್ಪನ್ನಃ ಸರ್ವಹಾರೀ ಮಹಾಗ್ರಹಃ ।
ತಥಾ ಸ್ವನಾಮಭೇಯೇಷು ದಾಕ್ಷಾಯಣ್ಯಃ ಸಮುತ್ಥಿತಾಃ ॥೪೭॥

ತಮೋ ವೀರ್ಯಮಯೋ ರಾಹುಃ ಪ್ರಕೃತ್ಯಾ ಕೃಷ್ಣ ಮಂಡಲಃ ।
ಭರಣೀ ಷು ಸಮುತ್ಪನ್ನೋ ಗ್ರಹ ಶ್ಚಂದ್ರಾರ್ಕ ಮರ್ದನಃ ॥೪೮॥

---

ತಿಷ್ಯವೆಂಬ ನಕ್ಷತ್ರಸ್ಥಾನದಲ್ಲಿ ಹುಟ್ಟಿದವನೂ, ಆಂಗಿರಸ್ಸಿನ ಮಗನೂ, ಆಗಿದ್ದಾನೆ. ಇವನು ಪೂರ್ವ ಫಾಲ್ಗುನೀ ನಕ್ಷತ್ರದಲ್ಲಿ ಹುಟ್ಟಿದವನು. ಬ್ರಹ್ಮನ ಮಗನಾದ ಮಂಗಳನು, ಒಂಬತ್ತು ಕಿರಣಗಳುಳ್ಳವನೂ, ಕೆಂಪುವರ್ಣವುಳ್ಳವನೂ, ಆಗಿದ್ದಾನೆ. ಇವನು ಪೂರ್ವಾಷಾಢಾ ನಕ್ಷತ್ರದಲ್ಲಿ ಹುಟ್ಟಿದವನು. ಏಳು ಕಿರಣಗಳುಳ್ಳ ಸೂರ್ಯನ ಮಗನಾದ ಶನಿಯು ರೇವತೀ ನಕ್ಷತ್ರದಲ್ಲಿ ಹುಟ್ಟಿದನು.

೪೬–೪೭. ಐದು ಕಿರಣಗಳುಳ್ಳ ಸೋಮನ ಮಗನಾದ ಬುಧನು ಧನಿಷ್ಠಾನಕ್ಷತ್ರದಲ್ಲಿ ಹುಟ್ಟಿದವನು. ಕತ್ತಲೇ ತುಂಬಿರುವ, ಯಮನ ಮಗನಾದ ಮತ್ತು ಪ್ರಪಂಚಕ್ಕೆ ನಾಶವನ್ನುಂಟುಮಾಡುವ, ಕಿಡಿಗಳನ್ನು ಕಾರುವ, ಕೇತುವು ಎಲ್ಲವನ್ನೂ ನುಂಗುವ ಶಕ್ತಿಯುಳ್ಳವನೂ, ದೊಡ್ಡ ಗ್ರಹವೂ ಆಗಿದ್ದಾನೆ. ಇವನು ಆಶ್ಲೇಷಾನಕ್ಷತ್ರದಲ್ಲಿ ಹುಟ್ಟಿದವನು. ಹೀಗೆಯೇ ಇವರ ಹೆಸರಿನಲ್ಲೇ ದಾಕ್ಷಾಯಣೀ ಗ್ರಹಗಳು ಉತ್ಪನ್ನವಾಗಿವೆ.

೪೮. ಕತ್ತಲಿನಿಂದ ತುಂಬಿರುವ ವೀರ್ಯವಂತನಾದ ರಾಹುವು ಸ್ವಭಾವವಾಗಿ ಕಪ್ಪಾದ ಮಂಡಲವುಳ್ಳವನಾಗಿದ್ದಾನೆ. ಇವನು ಚಂದ್ರ ಸೂರ್ಯರಿಗೆ, ತೊಂದರೆ ಕೊಡುವವನೂ, ಭರಣಿನಕ್ಷತ್ರದಲ್ಲಿ ಹುಟ್ಟಿದವನೂ ಆಗಿದ್ದಾನೆ.

ಏತೇ ತಾರಾ ಗ್ರಹಾ ಶ್ಚಾಪಿ ಬೋದ್ಧವ್ಯಾ ಭಾರ್ಗವಾದಯಃ ।
ಜನ್ಮ ನಕ್ಷತ್ರ ಪೀಡಾಸು ಯಾಂತಿ ವೈಗುಣ್ಯತಾಂ ಯತಃ ॥೪೯॥
ಮುಚ್ಯತೇ ತೇನ ದೋಷೇಣ ತತಸ್ತದ್ಗ್ರಹ ಭಕ್ತಿತಃ ।
ಸರ್ವ ಗ್ರಹಾಣಾ ಮೇತೇಷಾ ಮಾದಿ ರಾದಿತ್ಯ ಉಚ್ಯತೇ ॥೫೦॥
ತಾರಾಗ್ರಹಾಣಾಂ ಶುಕ್ರಸ್ತು ಕೇತೂನಾಂ ಚಾಪಿ ಧೂಮವಾನ್ ।
ಧ್ರುವಃ ಕಿಲ ಗ್ರಹಾಣಾಂ ತು ವಿಭಕ್ತಾನಾಂ ಚತುರ್ದಿಶಮ್ ॥೫೧॥
ನಕ್ಷತ್ರಾಣಾಂ ಶ್ರವಿಷ್ಠಾಸ್ಯಾದಯನಾನಾಂ ತಥೋತ್ತರಂ ।
ವರ್ಷಾಣಾಂ ಚೈವ ಪಂಚಾನಾ ಮಾದ್ಯಃ ಸಂವತ್ಸರಃ ಸ್ಮೃತಃ ॥೫೨॥
ಋತೂನಾಂ ಶಿಶಿರ ಶ್ಚಾಪಿ ಮಾಸಾನಾಂ ಮಾಘ ಉಚ್ಯತೇ ।
ಪಕ್ಷಾಣಾಂ ಶುಕ್ಲ ಪಕ್ಷಸ್ತು ತಿಥೀನಾಂ ಪ್ರತಿಪತ್ತಥಾ ॥೫೩॥

---

೪೯. ತಾರೆಗಳನ್ನೂ ಮತ್ತು ಶುಕ್ರನೇ ಮೊದಲಾದ ಗ್ರಹಗಳ ವಿಷಯಗಳನ್ನೂ ಚೆನ್ನಾಗಿ ತಿಳಿದಿರಬೇಕು. ಏಕೆಂದರೆ ಹುಟ್ಟುವ ಕಾಲದ ನಕ್ಷತ್ರವೇ ಮೊದಲಾದ ಗ್ರಹಗಳಿಂದ ಪೀಡೆಯುಂಟಾದಾಗ ಇವುಗಳು ಪ್ರತಿಕೂಲಗಳಾಗಿರುತ್ತವೆ.

೫೦. ಈ ಗ್ರಹಗಳ ವಿಷಯುವನ್ನು ತಿಳಿದಿದ್ದರೆ ಗ್ರಹಗಳಿಂದುಂಟಾದ ತೊಂದರೆಯನ್ನು ಪರಿಹಾರ ಮಾಡಿಕೊಳ್ಳಬಹುದು. ಎಲ್ಲಾ ಗ್ರಹಗಳಿಗೂ ಸೂರ್ಯನೇ ಮೊದಲನೆಯವನೆಂದು ಹೇಳಲ್ಪಟ್ಟದೆ.

೫೧. ತಾರೆಗಳಿಗೂ ಮತ್ತು ಗ್ರಹಗಳಿಗೂ ಶುಕ್ರನು, ಕತ್ತಲೆಯಿಂದ ತುಂಬಿದ ಗ್ರಹಗಳಿಗೆ ರಾಹುಕೇತುಗಳು, ನಾಲ್ಕುದಿಕ್ಕಿನಲ್ಲಿಯೂ ಹರಡಿರುವ ನಕ್ಷತ್ರಗಳಿಗೆ ಧ್ರುವನಕ್ಷತ್ರವೂ, ಮೊದಲನೆಯದೆಂದು ತಿಳಿಯಬೇಕು.

೫೨. ನಕ್ಷತ್ರಗಳಿಗೆ ಧನಿಷ್ಠಾ ನಕ್ಷತ್ರವೂ, ಅಯನಗಳಿಗೆ ಉತ್ತರಾಯಣವೂ, ಐದುವರ್ಷಗಳಲ್ಲಿ ಸಂವತ್ಸರವೇ ಮೊದಲನೆಯದೆಂದು ತಿಳಿಯಬೇಕು.

೫೩–೫೪. ಋತುಗಳಲ್ಲಿ ಶಿಶಿರಋತುವೂ, ಮಾಸಗಳಲ್ಲಿ ಮಾಘಮಾಸವೂ, ಪಕ್ಷಗಳಲ್ಲಿ ಶುಕ್ಲಪಕ್ಷವೂ, ಮೊದಲನೆಯದೆಂದು ತಿಳಿಯ

ಅಹೋರಾತ್ರ ವಿಭಾಗಾನಾಂ ಅಹಶ್ಚಾದಿಃ ಪ್ರಕೀರ್ತಿತಃ ।
ಮುಹೂರ್ತಾನಾಂ ತಥೈವಾದಿ ರ್ಮುಹೂರ್ತೋ ರುದ್ರ ದೈವತಃ ॥

ಕ್ಷಣ ಶ್ಚಾಪಿ ನಿಮೇಷಾದಿಃ ಕಾಲಃ ಕಾಲವಿದಾಂ ವರಾಃ ।
ಶ್ರವಣಾಂತಂ ಘನಿಷ್ಠಾದಿ ಯುಗಂ ಸ್ಯಾ ತ್ಪಂಚ ವಾರ್ಷಿಕಂ ॥೫೫॥

ಭಾನೋರ್ಗತಿ ರ್ವಿಶೇಷೇಣ ಚಕ್ರವತ್ಪರಿವರ್ತತೇ ।
ದಿವಾಕರಃ ಸ್ಮೃತ ಸ್ತಸ್ಮಾತ್ ಕಾಲ ಕೃದ್ವಿಭು ರೀಶ್ವರಃ ॥೫೬॥

ಚತು ರ್ವಿಧಾನಾಂ ಭೂತಾನಾಂ ಪ್ರವರ್ತಕ ನಿವರ್ತಕಃ ।
ತಸ್ಯಾಪಿ ಭಗವಾನ್ ರುದ್ರಃ ಸಾಕ್ಷಾದ್ದೇವಃ ಪ್ರವರ್ತಕಃ ॥೫೭॥

ಇತ್ಯೇಷ ಜ್ಯೋತಿಷಾ ಮೇವಂ ಸನ್ನಿವೇಶೋಽರ್ಥ ನಿಶ್ಚಯಃ ।
ಲೋಕ ಸಂ ವ್ಯವಹಾರಾರ್ಥಂ ಮಹಾದೇವೇನ ನಿರ್ಮಿತಃ ॥೫೮॥

---

ಬೇಕು. ಹಾಗೆಯೇ ತಿಥಿಗಳಲ್ಲಿ ಪಾಡ್ಯವೂ, ರಾತ್ರಿ, ಹಗಲು, ಎರಡ ರಲ್ಲಿ, ಹಗಲೂ, ಮುಹೂರ್ತಗಳಲ್ಲಿ ರುದ್ರದೇವತೆಯುಳ್ಳ ರುದ್ರಮು ಹೂರ್ತವೂ ಮೊದಲನೆಯದೆಂದು ಹೇಳಲ್ಪಟ್ಟದೆ.

೫೫. ಕಾಲವಿಷಯವನ್ನು ಚೆನ್ನಾಗಿ ಅರಿತಿರುವ ಜ್ಞಾನಿಗಳು ಕಾಲ ವನ್ನು ಕ್ಷಣ, ನಿಮಿಷ, ಮುಂತಾಗಿ ವಿಭಾಗಮಾಡಿದ್ದಾರೆ. ಧನಿಷ್ಠಾ ನಕ್ಷತ್ರವೇ ಮೊದಲುಗೊಂಡು, ಶ್ರವಣನಕ್ಷತ್ರವೇ ಕೊನೆಯಾಗಿರುವ ಐದು ನಕ್ಷತ್ರಕಾಲವನ್ನು ವೃಷ್ಟಿಗರ್ಭ ಸೃಷ್ಟಿಕಾಲವೆಂದು ನಿರ್ಧರಿಸಿರು ತ್ತಾರೆ.

೫೬–೫೮. ಸೂರ್ಯನಚಲನ ವಿಶೇಷದಿಂದ ರಾತ್ರಿಯೂ, ಹಗಲೂ, ಚಕ್ರಾಕಾರವಾಗಿ ಸುತ್ತುತ್ತವೆ. ಆದ್ದರಿಂದಲೇ ಸೂರ್ಯನು ಕಾಲವ್ಯವಸ್ಥೆ ಯನ್ನುಂಟುಮಾಡುವವನೂ, ಹಗಲನ್ನುಂಟುಮಾಡುವ ವ್ಯಾಪಕನಾದ ನಿಯಾಮಕನಾಗಿದ್ದಾನೆ. ನಾಲ್ಕು ವಿಧವಾದ ಮೂಲಭೂತಗಳಿಗೂ ಪ್ರೇರಕನಾಗಿಯೂ, ಅವುಗಳನ್ನು ಹಿಂತಿರುಗಿಸುವವನೂ, ಅವುಗಳಿಗೆ ಸ್ವಾಮಿಯೂ, ಆದ ರುದ್ರಭಗವಂತನೇ ಸೂರ್ಯನ ಚಲನೆಗೂ, ಪ್ರೇರಕ ನಾಗಿದ್ದಾನೆ. ಹೀಗೆ ನಕ್ಷತ್ರಗಳ ಚಲನವಲನಗಳಾಗುತ್ತವೆ ಎಂದು ನಿಶ್ಚಯಿಸಿದೆ. ನಕ್ಷತ್ರಗಳ ಈ ರಚನೆಯು ಈಶ್ವರನಿಂದಲೇ ಪ್ರಪಂಚದ ಉಪಯೋಗಕ್ಕಾಗಿ ಮಾಡಲ್ಪಟ್ಟದೆ.

ಬುದ್ಧಿಪೂರ್ವಂ ಭಗವತಾ ಕಲ್ಪಾದೌ ಸಂಪ್ರವರ್ತಿತಃ ।
ಸ ಆಶ್ರಯೋಽಭಿಮಾನೀ ಚ ಸರ್ವಸ್ಯ ಜ್ಯೋತಿರಾತ್ಮಕಃ ॥೫೯॥

ಏಕ ರೂಪ ಪ್ರಧಾನಸ್ಯ ಪರಿಣಾಮೋಽ ಯ ಮದ್ಭುತಃ ।
ನೈಷ ಶಕ್ಯಃ ಪ್ರಸಂಖ್ಯಾತುಂ ಯಾಥಾ ತಥ್ಯೇನ ಕೇನಚಿತ್ ॥೬೦॥

ಗತಾಗತಂ ಮನುಷ್ಯೇಣ ಜ್ಯೋತಿಷಾಂ ಮಾಂಸಚಕ್ಷುಷಾ ।
ಆಗಮಾ ದನುಮಾನಾಚ್ಚ ಪ್ರತ್ಯಕ್ಷಾ ದುಪಪತ್ತಿತಃ ॥೬೧॥

ಪರೀಕ್ಷ್ಯ ನಿಪುಣಂ ಬುದ್ಧ್ಯಾ ಶ್ರದ್ಧಾ ತವ್ಯಂ ವಿಪಶ್ಚಿತಾ ।
ಚಕ್ಷುಃ ಶಾಸ್ತ್ರಂ ಜಲಂ ಲೇಖ್ಯಂ ಗಣಿತಂ ಮುನಿಸತ್ತಮಾಃ ॥೬೨॥

---

೫೯. ಮೊಟ್ಟಮೊದಲು ಭಗವಂತನಿಂದಲೇ ಇದು ವಿಚಾರಪೂರ್ವಕವಾಗಿ ರಚಿಸಲ್ಪಟ್ಟಿತು. ಎಲ್ಲಾ ನಕ್ಷತ್ರಗಳಿಗೂ ಭಗವಂತನೇ ಆಶ್ರಯನಾಗಿಯೂ, ಅಭಿಮಾನ ದೇವತೆಯಾಗಿಯೂ, ಇರುತ್ತಾನೆ.

೬೦. ಒಂದೇ ಆದ ಪ್ರಕೃತಿಯು ಈ ನಕ್ಷತ್ರರೂಪದಿಂದ ವಿಕಾರವನ್ನು ಹೊಂದಿದೆ. ಇದು ಆಶ್ಚರ್ಯಕರವಾದ ವಿಚಾರವು. ಈ ನಕ್ಷತ್ರಗಳ ಸಮೂಹವನ್ನು ಯಾವನೂ ವಾಸ್ತವವಾಗಿ ಹೀಗೆಯೇ ಸರಿಯೆಂದು ಲೆಕ್ಕ ಹಾಕಲು ಆಗುವುದಿಲ್ಲ.

೬೧–೬೨. ಮನುಷ್ಯನು ಚರ್ಮಚಕ್ಷುಸ್ಸಿನಿಂದ ಈ ನಕ್ಷತ್ರಗಳ ಚಲನವಲನಗಳನ್ನು ಹೀಗೆಯೇ ಸರಿ ಎಂದು ನಿರ್ಣಯಿಸಲು ಆಗವುದಿಲ್ಲ. ಅದಕ್ಕಾಗಿ ವಿದ್ವಾಂಸನಾದವನು ಶಾಸ್ತ್ರದ ಸಹಾಯ, ಪ್ರತ್ಯಕ್ಷ, ಊಹೆಗಳಿಂದಲೂ, ಸರಿಯಾದ ಕಾರಣಗಳಿಂದಲೂ, ಚೆನ್ನಾಗಿ ವಿಮರ್ಶೆಮಾಡಿ ಅನಂತರ ಈ ವಿಷಯವನ್ನು ನಂಬಬೇಕು. ಎಲೈ ಮುನಿಶ್ರೇಷ್ಠರೇ,

**ಪಂಚೈತೇ ಹೇತವೋ ಜ್ಞೇಯಾ ಜ್ಯೋತಿರ್ಮಾನ ವಿನಿರ್ಣಯೇ ॥**

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಗ್ರಹಸಂಖ್ಯಾ ವರ್ಣನಂ
ನಾಮ ಏಕಷಷ್ಟಿತಮೋಽಧ್ಯಾಯಃ

---

ಕಣ್ಣು, ಶಾಸ್ತ್ರ, ನೀರು, ಬರೆವಣಿಗೆ, ಗಣಿತ, ಇವು ಐದೂ, ನಕ್ಷತ್ರ ಪ್ರಮಾಣಗಳನ್ನು ಗೊತ್ತುಮಾಡುವ ವಿಚಾರದಲ್ಲಿ ಸಹಾಯಕಗಳೆಂದು ತಿಳಿಯಿರಿ.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಗ್ರಹಸಂಖ್ಯಾವರ್ಣನೆ ಎಂಬ
ಅರವತ್ತೊಂದನೆಯ ಅಧ್ಯಾಯವು ಮುಗಿದುದು.



ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
ದ್ವಿಷಷ್ಟಿತಮೋಽಧ್ಯಾಯಃ

॥ ಋಷಯ ಊಚುಃ ॥

ಕಥಂ ವಿಷ್ಣೋಃ ಪ್ರಸಾದಾದ್ವೈ ಧ್ರುವೋ ಬುದ್ಧಿಮತಾಂ ವರಃ ।
ಮೇಢೀ (ಧೀ) ಭೂತೋ ಗ್ರಹಾಣಾಂ ವೈ ವಕ್ತುಮರ್ಹಸಿ ಸಾಂಪ್ರತಂ॥

॥ ಸೂತ ಉವಾಚ ॥

ಏತಮರ್ಥಂ ಮಯಾ ಪೃಷ್ಟೋ ನಾನಾಶಾಸ್ತ್ರ ವಿಶಾರದಃ ।
ಮಾರ್ಕಂಡೇಯಃ ಪುರಾ ಪ್ರಾಹ ಮಹ್ಯಂ ಶುಶ್ರೂಷವೇ ದ್ವಿಜಾಃ

॥ ಮಾರ್ಕಂಡೇಯ ಉವಾಚ ॥

ಸಾರ್ವಭೌಮೋ ಮಹಾತೇಜಾಃ ಸರ್ವಶಾಸ್ತ್ರಭೃತಾಂ ವರಃ ।
ಉತ್ತಾನಪಾದೋ ರಾಜಾ ವೈ ಪಾಲಯಾ ಮಾಸ ಮೇದಿನೀಂ॥ ೩ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಅರವತ್ತೆರಡನೆಯ ಅಧ್ಯಾಯವು

೧. ಋಷಿಗಳು ಕೇಳಿದರು. ವಿಷ್ಣುವಿನ ದಯೆಯಿಂದ ಬುದ್ಧಿವಂತರಲ್ಲಿ ಶ್ರೇಷ್ಠನಾದ ಧ್ರುವನು ಗ್ರಹಗಳಿಗೆಲ್ಲಕ್ಕೂ ಆಧಾರವಾಗುವಂಥಾ ಉತ್ತಮ ಸ್ಥಾನವನ್ನು ಗಳಿಸಿಸಿದ ಬಗೆಯನ್ನು ಈಗ ತಾವು ದಯವಿಟ್ಟು ನಮಗೆ ವಿವರಿಸಬೇಕು.

೨. ಎಲೈ ಬ್ರಾಹ್ಮಣರೇ, ನಾನಾ ಶಾಸ್ತ್ರಗಳಲ್ಲಿ ಪಂಡಿತನಾಗಿದ್ದ ಮಾರ್ಕಂಡೇಯನನ್ನು ಕುರಿತು ನಾನು ಇದೇ ವಿಚಾರವನ್ನು ಕೇಳಿದಾಗ, ಕೇಳಲು ಕುತೂಹಲವುಳ್ಳ ನನಗೆ ಅವನು ಈ ವಿಷಯವನ್ನು ಹೀಗೆ ವಿವರಿಸಿದ್ದನು.

೩. ಮಾರ್ಕಂಡೇಯನು ಹೇಳಿದನು: ಬಹಳ ತೇಜಸ್ವಿಯೂ, ಎಲ್ಲಾ ಶಾಸ್ತ್ರಜ್ಞರಲ್ಲಿ ಶ್ರೇಷ್ಠನೂ, ಚಕ್ರವರ್ತಿಯೂ, ಆದ ಉತ್ತಾನಪಾದರಾಜನು ಭೂಮಿಯನ್ನು ಹಿಂದೆ ಆಳುತ್ತಿದ್ದನು.

ತಸ್ಯ ಭಾರ್ಯಾ ದ್ವಯಮಭೂ ತ್ಸುನೀತಿಃ ಸುರುಚಿಸ್ತಥಾ ।
ಅಗ್ರಜಾಯಾ ಮಭೂತ್ಪುತ್ರಃ ಸುನೀತ್ಯಾಂತು ಮಹಾಯಶಾಃ॥ ೪ ॥
ಧ್ರುವೋ ನಾಮ ಮಹಾಪ್ರಾಜ್ಞಃ ಕುಲದೀಪೋ ಮಹಾಮತಿಃ ।
ಕದಾಚಿ ತ್ಸಪ್ತವರ್ಷೋಽಪಿ ಪಿತುರಂಕ ಮುಪಾ ವಿಶತ್ ॥ ೫ ॥
ಸುರಚಿಸ್ತಂ ವಿನಿರ್ಧೂಯ ಸ್ವಪುತ್ರಂ ಪ್ರೀತಿಮಾನಸಾ ।
ನ್ಯವೇಶ ಯತ್ತಂ ವಿಪ್ರೇಂದ್ರಾ ಹ್ಯಂಕಂ ರೂಪೇಣ ಮಾನಿತಾ ॥ ೬ ॥
ಅಲಬ್ಧ್ವಾ ಸ ಪಿತುರ್ಧೀಮಾನಂಕಂ ದುಃಖಿತ ಮಾನಸಃ ।
ಮಾತುಃ ಸಮೀಪ ಮಾಗಮ್ಯ ರುರೋದ ಸ ಪುನಃ ಪುನಃ ॥ ೭ ॥
ರುದಂತಂ ಪುತ್ರ ಮಾಹೇದಂ ಮಾತಾ ಶೋಕಪರಿ ಪ್ಲುತಾ ।
ಸುರುಚಿ ರ್ದಯಿತಾ ಭರ್ತುಃ ತಸ್ಯಾಃ ಪುತ್ರೋಽಪಿ ತಾದೃಶಃ ॥ ೮ ॥

---

೪-೫. ಅವನಿಗೆ ಸುನೀತಿ ಮತ್ತು ಸುರುಚಿ ಎಂಬಿಬ್ಬರು ಹೆಂಡಿತಿಯ ರಿದ್ದರು. ದೊಡ್ಡವಳಾದ ಸುನೀತಿಗೆ ಬಹಳ ತಿಳಿವಳಿಕೆಯುಳ್ಳವನೂ, ವಂಶವನ್ನು ಬೆಳಗಿಸುವವನೂ, ಹೆಚ್ಚುಕೀರ್ತಿ ಗಳಿಸುವವನೂ, ಆದ ಧ್ರುವನೆಂಬ ಮಗನಿದ್ದನು. ಒಂದು ದಿನ ಏಳುವರ್ಷದವನಾಗಿದ್ದಾಗ ಅವನು ತಂದೆಯ ತೊಡೆಯಮೇಲೆ ಕುಳಿತನು.

೬. ಎಲೈ ಬ್ರಾಹ್ಮಣರೇ, ರೂಪದಿಂದ ಗರ್ವಿತಳಾದ ಸುರುಚಿಯು ತನ್ನ ಮಗನಮೇಲಿನ ಪ್ರೀತಿಯಿಂದ ಅವನನ್ನು ನೂಕಿ ತನ್ನ ಮಗನನ್ನು ದೊರೆಯ ತೊಡೆಯಮೇಲೆ ಕುಳ್ಳಿರಿಸಿದಳು.

೭. ಬುದ್ಧಿವಂತನಾದ ಧ್ರುವನು ತಂದೆಯ ತೊಡೆಯಮೇಲೆ ಕೂಡಲು ಆಗದಿದ್ದುದರಿಂದ ಬಹಳ ದುಃಖಪಟ್ಟು, ತಾಯಿಯ ಹತ್ತಿರ ಬಂದು ಬಹಳವಾಗಿ ಅತ್ತನು.

೮-೯. ದುಃಖದಿಂದ ಕಣ್ಣೀರಿಡುತ್ತಾ ಅವನ ತಾಯಿಯಾದ ಸುನೀತಿಯು ತನ್ನ ಸವತಿಯು ಗಂಡನಿಗೆ ಬಹಳ ಪ್ರಿಯಳೆಂದೂ, ಅವಳ ಮಗನೂ ಹಾಗೆಯೇ ಅವನ ಪ್ರಿತಿಪಾತ್ರನೆಂದೂ ಹೇಳಿದಳು. ಅಲ್ಲದೇ

ಮಮ ತ್ವಂ ಮಂದಭಾಗ್ಯಾಯಾಃ ಜಾತಃ ಪುತ್ರೋಽಪ್ಯ ಭಾಗ್ಯವಾನ್
ಕಿಂ ಶೋಚಸಿ ಕಿಮರ್ಥಂ ತ್ವಂ ರೋದಮಾನಃ ಪುನಃ ಪುನಃ ॥ ೯ ॥
ಸಂತಪ್ತ ಹೃದಯೋ ಭೂತ್ವಾ ಮಮ ಶೋಕಂ ಕರಿಷ್ಯಸಿ ।
ಸ್ವಸ್ಥ ಸ್ಥಾನಂ ಧ್ರುವಂ ಪುತ್ರ ಸ್ವಶಕ್ತ್ಯಾ ತ್ವಂ ಸಮಾಪ್ನುಯಾಃ॥೧೦॥
ಇತ್ಯುಕ್ತಃ ಸ ತು ಮಾತ್ರಾ ವೈ ನಿರ್ಜಗಾಮ ತದಾ ವನಂ ।
ವಿಶ್ವಾಮಿತ್ರಂ ತತೋ ದೃಷ್ಟ್ವಾ ಪ್ರಣಿಪತ್ಯ ಯಥಾ ವಿಧಿ ॥೧೧॥
ಉವಾಚ ಪ್ರಾಂಜಲಿ ರ್ಭೂತ್ವಾ ಭಗವನ್ ವಕ್ತು ಮರ್ಹಸಿ ।
ಸರ್ವೇಷಾ ಮುಪರಿಸ್ಥಾನಂ ಕೇನ ಪ್ರಾಪ್ಸ್ಯಾಮಿ ಸತ್ತಮ ॥೧೨॥
ಪಿತುರಂಕೇ ಸಮಾಸೀನಂ ಮಾತಾ ಮಾಂ ಸುರಚಿ ರ್ಮುನೇ ।
ವ್ಯಧೂನ ಯತ್ಸ ತಾಂ ರಾಜಾ ಪಿತಾ ನೋವಾಚ ಕಿಂಚನ ॥೧೩॥

---

ನಾನು ಬಹಳ ದುರದೃಷ್ಟಶಾಲಿನಿಯಾದ ತಾಯಿಯು. ನನ್ನ ಹೊಟ್ಟೆಯಲ್ಲಿ ಹುಟ್ಟಿದ್ದರಿಂದ ನೀನೂ ದುರದೃಷ್ಟವುಳ್ಳವನಾಗಿರುವೆ! ಆದ್ದರಿಂದ ನೀನು ಏತಕ್ಕಾಗಿ ಪದೇ ಪದೇ ವ್ಯರ್ಥವಾಗಿ ಅಳುವಿಯಪ್ಪಾ? ಎಂದು ಹೇಳಿದಳು.

೧೦–೧೨. ನೀನೂ ಸಂಕಟಪಟ್ಟು ನನಗೂ ಸಂಕಟವನ್ನುಂಟು ಮಾಡುತ್ತಿರುವೆ. ಆ ದುಃಖವನ್ನು ಬಿಟ್ಟು ನಿನ್ನ ಆತ್ಮಶಕ್ತಿಯಿಂದ ಅಚಲವಾದ ಸ್ಥಾನವನ್ನು ಹೊಂದು, ಎಂದು ಅವನ ತಾಯಿಯು ಹೇಳಲು, ಅವನು ಅರಣ್ಯಕ್ಕೆ ತೆರಳಿದನು. ದಾರಿಯಲ್ಲಿ ಅವನು ವಿಶ್ವಾಮಿತ್ರ ಮಹರ್ಷಿಯನ್ನು ಕಂಡು ಶಾಸ್ತ್ರೋಕ್ತವಾದ ಕ್ರಮದಲ್ಲಿ ನಮಸ್ಕಾರಮಾಡಿ ಎಲ್ಲರಿಗಿಂತಲೂ ಮೇಲಾದ ಸ್ಥಾನವನ್ನು ನಾನು ಹೊಂದುವ ಬಗೆ ಹೇಗೆ? ಎಂದು ಕೈ ಮುಗಿದು ಕೇಳಿದನು.

೧೩. ಧ್ರುವನು ಓ ಮಹರ್ಷಿಗಳೇ, ತಂದೆಯ ತೊಡೆಯಮೇಲೆ ಕುಳಿತಿದ್ದ ನನ್ನನ್ನು ಚಿಕ್ಕ ತಾಯಿಯಾದ ಸುರುಚಿಯು ನೂಕಿದಳು. ದೊರೆಯು ಅವಳು ಹೀಗೆ ಮಾಡಿದುದಕ್ಕೆ ಅವಳನ್ನೇನೂ ದೂಷಿಸಲಿಲ್ಲ. ಎಂದು ವಿಶ್ವಾಮಿತ್ರಮಹರ್ಷಿಗಳಿಗೆ ಹೇಳಿದನು.

ಏತಸ್ಮಾತ್ಕಾರಣಾ ದ್ಬ್ರಹ್ಮನ್ ತ್ರಸ್ತೋಽಹಂ ಮಾತರಂ ಗತಃ ।
ಸುನೀತಿ ರಾಹ ಮೇ ಮಾತಾ ಮಾಕೃಥಾಃ ಶೋಕಮುತ್ತಮಂ ॥೧೪॥

ಸ್ವಕರ್ಮಣಾ ಪರಸ್ಥಾನಂ ಪ್ರಾಪ್ತು ಮರ್ಹಸಿ ಪುತ್ರಕ ।
ತಸ್ಯಾ ಹಿ ವಚನಂ ಶ್ರುತ್ವಾ ಸ್ಥಾನಂ ತವ ಮಹಾಮುನೇ ॥೧೫॥

ಪ್ರಾಪ್ತೋ ವನಮಿದಂ ಬ್ರಹ್ಮನ್ನದ್ಯ ತ್ವಾಂ ದೃಷ್ಟವಾನ್ಪ್ರಭೋ ।
ತವ ಪ್ರಸಾದಾತ್ಪ್ರಾಪ್ಸ್ಯೇಽಹಂ ಸ್ಥಾನ ಮದ್ಭುತ ಮುತ್ತಮಂ ॥೧೬॥

ಇತ್ಯುಕ್ತಃ ಸ ಮುನಿಃ ಶ್ರೀಮಾ ನ್ಪ್ರಹಸನ್ನಿದ ಮಬ್ರವೀತ್ ।
ರಾಜಪುತ್ರ ಶೃಣು ಷ್ವೇದಂ ಸ್ಥಾನ ಮುತ್ತಮ ಮಾಪ್ಸ್ಯಸಿ ॥೧೭॥

ಆರಾಧ್ಯ ಜಗತಾಮೀಶಂ ಕೇಶವಂ ಕ್ಲೇಶನಾಶನಂ ।
ದಕ್ಷಿಣಾಂಗಭವಂ ಶಂಭೋ ರ್ಮಹಾದೇವಸ್ಯ ಧೀಮತಃ ॥೧೮॥

---

೧೪–೧೬. ಓ ಬ್ರಹ್ಮಋಷಿಯೇ, ಈ ಕಾರಣದಿಂದ ಭಯಗೊಂಡವನಾಗಿ ನಮ್ಮ ತಾಯಿಯ ಬಳಿಗೆ ಹೋದೆನು. ತಾಯಿಯಾದ ಸುನೀತಿಯು ಎಲೈ ಮಗುವೇ ದುಃಖಪಡಬೇಡ. ನಿನ್ನ ಪ್ರಯತ್ನದಿಂದ ಅತ್ಯುತ್ತಮವಾದ ಸ್ಥಾನವನ್ನು ಹೊಂದಲು ಯೋಗ್ಯನಾಗಿರುವೆ. ಎಂದು ಹೇಳಿದನು. ಆದ್ದರಿಂದ ನಾನು ಇಲ್ಲಿಗೆ ಬಂದಿದ್ದೇನೆ. ಓ ಪ್ರಭುವೇ, ನಿನ್ನ ದರ್ಶನವನ್ನು ಪಡೆದಿದ್ದೇನೆ. ನಿನ್ನ ಅನುಗ್ರಹದಿಂದ ಅತ್ಯಾಶ್ಚರ್ಯಕರವಾದ ಅತ್ಯುತ್ತಮ ಸ್ಥಾನವನ್ನು ನಾನು ಹೊಂದುವೆನು. ಎಂದು ಧ್ರುವನು ವಿಶ್ವಾಮಿತ್ರನಿಗೆ ವಿಜ್ಞಾಪಿಸಿದನು.

೧೭–೧೮. ಧ್ರುವನ ಈಮಾತನ್ನು ಕೇಳಿ ಆ ಮಹರ್ಷಿಯು ನಗುತ್ತಾ, ಎಲೈ ರಾಜಕುಮಾರನೇ,ಕೇಳು. ಪರಮೇಶ್ವರನಾದ ಮತ್ತು ಮಹಾಪ್ರಾಜ್ಞನಾದ ಪರಶಿವನ ಬಲಭಾಗದಲ್ಲಿ ಹುಟ್ಟಿದ ಮತ್ತು ಸಕಲ ಕಷ್ಟಗಳನ್ನೂ ನಿವಾರಣೆ ಮಾಡುವ, ಪ್ರಪಂಚಕ್ಕೆ ಒಡೆಯನಾದ ನಾರಾಯಣನನ್ನು ಭಜಿಸಿ, ಅತ್ಯುತ್ತಮವಾದ ಸ್ಥಾನವನ್ನು ಹೊಂದುವೆ. ಎಂದು ಧ್ರುವನಿಗೆ ಹೇಳಿದನು.

ಜಪ ನಿತ್ಯಂ ಮಹಾಪ್ರಾಜ್ಞ ಸರ್ವಪಾಪ ವಿನಾಶನಂ।
ಇಷ್ಟದಂ ಪರಮಂ ಶುದ್ಧಂ ಪವಿತ್ರ ಮಮಲಂ ಪರಂ ॥೧೯॥

ಬ್ರೂಹಿ ಮಂತ್ರ ಮಿಮಂ ದಿವ್ಯಂ ಪ್ರಣವೇನ ಸಮನ್ವಿತಂ।
ನಮೋಽಸ್ತು ವಾಸುದೇವಾಯ ಇತ್ಯೇವ ನಿಯತೇಂದ್ರಿಯಃ ॥೨೦॥

ಧ್ಯಾಯಸ್ಸನಾತನಂ ವಿಷ್ಣುಂ ಜಪ ಹೋಮ ಪರಾಯಣಃ।
ಇತ್ಯುಕ್ತಃ ಪ್ರಣಿಪತ್ಯೈನಂ ವಿಶ್ವಾಮಿತ್ರಂ ಮಹಾಯಶಾಃ ॥೨೧॥

ಪ್ರಾಙ್ಮುಖೋ ನಿಯತೋ ಭೂತ್ವಾ ಜಜಾಪ ಪ್ರೀತ ಮಾನಸಃ।
ಶಾಕಮೂಲ ಫಲಾಹಾರಃ ಸಂವತ್ಸರ ಮತಂದ್ರಿತಃ ॥೨೨॥

ಜಜಾಪ ಮಂತ್ರಮನಿಶ ಮಜಸ್ರಂ ಸ ಪುನಃ ಪುನಃ।
ವೇತಾಲಾ ರಾಕ್ಷಸಾ ಘೋರಾಃ ಸಿಂಹಾದ್ಯಾಶ್ಚ ಮಹಾಮೃಗಾಃ ॥

---

೧೯. ಎಲೈ ಮಹಾಜ್ಞಾನಿಯಾದ ಧ್ರುವನೇ, ಎಲ್ಲಾ ಪಾಪಗಳನ್ನೂ ಹಾಳುಮಾಡುವ, ಮತ್ತು ಇಷ್ಟವನ್ನು ಕೊಡುವ, ಶ್ರೇಷ್ಠವೂ, ಪರಿಶುದ್ಧವೂ ಆದ, ನಿಷ್ಕಲ್ಮಷವಾದ, ನಾರಾಯಣ ಮಂತ್ರವನ್ನು ಜಪಿಸು.

೨೦–೨೨. ಓಂ ನಮೋಽಸ್ತು ವಾಸುದೇವಾಯ, ಎಂಬ ದಿವ್ಯವಾದ ಮಂತ್ರವನ್ನು ಇಂದ್ರಿಯನಿಗ್ರಹವುಳ್ಳವನಾಗಿ ಜಪಿಸು. ಜಪಗಳನ್ನೂ, ಹೋಮಗಳನ್ನೂ ಮಾಡುತ್ತಾ ಈ ಮಂತ್ರವನ್ನು ಧ್ಯಾನಿಸುತ್ತಿರು. ಹೀಗೆ ವಿಶ್ವಾಮಿತ್ರನು ಹೇಳಲಾಗಿ ಕೀರ್ತಿವಂತನಾದ ಧ್ರುವನು ವಿಶ್ವಾಮಿತ್ರ ಮಹರ್ಷಿಗಳಿಗೆ ನಮಸ್ಕಾರವನ್ನು ಮಾಡಿದನು. ಅಲ್ಲದೆ ಪೂರ್ವಕ್ಕೆ ಮುಖ ಮಾಡಿಕೊಂಡು, ಜಿತೇಂದ್ರಿಯನಾಗಿ ಬಹಳ ಸಂತೋಷದಿಂದ, ಕೇವಲ ಗೆಡ್ಡೆ ಗೆಣಸುಗಳನ್ನು ತಿನ್ನುತ್ತಾ, ಸ್ವಲ್ಪವೂ ಆಲಸ್ಯವಿಲ್ಲದೆ, ಒಂದು ವರ್ಷ ಈ ಮಂತ್ರವನ್ನು ಜಪಿಸಿದನು.

೨೩–೨೪. ಹೀಗೆ ಧ್ರುವನು ಯಾವಾಗಲೂ, ಜಪಮಾಡುತ್ತಿರಲು ಪದೇ ಪದೇ, ಭೇತಾಳಗಳೂ. ಕ್ರೂರರಾದ ರಾಕ್ಷಸರೂ, ಭಯಂಕರವಾದ ಸಿಂಹಗಳೇ ಮೊದಲಾದ ದೊಡ್ಡ ಮೃಗಗಳೂ, ಮಹಾತ್ಮನಾದ

ತಮುಭ್ಯಯು ರ್ಮಹಾತ್ಮಾನಂ ಬುದ್ಧಿ ಮೋಹಾಯ ಭೀಷಣಾಃ ।
ಜಪನ್ಸ ವಾಸುದೇವೇತಿ ನ ಕಿಂಚಿತ್ಪ್ರತ್ಯ ಪದ್ಯತ ॥೨೪॥

ಸುನೀತಿ ರಸ್ಯ ಯಾ ಮಾತಾ ತಸ್ಯಾ ರೂಪೇಣ ಸಂಪೃತಾ ।
ಪಿಶಾಚೀ ಸಮುನುಪ್ರಾಪ್ತಾ ರುರೋದ ಭೃಶ ದುಃಖಿತಾ ॥೨೫॥

ಮಮ ತ್ವ ಮೇಕಃ ಪುತ್ರೋಽಸಿ ಕಿಮರ್ಥಂ ಕ್ಲಿಶ್ಯತೇ ಭವಾನ್ ।
ಮಾ ಮನಾಥಾ ಮುಪಹಾಯ ತಪ ಆಸ್ಥಿತ ವಾನಸಿ ॥೨೬॥

ಏವ ಮಾದೀನಿ ವಾಕ್ಯಾನಿ ಭಾಷಮಾಣಾಂ ಮಹಾತಪಾಃ ।
ಅನಿರೀಕ್ಷ್ಯೈವ ಹೃಷ್ಟಾತ್ಮಾ ಹರೇರ್ನಾಮ ಜಜಾಪ ಸಃ ॥೨೭॥

ತತಃ ಪ್ರಶೇಮು ಸ್ಸರ್ವತ್ರ ವಿಘ್ನರೂಪಾಣಿ ತತ್ರ ವೈ ।
ತತೋ ಗರುಡ ಮಾರುಹ್ಯ ಕಾಲಮೇಘ ಸಮದ್ಯುತಿಃ ॥೨೮॥

---

ಧ್ರುವನ ಮನಸ್ಸನ್ನು ಕೆಡಿಸಲು ಎದುರಿಗೆ ಬರುತ್ತಿದ್ದುವು. ಆದರೆ ಧ್ರುವನು ವಾಸುದೇವನ ಮಂತ್ರ ಜಪದಲ್ಲಿ ಯಾವಾಗಲೂ ಮಗ್ನನಾಗಿ ಇರುತ್ತಿದ್ದುದರಿಂದ ಇವನಿಗೇನೂ ಆಗಲಿಲ್ಲ.

೨೫–೨೬. ಹೀಗಿರಲು ಒಂದು ಪಿಶಾಚಿಯು ಇವನ ತಾಯಿಯಾದ ಸುನೀತಿಯ ಸ್ವರೂಪದಲ್ಲಿ ಬಂದು ಬಹಳ ದುಃಖಪಡುತ್ತಾ ಇವನ ಮುಂದೆ ಅಳತೊಡಗಿದಳು. ಅಲ್ಲದೇ ನನಗೆ ನೀನೊಬ್ಬನೇ ಮಗನು, ಹೀಗಿರುವಾಗ ನೀನು ಹೀಗೆ ಕಷ್ಟಪಡುವುದು ಯುಕ್ತವೇ ? ನೀನು ನನ್ನನ್ನು ಅನಾಥಳನ್ನಾಗಿ ಮಾಡಿ ಏಕೆ ತಪಸ್ಸುಮಾಡುತ್ತಿದ್ದೀಯೇ ? ಎಂದು ಅನೇಕ ವಿಧವಾಗಿ ಹೇಳಲು ಪ್ರಾರಂಭಿಸಿದಳು.

೨೭. ಬಹಳ ತಪಸ್ವಿಯಾದ ಧ್ರುವನು ಅನೇಕ ವಿಧವಾಗಿ ಮಾತನಾಡುತ್ತಿದ್ದ ತಾಯಿಯ ಕಡೆಗೆ ಗಮನ ಕೊಡದೆ ಸಂತೋಷದಿಂದ ಹರಿಯ ನಾಮವನ್ನು ಜಪಿಸುತ್ತಿದ್ದನು. ಇವುಗಳಿಂದ ಧ್ರುವನ ಮನಸ್ಸು ಚಲಿಸಲಿಲ್ಲ.

೨೮–೨೯. ಅನಂತರದಲ್ಲಿ ತಪಸ್ಸಿಗೆ ಅಡಚನೆ ತರುವ ಎಲ್ಲಾ ವಸ್ತುಗಳೂ ಕಣ್ಮರೆಯಾದವು. ಆ ಮೇಲೆ ಕಪ್ಪಾದ ಮೇಘಕ್ಕೆ ಸಮಾನವಾದ ಕಾಂತಿಯುಳ್ಳ, ಮಹರ್ಷಿಗಳಿಂದ ಹೊಗಳಲ್ಪಡುತ್ತಿರುವ, ಶತ್ರು ನಾಶಕ

ಸರ್ವದೇವೈಃ ಪರಿವೃತಃ ಸ್ತೂಯಮಾನೋ ಮಹರ್ಷಿಭಿಃ ।
ಆಯಯೌ ಭಗವಾನ್ವಿಷ್ಣುಃ ಧ್ರುವಾಂತಿಕ ಮರಾತಿಹಾ ॥೨೯॥

ಸಮಾಗತಂ ವಿಲೋಕ್ಯಾಥ ಕೋಽಸಾವಿತ್ಯೇವ ಚಿಂತಯನ್ ।
ಪಿಬನ್ ಇವ ಹೃಷೀಕೇಶಂ ನಯನಾಭ್ಯಾಂ ಜಗತ್ಪತಿಂ ॥೩೦॥

ಜಪನ್ನ ವಾಸುದೇವೇತಿ ಧ್ರುವಸ್ತಸ್ಥೌ ಮಹಾದ್ಯುತಿಃ ।
ಶಂಖ ಪ್ರಾಂತೇನ ಗೋವಿಂದಃ ಪಸ್ಪರ್ಶಾಸ್ಯಂ ಹಿ ತಸ್ಯವೈ ॥೩೧॥

ತತಃ ಸ ಪರಮಂ ಜ್ಞಾನ ಮವಾಪ್ಯ ಪುರುಷೋತ್ತಮಂ ।
ತುಷ್ಟಾವ ಪ್ರಾಂಜಲಿ ರ್ಭೂತ್ವಾ ಸರ್ವಲೋಕೇಶ್ವರಂ ಹರಿಂ ॥೩೨॥

ಪ್ರಸೀದ ದೇವ ದೇವೇಶ ಶಂಖ ಚಕ್ರ ಗದಾಧರ ।
ಲೋಕಾತ್ಮನ್ವೇದ ಗುಹ್ಯಾತ್ಮನ್ ತ್ವಾಂ ಪ್ರಪನ್ನೋಽಸ್ಮಿ ಕೇಶವ ॥

---

ನಾದ ವಿಷ್ಣುಭಗವಂತನು, ಸಕಲ ದೇವತೆಗಳೇ ಮುಂತಾದ ಪರಿವಾರ ದೊಂದಿಗೆ ಗರುಡನ ಮೇಲೆ ಕೂತು ಹೊರಟು ಧ್ರುವನ ಸಮೀಪಕ್ಕೆ ಬಂದನು.

೩೦-೩೨. ಅನಂತರವಲ್ಲಿ ಬಂದಿರುವವರು ಯಾರಿವರು? ಎಂದು ತೇಜಸ್ವಿಯಾದ ಧ್ರುವನು ಯೋಜನೆಮಾಡುತ್ತಾ, ಲೋಕಕ್ಕೆ ಒಡೆಯ ನಾದ ಮಹಾವಿಷ್ಣುವನ್ನು ಕಣ್ಣುಗಳಿಂದ ಪಾನಮಾಡುವನೋ ಎಂಬಂತೆ, ವಾಸುದೇವ ಮಂತ್ರ ಜಪಮಾಡುತ್ತಲೇ ಎದ್ದು ನಿಂತನು. ನಾರಾಯಣನು ಶಂಖದ ತುದಿಯಿಂದ ಇವನ ಮುಖವನ್ನು ಮುಟ್ಟಿದನು. ಆಗ ಧ್ರುವನು ಶ್ರೇಷ್ಠವಾದ ಜ್ಞಾನವನ್ನು ಹೊಂದಿ, ಪುರುಷಶ್ರೇಷ್ಠನೂ, ಎಲ್ಲಾ ಲೋಕಕ್ಕೂ ಪತಿಯೂ, ಆದ ನಾರಾಯಣನನ್ನು ಕೈಮುಗಿದು ಸ್ತೋತ್ರ ಮಾಡಿದನು.

೩೩. ಶಂಖ, ಚಕ್ರ, ಗದಾಧಾರಿಯಾದ, ದೇವಶ್ರೇಷ್ಠರಿಗೂ, ಅಧಿಪತಿಯಾದ ನಾರಾಯಣನೇ, ಪ್ರಸನ್ನನಾಗು; ಪ್ರಪಂಚ ಸ್ವರೂಪನೂ, ವೇದಗಳಿಂದ ತಿಳಿಯಲ್ಪಡುವವನೂ, ಆದ ಕೇಶವನೇ, ನಿನಗೆ ಶರಣಾಗತ ನಾಗಿರುವೆನು.

ನ ವಿದು ಸ್ತ್ವಾಂ ಮಹಾತ್ಮಾನಂ ಸನಕಾದ್ಯಾ ಮಹರ್ಷಯಃ ।
ತತ್ಕಥಂ ತ್ವಾಂ ಅಹಂ ವಿದ್ಯಾಂ ನಮಸ್ತೇ ಭುವನೇಶ್ವರ ॥೩೪॥

ತಮಾಹ ಪ್ರಹಸ ನ್ವಿಷ್ಣುರೇಹಿ ವತ್ಸ ಧ್ರುವೋ ಭವಾನ್ ।
ಸ್ಥಾನಂ ಧ್ರುವಂ ಸಮಾಸಾದ್ಯ ಜ್ಯೋತಿಷಾ ಮಗ್ರ ಭುಗ್ಭವ ॥೩೫॥

ಮಾತ್ರಾ ತ್ವಂ ಸಹಿತಸ್ತತ್ರ ಜ್ಯೋತಿಷಾಂ ಸ್ಥಾನ ಮಾಪ್ನುಹಿ ।
ಮತ್ಸ್ಥಾನ ಮೇತತ್ಪರಮಂ ಧ್ರುವಂ ನಿತ್ಯಂ ಸುಶೋಭನಂ ॥೩೬॥

ತಪಸಾಽಽರಾಧ್ಯ ದೇವೇಶಂ ಪುರಾ ಲಬ್ಧಂ ಹಿ ಶಂಕರಾತ್ ।
ವಾಸುದೇವೇತಿ ಯೋ ನಿತ್ಯಂ ಪ್ರಣವೇನ ಸಮನ್ವಿತಂ ॥೩೭॥

ನಮಸ್ಕಾರ ಸಮಾಯುಕ್ತಂ ಭಗವಚ್ಛಬ್ದ ಸಂಯುತಂ ।
ಜಪೇ ದೇವಂ ಹಿ ಯೋ ವಿದ್ವಾನ್ ಧ್ರುವಂ ಸ್ಥಾನಂ ಸಮಾಪ್ನುಯಾತ್

ತತೋ ದೇವಾಃ ಸ ಗಂಧರ್ವಾಃ ಸಿದ್ಧಾಶ್ಚ ಪರಮರ್ಷಯಃ ।
ಮಾತ್ರಾ ಸಹ ಧ್ರುವಂ ಸರ್ವೇ ತಸ್ಮಿನ್ ಸ್ಥಾನೇ ನ್ಯವೇಶಯನ್ ॥

---

೩೪. ಸನಕಾದಿ ಮಹರ್ಷಿಗಳೂ ಸಹ ನಿನ್ನ ಸ್ವರೂಪವನ್ನು ತಿಳಿಯಲಾರರು. ಹೀಗಿರುವಾಗ ನಾನು ಹೇಗೆ ತಿಳಿಯಬಲ್ಲೆ? ಓ ಲೋಕಾಧಿಪತಿಯೇ, ನಿನಗೆ ನಮಸ್ಕಾರವು.

೩೫. ವಿಷ್ಣುವು ನಗುತ್ತಾ ಅವನನ್ನು ಕುರಿತು ಹೀಗೆ ಹೇಳಿದನು. ಎಲೈ ಮಗುವೆ, ಇಲ್ಲಿ ಬಾ. ನೀನು ಧ್ರುವನಾಗಿದ್ದೀಯೆ! ಅಚಲವಾದ ಪದವಿಯನ್ನು ಹೊಂದಿ ನಕ್ಷತ್ರಗಳಲ್ಲಿ ಅಗ್ರಸ್ಥಾನವನ್ನು ಅನುಭವಿಸು.

೩೬–೩೮. ಅಲ್ಲಿ ನೀನು ತಾಯಿಯೊಂದಿಗೆ ಜ್ಯೋತಿರ್ಮಂಡಲವನ್ನು ಬೆಳಗುತ್ತಿರು. ಇದು ಅತ್ಯಂತ ಶ್ರೇಷ್ಠವಾದ, ಅಚಲವಾದ, ಮಂಗಳಕರವಾದ ನನ್ನ ಸ್ಥಾನವೇ ಆಗಿದೆ. ಹಿಂದೆ ತಪಸ್ಸಿನಿಂದ ಲೋಕೇಶನಾದ ಈಶ್ವರನನ್ನು ಭಜಿಸಿ ನಾನು ಸಂಪಾದಿಸಿದೆನು. ಯಾವನೇ ಜ್ಞಾನಿಯು "ಓಂ ನಮೋ ವಾಸುದೇವಾಯ" ಎಂಬ ಮಂತ್ರವನ್ನು ಜಪಿಸಲಿ ಅವನಿಗೆ ಅಚಲವಾದ ಧ್ರುವಸ್ಥಾನವು ಸಿಕ್ಕುತ್ತದೆ.

೩೯. ಅನಂತರದಲ್ಲಿ ದೇವತೆಗಳೂ, ಗಂಧರ್ವರೂ, ಸಿದ್ಧರೂ. ಶ್ರೇಷ್ಠರಾದ ಋಷಿಗಳೂ, ಇವರೆಲ್ಲರೂ, ಧ್ರುವನನ್ನು ಅವನ ತಾಯಿಯೊಂದಿಗೆ ಆ ಸ್ಥಾನದಲ್ಲಿ ಪ್ರತಿಷ್ಠಿಸಿದರು.

ವಿಷ್ಣೋರಾಜ್ಞಾಂ ಪುರಸ್ಕೃತ್ಯ ಜ್ಯೋತಿಷಾಂ ಸ್ಥಾನ ಮಾಪ್ತವಾನ್।
ಏವಂ ಧ್ರುವೋ ಮಹಾತೇಜಾ ದ್ವಾದ ಶಾಕ್ಷರ ವಿದ್ಯಯಾ ॥೪೦॥
ಅವಾಪ ಮಹತೀಂ ಸಿದ್ಧಿ ಮೇತತ್ತೇ ಕಥಿತಂ ಮಯಾ ॥೪೧॥

॥ ಸೂತ ಉವಾಚ ॥

ತಸ್ಮಾದ್ಯೋ ವಾಸುದೇವಾಯ ಪ್ರಣಾಮಂ ಕುರುತೇ ನರಃ।
ಸ ಯಾತಿ ಧ್ರುವಸಾಲೋಕ್ಯಂ ಧ್ರುವತ್ವಂ ತಸ್ಯ ತತ್ತಥಾ ॥೪೨॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಭುವನಕೋಶೇ
ಧ್ರುವಸಂಸ್ಥಾನ ವರ್ಣನಂ ನಾಮ ದ್ವಿಷಷ್ಟಿತಮೋಽಧ್ಯಾಯಃ

---

೪೦–೪೧. ವಿಷ್ಣುವಿನ ಆಜ್ಞೆಯಂತೆಯೇ ಬಹಳ ತೇಜಸ್ವಿಯಾದ ಧ್ರುವನು ಹನ್ನೆರಡು ಅಕ್ಷರದ ಆ ಮಂತ್ರದಿಂದ ಅತ್ಯಂತ ಉತ್ಕೃಷ್ಟವಾದ ಸಿದ್ಧಿಯನ್ನು ಪಡೆದು, ನಕ್ಷತ್ರಗಳಲ್ಲಿ ಅತ್ಯಂತ ಶ್ರೇಷ್ಠವಾದ ಸ್ಥಾನವನ್ನು ಪಡೆದ ಬಗೆಯನ್ನು ವಿವರಿಸಿದ್ದೇನೆ.

೪೨. ಸೂತನು ಹೇಳಿದನು; ಆದ್ದರಿಂದ ಯಾವ ಮನುಷ್ಯನು ವಾಸುದೇವನನ್ನು ನಮಸ್ಕರಿಸುವನೋ ಅವನು ಧ್ರುವಸಾಕ್ಷಾತ್ಕಾರವನ್ನೂ ಅಚಲವಾದ ಧ್ರುವಸ್ಥಾನವನ್ನೂ ಹೊಂದುತ್ತಾನೆ.

ಇಲ್ಲಿಗೆ ಶ್ರೀಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಭುವನಕೋಶದಲ್ಲಿ ಧ್ರುವ ಸಂಸ್ಥಾನದ ವರ್ಣನೆ ಮತ್ತು ಧ್ರುವೋಪಾಖ್ಯಾನ ಎಂಬ ಅರವತ್ತೆರಡನೆಯ ಅಧ್ಯಾಯವು ಮುಗಿದುದು.

अथ श्री लिंगमहापुराणे पूर्वभागे
त्रिषष्टितमोऽध्यायः

॥ ಋಷಯ ಊಚುಃ ॥

ದೇವಾನಾಂ ದಾನವಾನಾಂ ಚ ಗಂಧರ್ವೋರಗ ರಕ್ಷಸಾಂ ।
ಉತ್ಪತ್ತಿಂ ಬ್ರೂಹಿ ಸೂತಾದ್ಯ ಯಥಾಕ್ರಮ ಮನುತ್ತಮಂ ॥ ೧ ॥

॥ ಸೂತ ಉವಾಚ ॥

ಸಂಕಲ್ಪಾದ್ದರ್ಶನಾ ತ್ಸ್ಪರ್ಶಾತ್ಪೂರ್ವೇಷಾಂ ಸೃಷ್ಟಿ ರುಚ್ಯತೇ ।
ದಕ್ಷಾ ತ್ಪ್ರಾಚೇತಸಾ ದೂರ್ಧ್ವಂ ಸೃಷ್ಟಿ ರ್ಮೈಥುನ ಸಂಭವಾ ॥ ೨ ॥

ಯದಾ ತು ಸೃಜತಸ್ತಸ್ಯ ದೇವರ್ಷಿಗಣ ಪನ್ನಗಾನ್ ।
ನ ವೃದ್ಧಿ ಮಗಮಲ್ಲೋಕ ಸ್ತದಾ ಮೈಥುನ ಯೋಗತಃ ॥ ೩ ॥

ದಕ್ಷಃ ಪುತ್ರ ಸಹಸ್ರಾಣಿ ಪಂಚ ಸೂತ್ಯಾ ಮಜೀಜನತ್ ।
ತಾಂಸ್ತು ದೃಷ್ಟ್ವಾ ಮಹಾಭಾಗಾ ನ್ಸಿಸೃಕ್ಷುರ್ವಿವಿಧಾಃ ಪ್ರಜಾಃ ॥

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಅರವತ್ತು ಮೂರನೆಯ ಅಧ್ಯಾಯವು

೧. ಋಷಿಗಳು ಹೇಳಿದರು: ಓ ಸೂತಮಹರ್ಷಿಗಳೇ, ಈಗ ದೇವತೆಗಳ, ದಾನವರ, ಗಂಧರ್ವರ, ಸರ್ಪಗಳ ಮತ್ತು ರಾಕ್ಷಸರ ಉತ್ಪತ್ತಿಯನ್ನು ತಾವು ಕ್ರಮವಾಗಿ ಮತ್ತು ಚೆನ್ನಾಗಿ ವಿವರಿಸಿ ಹೇಳಬೇಕು.

೨. ಸೂತನು ಹೇಳಿದನು: ಹಿಂದೆ ಬ್ರಹ್ಮಾದಿಗಳ ಸಂಕಲ್ಪಗಳಿಂದಲೂ, ನೋಡುವಿಕೆಯಿಂದಲೂ, ಮುಟ್ಟುವಿಕೆಯಿಂದಲೂ, ಉತ್ಪತ್ತಿಯುಂಟಾಯಿತು. ಅನಂತರ ದಕ್ಷಬ್ರಹ್ಮನಿಂದ ಈಚೆಗೆ ಸ್ತ್ರೀಪುರುಷ ಸಂಯೋಗ ರೂಪವಾದ ಮೈಥುನದಿಂದ ಸೃಷ್ಟಿಯು ಮುಂದುವರಿಯಿತು.

೩–೫. ಈ ರೀತಿಯಾಗಿ ಬ್ರಹ್ಮನು ದೇವತೆಗಳನ್ನೂ, ಋಷಿಗಳನ್ನೂ, ಸರ್ಪಗಳನ್ನೂ, ಸೃಜಿಸುತ್ತಿದ್ದಾಗ್ಯೂ, ಪ್ರಪಂಚದ ವೃದ್ಧಿಯಾಗಲಿಲ್ಲ. ಆಗ ದಕ್ಷಬ್ರಹ್ಮನು "ಸೂತಿ" ಎಂಬ ತನ್ನ ಹೆಂಡಿತಿಯ ಸಂಪರ್ಕದಿಂದ

ನಾರದಃ ಪ್ರಾಹ ಹರ್ಯಶ್ವಾನ್ದಕ್ಷ ಪುತ್ರಾನ್ಸಮಾಗತಾನ್ ।
ಭುವಃ ಪ್ರಮಾಣಂ ಸರ್ವಂ ತು ಜ್ಞಾತ್ವೋರ್ಧ್ವಮಧ ಏವಚ॥ ೫ ॥

ತತಃ ಸೃಷ್ಟಿಂ ವಿಶೇಷೇಣ ಕುರುಧ್ವಂ ಮುನಿಸತ್ತಮಾಃ ।
ತೇ ತು ತದ್ವಚನಂ ಶ್ರುತ್ವಾ ಪ್ರಯಾತಾಃ ಸರ್ವತೋ ದಿಶಂ ॥ ೬ ॥

ಅದ್ಯಾಪಿ ನ ನಿವರ್ತಂತೇ ಸಮುದ್ರಾದಿವ ಸಿಂಧವಃ ।
ಹರ್ಯಶ್ವೇಷು ಚ ನಷ್ಟೇಷು ಪುನರ್ದಕ್ಷಃ ಪ್ರಜಾಪತಿಃ ॥ ೭ ॥

ಸೂತ್ಯಾ ಮೇವ ಚ ಪುತ್ರಾಣಾಂ ಸಹಸ್ರ ಮಸೃಜತ್ಪ್ರಭುಃ ।
ಶಬಲಾ ನಾಮ ತೇ ವಿಪ್ರಾಃ ಸಮೇತಾಃ ಸೃಷ್ಟಿ ಹೇತವಃ ॥ ೮ ॥

ನಾರದೋಽನುಗತಾ ನ್ಪ್ರಾಹ ಪುನಸ್ತಾನ್ಸೂರ್ಯ ವರ್ಚಸಃ ।
ಭುವಃ ಪ್ರಮಾಣಂ ಸರ್ವಂ ತು ಜ್ಞಾತ್ವಾ ಭ್ರಾತ್ರ್ಯನ್ ಪುನಃ ಪುನಃ ॥

---

ಐದು ಸಾವಿರ ಮಕ್ಕಳನ್ನು ಸೃಜಿಸಿದನು. ಪುಣ್ಯವಂತರಾದ ಈ ಜನರನ್ನು ನೋಡಿ ನಾರದನು ಇನ್ನೂ ಸೃಷ್ಟಿ ಬೆಳೆಯಲಿ, ಎಂಬ ಆಸೆಯಿಂದ ತನ್ನ ಮುಂದೆ ನೆರೆದಿರುವ ದಕ್ಷನ ಮಕ್ಕಳಾದ ಹರ್ಯಶ್ವ, ಮೊದಲಾದವರನ್ನು ಕುರಿತು, ಮುಂಚೆ ಭೂಮಿಯ ಕೆಳಭಾಗ, ಮತ್ತು ಮೇಲುಭಾಗಗಳ ವಿಸ್ತಾರವನ್ನು ಅರಿಯಿರಿ, ಎಂದು ಹೇಳಿದನು.

೬–೮. ಎಲೈ ಮುನಿಶ್ರೇಷ್ಠರೇ, ಕೇಳಿರಿ; ನಾರದನು ದಕ್ಷನ ಮಕ್ಕಳನ್ನು ಕುರಿತು ಮಾತನ್ನು ಮುಂದುವರಿಸಿದನು: ಅನಂತರದಲ್ಲಿ ವಿಶೇಷವಾಗಿ ಸೃಷ್ಟಿಯನ್ನು ಮಾಡಿರಿ. ಅವರು ಅವನ ಮಾತಿನಂತೆಯೇ ಎಲ್ಲಾ ದಿಕ್ಕುಗಳಿಗೂ ಹೊರಟು ಹೋದರು. ಸಮುದ್ರದಿಂದ ನದಿಗಳು ಹೇಗೆ ಹಿಂತಿರುಗುವುದಿಲ್ಲವೋ ಹಾಗೆ ಅವರು ಇಲ್ಲಿಯವರೆಗೂ, ಹಿಂತಿರುಗಲೇ ಇಲ್ಲ. ಹೀಗೆ ಹರ್ಯಶ್ವ ಮೊದಲಾದವರು ನಾಶಹೊಂದಲು, ಪುನಃ ಸ್ವಾಮಿಯಾದ ದಕ್ಷಬ್ರಹ್ಮನು ಸೂತಿ ಎಂಬ ಹೆಂಡಿತಿಯಲ್ಲಿಯೇ ಸಾವಿರ ಮಕ್ಕಳನ್ನೂ ಸೃಜಿಸಿದನು. ಎಲೈ ಬ್ರಾಹ್ಮಣರೇ, ಸೃಷ್ಟಿಗೆ ಕಾರಣರಾದ ಈ ಮಕ್ಕಳು ಒಟ್ಟಿಗೆ "ಶಬಲ" ಎಂದು ಕರೆಯಲ್ಪಡುತ್ತಾರೆ.

೯–೧೦. ತನ್ನ ಸಮೀಪಕ್ಕೆ ಬಂದ ಆ ಮಕ್ಕಳಿಗೂ ಸಹ ನಾರದನು ಎಲೈ ಸೂರ್ಯನಂತೆ ತೇಜಸ್ಸುಳ್ಳ ಮಕ್ಕಳೇ, ನೀವು ನಿಮ್ಮಣ್ಣಂದಿರನ್ನು

ಆಗತ್ಯ ವಾಽಥ ಸೃಷ್ಟಿಂ ವೈ ಕರಿಷ್ಯಥ ವಿಶೇಷತಃ ।
ತೇಽಪಿ ತೇನೈವ ಮಾರ್ಗೇಣ ಜಗ್ಮುರ್ಭ್ರಾತೃಗತಿಂ ಯಥಾ ॥೧೦॥

ತತ ಸ್ತೇಷ್ವಪಿ ನಷ್ಟೇಷು ಷಷ್ಟಿಕನ್ಯಾಃ ಪ್ರಜಾಪತಿಃ ।
ವೈರಿಣ್ಯಾಂ ಜನಯಾಮಾಸ ದಕ್ಷಃ ಪ್ರಾಚೇತಸಸ್ತದಾ ॥೧೧॥

ಪ್ರಾದಾತ್ಸ ದಶಕಂ ಧರ್ಮೇ ಕಶ್ಯಪಾಯ ತ್ರಯೋದಶ ।
ವಿಂಶತ್ಸಪ್ತ ಚ ಸೋಮಾಯ ಚತಸ್ರೋಽರಿಷ್ಟ ನೇಮಯೇ ॥೧೨॥

ದ್ವೇ ಚೈವ ಭೃಗುಪುತ್ರಾಯ ದ್ವೇ ಕೃಶಾಶ್ವಾಯ ಧೀಮತೇ ।
ದ್ವೇ ಚೈ ವಾಂಗೀರಸೇ ತದ್ವತ್ತಾಸಾಂ ನಾಮಾನಿ ವಿಸ್ತರಾತ್ ॥೧೩॥

ಶೃಣುಧ್ವಂ ದೇವ ಮಾತೄಣಾಂ ಪ್ರಜಾ ವಿಸ್ತಾರ ಮಾದಿತಃ ।
ಮರುತ್ವತೀ ವಸೂರ್ಯಾಮಿ ರ್ಲಂಬಾ ಭಾನು ರರುಂಧತೀ ॥೧೪॥

---

ಚೆನ್ನಾಗಿ ಹುಡುಕಿ ಭೂಮಿಯ ವಿಸ್ತಾರವನ್ನು ತಿಳಿದುಕೊಂಡು ಬಂದು ಅನಂತರ ಸೃಷ್ಟಿಯನ್ನು ವಿಶೇಷವಾಗಿ ಮುಂದುವರಿಸಿ. ಎಂದು ಹೇಳಿದನು. ಅವರೂ ಅದೇ ದಾರಿಯಲ್ಲಿಯೇ ಹೋಗಿ ಅವರ ಅಣ್ಣಂದಿರು ಹೊಂದಿದ ಫಲವನ್ನೇ ಹೊಂದಿದರು.

೧೧. ಅನಂತರ ಹೀಗೆ ಅವರೂ ನಷ್ಟವಾಗಲು, ದಕ್ಷಬ್ರಹ್ಮನು "ವೈರಿಣಿ" ಎಂಬುವಳಲ್ಲಿ ಅರವತ್ತು ಹೆಣ್ಣು ಮಕ್ಕಳನ್ನು ಪಡೆದನು.

೧೨–೧೪. ಆವನು ಧರ್ಮನಿಗೆ ಹತ್ತು ಹೆಣ್ಣುಮಕ್ಕಳನ್ನೂ, ಕಶ್ಯಪನಿಗೆ ಹದಿಮೂರು ಮಕ್ಕಳನ್ನೂ, ಇಪ್ಪತ್ತೇಳು ಮಕ್ಕಳನ್ನು ಸೋಮನಿಗೂ, ಅರಿಷ್ಟನೇಮಿಗೆ ನಾಲ್ವರನ್ನೂ, ಭಾರ್ಗವನಿಗೆ ಇಬ್ಬರನ್ನೂ, ಬುದ್ಧಿಶಾಲಿಯಾದ ಕೃಶಾಶ್ವನಿಗೆ ಇಬ್ಬರನ್ನೂ, ಅಂಗಿರಸ್ಸಿಗೆ ಇಬ್ಬರನ್ನೂ ಕೊಟ್ಟನು. ಆ ಧರ್ಮಪತ್ನಿಯರ ಹೆಸರನ್ನು ವಿಸ್ತಾರವಾಗಿ ಹೇಳುತ್ತೇನೆ ಕೇಳಿರಿ. ಮರುತ್ವತಿ, ವಸೂ, ಯಾಮಿ, ಲಂಬಾ, ಭಾನು, ಅರುಂಧತೀ, ಎಂದು ಕೆಲವು ಧರ್ಮಪತ್ನಿಯರ ಹೆಸರುಗಳಾಗಿವೆ.

ಸಂಕಲ್ಪಾ ಚ ಮುಹೂರ್ತಾ ಚ ಸಾಧ್ಯಾ ವಿಶ್ವಾ ಚ ಭಾಮಿನೀ ।
ಧರ್ಮಪತ್ನ್ಯಃ ಸಮಾಖ್ಯಾತಾ ಸ್ತಾಸಾಂ ಪುತ್ರಾನ್ವದಾಮಿ ವಃ ॥

ವಿಶ್ವೇ ದೇವಾಸ್ತು ವಿಶ್ವಾಯಾಃ ಸಾಧ್ಯಾ ಸಾಧ್ಯಾ ನಜೀಜನತ್ ।
ಮರುತ್ವತ್ಯಾಂ ಮರುತ್ವಂತೋ ವಸೋಸ್ತು ವಸವಸ್ತಥಾ ॥೧೬॥

ಭಾನೋಸ್ತು ಭಾನವಃ ಪ್ರೋಕ್ತಾ ಮುಹೂರ್ತಾಯಾ ಮುಹೂರ್ತಕಾಃ ।
ಲಂಬಾಯಾ ಘೋಷ ನಾಮಾನೋ ನಾಗವೀಥಿಸ್ತು ಯಾಮಿಜಃ ॥

ಸಂಕಲ್ಪಯಾಸ್ತು ಸಂಕಲ್ಪೋ ವಸುಸರ್ಗಂ ವದಾಮಿ ವಃ ।
ಜ್ಯೋತಿಷ್ಮಂತಸ್ತು ಯೇ ದೇವಾ ವ್ಯಾಪಕಾಃ ಸರ್ವತೋ ದಿಶಂ ॥

---

೧೫. ಮತ್ತು ಸಂಕಲ್ಪ, ಮುಹೂರ್ತಾ, ಸಾಧ್ಯಾ, ವಿಶ್ವಾ, ಭಾಮಿನೀ, ಎಂದು ಇನ್ನು ಕೆಲವರು ಧರ್ಮಪತ್ನಿಯರು ಕರೆಯಲ್ಪಡುತ್ತಾರೆ. ಅವರ ಮಕ್ಕಳ ವಿಚಾರವನ್ನು ಈಗ ಹೇಳುತ್ತೇನೆ.

೧೬–೧೮. ವಿಶ್ವೆಯು ವಿಶ್ವೇದೇವರೆಂಬ ಮಕ್ಕಳನ್ನೂ, ಸಾಧ್ಯೆಯು ಸಾಧ್ಯರೆಂಬ ಮಕ್ಕಳನ್ನೂ, ಪಡೆದಳು. ಮರುತ್ವಂತಳಲ್ಲಿ ಮರುತ್ತುಗಳೂ, ವಸೂ ಎಂಬುವಳಲ್ಲಿ, ವಸುಗಳೆಂಬ ಮಕ್ಕಳೂ, ಭಾನು ಎಂಬುವಳಿಗೆ ಭಾನುಗಳೆಂಬ ಮಕ್ಕಳೂ, ಮುಹೂರ್ತಳಿಗೆ ಮುಹೂರ್ತಕಗಳೆಂಬ ಮಕ್ಕಳೂ, ಲಂಬೆಗೆ ಘೋಷ, ಎಂಬ ಮಕ್ಕಳೂ, ನಾಗೆಗೆ ನಾಗವೀಥಿ, ಎಂಬ ಮಗನೂ, ಸಂಕಲ್ಪೆಗೆ ಸಂಕಲ್ಪನೂ, ಕ್ರಮವಾಗಿ ಹುಟ್ಟಿದರು. ಇನ್ನು ಮುಂದೆ ವಸುಗಳ ಉತ್ಪತ್ತಿಯನ್ನು ವಿವರಿಸುತ್ತೇನೆ. ತೇಜಸ್ವಿಗಳಾದ ಈ ದೇವತೆಗಳು ಎಲ್ಲಾ ದಿಕ್ಕುಗಳಲ್ಲಿಯೂ ವ್ಯಾಪಿಸಿಕೊಂಡಿರುತ್ತಾರೆ.

ವಸವಸ್ತೇ ಸಮಾಖ್ಯಾತಾಃ ಸರ್ವಭೂತ ಹಿತೈಷಿಣಃ ।
ಆಪೋ ಧ್ರುವಶ್ಚ ಸೋಮಶ್ಚ ಧರಶ್ಚೈವಾ ನಿಲೋಽನಲಃ ॥೧೯॥

ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋಽಷ್ಟೌ ಪ್ರಕೀರ್ತಿತಾಃ ।
ಅಜೈಕಪಾದಹಿ ರ್ಬುಧ್ನ್ಯೋ ವಿರೂಪಾಕ್ಷಃ ಸಭೈರವಃ ॥೨೦॥

ಹರಶ್ಚ ಬಹುರೂಪಶ್ಚ ತ್ರ್ಯಂಬಕಶ್ಚ ಸುರೇಶ್ವರಃ
ಸಾವಿತ್ರಶ್ಚ ಜಯಂತಶ್ಚ ಪಿನಾಕೀ ಚಾಪರಾಜಿತಃ ॥೨೧॥

ಏತೇ ರುದ್ರಾಃ ಸಮಾಖ್ಯಾತಾ ಏಕಾದಶ ಗಣೇಶ್ವರಾಃ ।
ಕಾಶ್ಯಪಸ್ಯ ಪ್ರವಕ್ಷ್ಯಾಮಿ ಪತ್ನೀಭ್ಯಃ ಪುತ್ರ ಪೌತ್ರಕಂ ॥೨೨॥

ಅದಿತಿಶ್ಚ ದಿತಿಶ್ಚೈವ ಅರಿಷ್ಟಾ ಸುರಸಾ ಮುನಿಃ ।
ಸುರಭಿ ರ್ವಿನ ತಾ ತಾಮ್ರಾ ತದ್ವ ತ್ಕ್ರೋಧ ವಶಾ ಇಲಾ ॥೨೩॥

---

೧೯–೨೧. ಪ್ರಪಂಚಕ್ಕೆ ಸೌಖ್ಯವನ್ನುಂಟುಮಾಡುವ ಈ ವಸುಗಳು, ಅಪ್, ಧ್ರುವ, ಸೋಮ, ಧರ, ಅನಿಲ, ಅನಲ, ಪ್ರತ್ಯೂಷಾ, ಪ್ರಭಾಸ, ಎಂಬುದಾಗಿ ಎಂಟಿವೆ. ಇವರಲ್ಲದೇ ರುದ್ರರು, ಅಜ, ಏಕಪಾತ್, ಅಹಿರ್ಬುಧ್ನ್ಯ, ವಿರೂಪಾಕ್ಷ, ಭೈರವ, ಹರ, ಬಹುರೂಪ, ತ್ರ್ಯಂಬಕ, ಸುರೇಶ್ವರ, ಸಾವಿತ್ರಿ, ಜಯಂತ, ಪಿನಾಕೀ, ಅಪರಾಜಿತ, ಎಂಬ ಹೆಸರುಗಳಿಂದ ಕರೆಯಲ್ಪಡುತ್ತಾರೆ.

೨೨. ಈ ಮೇಲೆ ಹೇಳಲ್ಪಟ್ಟವರೇ ಗಣಗಳಿಗೆ ಅಧಿಪತಿಗಳಾದ ಹನ್ನೊಂದು ರುದ್ರರು. ಇನ್ನುಮುಂದೆ ಕಾಶ್ಯಪರ ಪತ್ನಿಯರಿಂದ ಹುಟ್ಟಿದ ಮಕ್ಕಳು ಮೊಮ್ಮಕ್ಕಳ ವಿಷಯವನ್ನು ಹೇಳುವೆನು.

೨೩–೨೫. ಕಾಶ್ಯಪನ ಪತ್ನಿಯರು ಅದಿತಿ, ದಿತಿ, ಅರಿಷ್ಟಾ, ಸುರಸಾ, ಮುನಿ, ಸುರಭಿ, ವಿನತಾ, ತಾಮ್ರಾ, ಮತ್ತು ಕೋಪವುಳ್ಳ ಇಲಾ, ಕದ್ರೂ, ತ್ವಿಷಾ, ದನು, ಎಂದು ಕರೆಯಲ್ಪಡುತ್ತಾರೆ. ಇವರ ಮಕ್ಕಳ ಪೈಕಿ ಮನ್ವಂತರದ ಆದಿಯಲ್ಲಿ ಚಕ್ಷುಸ್ಸಿನಿಂದ ಹುಟ್ಟಿದ ದೇವತೆಗಳೂ, ವೈವಸ್ವತ ಮನ್ವಂತರದಲ್ಲಿ ಹುಟ್ಟಿದ ದೇವತೆಗಳೂ, ಹನ್ನೆರಡು ಆದಿತ್ಯರಾಗಿ

ಕದ್ರೂಸ್ತ್ರಿಷಾ ದನುಸ್ತದ್ವತ್ತಾಸಾಂ ಪುತ್ರಾನ್ವದಾಮಿ ವಃ ।
ತುಷಿತಾ ನಾಮ ಯೇ ದೇವಾ ಶ್ಚಾಕ್ಷುಷಸ್ಯಾಂತರೇ ಮನೋಃ ॥

ವೈವಸ್ವತಾಂತರೇ ತೇ ವೈ ಆದಿತ್ಯಾ ದ್ವಾದಶ ಸ್ಮೃತಾಃ ।
ಇಂದ್ರೋ ಧಾತಾ ಭಗಸ್ತ್ವಷ್ಟಾ ಮಿತ್ರೋಽಥ ವರುಣೋಽರ್ಯಮಾ

ವಿವಸ್ವಾನ್ಸವಿತಾ ಪೂಷಾ ಅಂಶುಮಾನ್ವಿಷ್ಣು ರೇವಚ ।
ಏತೇ ಸಹಸ್ರ ಕಿರಣಾ ಆದಿತ್ಯಾ ದ್ವಾದಶ ಸ್ಮೃತಾಃ ॥೨೬॥

ದಿತಿಃ ಪುತ್ರದ್ವಯಂ ಲೇಭೇ ಕಶ್ಯಪಾದಿತಿ ನಃ ಸ್ಮೃತಂ ।
ಹಿರಣ್ಯ ಕಶಿಪುಂ ಚೈವ ಹಿರಣ್ಯಾಕ್ಷಂ ತಥೈವ ಚ ॥೨೭॥

ದನುಃ ಪುತ್ರಶತಂ ಲೇಭೇ ಕಶ್ಯಪಾದ್ಬಲ ದರ್ಪಿತಂ ।
ವಿಪ್ರಚಿತ್ತಿಃ ಪ್ರಧಾನೋಽಭೂತ್ ತೇಷಾಂಮಧ್ಯೇ ದ್ವಿಜೋತ್ತಮಾಃ॥

ತಾಮ್ರಾ ಚ ಜನಯಾಮಾಸ ಷಟ್ಕನ್ಯಾ ದ್ವಿಜಪುಂಗವಾಃ ।
ಶುಕೀಂ ಶ್ಯೇನೀಂಚ ಭಾಸೀಂಚ ಸುಗ್ರೀವೀಂ ಗೃಧ್ರಿಕಾಂ ಶುಚಿಂ ॥

---

ದ್ವಾರೆ. ಇವರಲ್ಲದೆ, ಇಂದ್ರ, ಧಾತೃ, ಭಗ, ತ್ವಷ್ಟೃ, ಮಿತ್ರ, ವರುಣ, ಆರ್ಯಮನ್, ಎಂಬುವರು ಬೇರೇ ಹನ್ನೆರಡು ಆದಿತ್ಯರಲ್ಲಿ ಸೇರುತ್ತಾರೆ.

೨೬. ಮೇಲೆ ಹೇಳಿದ ಆದಿತ್ಯರಲ್ಲಿ ವಿವಸ್ವಾನ್, ಸವಿತೃ, ಪೂಷನ್, ಅಂಶುಮಾನ್, ವಿಷ್ಣು, ಎಂಬ ಸಾವಿರಾರು ಕಿರಣಗಳುಳ್ಳ ಸೂರ್ಯರೂ ಸೇರಿ ಒಟ್ಟು ಹನ್ನೆರಡು ಜನ ಆದಿತ್ಯರಾಗುತ್ತಾರೆ.

೨೭–೨೮. ಕಶ್ಯಪನಿಂದ ದಿತಿಯು ಹಿರಣ್ಯ ಕಶಿಪು, ಹಿರಣ್ಯಾಕ್ಷರೆಂಬ ಇಬ್ಬರು ಮಕ್ಕಳನ್ನು ಪಡೆದಳೆಂದು ನಾವು ಸ್ಮರಿಸುತ್ತೇವೆ. ಎಲೈ ಬ್ರಾಹ್ಮಣರೇ, ಕಶ್ಯಪನಿಂದ ದನುವು, ಬಲದಿಂದ ಗರ್ವಿತರಾದ ನೂರು ಮಕ್ಕಳನ್ನು ಪಡೆದಳು. ಅವರ ಮಧ್ಯೆ, ವಿಪ್ರಚಿತ್ತಿ ಎಂಬುವನು ಮುಖ್ಯನಾದವನು.

೨೯. ಎಲೈ ಬ್ರಾಹ್ಮಣಶ್ರೇಷ್ಠರೇ, ತಾಮ್ರಳೆಂಬುವಳು, ಶುಕೀ, ಶ್ಯೇನಿ, ಭಾಸೀ, ಸುಗ್ರೀವೀ ಗೃಧ್ರಿಕಾ, ಶುಚೀ, ಎಂಬ ಆರು ಹೆಣ್ಣು ಮಕ್ಕಳನ್ನು ಹೆತ್ತಳು.

ಶುಕೀ ಶುಕಾನು ಲೂಕಾಂಶ್ಚ ಜನಯಾಮಾಸ ಧರ್ಮತಃ ।
ಶ್ಯೇನೀ ಶ್ಯೇನಾಂ ಸ್ತಥಾ ಭಾಸೀ ಕುರಂಗಾಂಶ್ಚ ವ್ಯಜೀಜನತ್ ॥೩೦॥
ಗೃಧ್ರೀ ಗೃಧ್ರಾನ್ಕಪೋತಾಂಶ್ಚ ಪಾರಾವತ ವಿಹಂಗಮಾನ್ ।
ಹಂಸ ಸಾರಸ ಕಾರಂಡ ಪ್ಲವಾ ಶುಚಿ ರಜೀಜನತ್ ॥೩೧॥
ಅಜಾಶ್ವಮೇಷೋ ಷ್ಟ್ರಖರಾ ನ್ಸುಗ್ರೀವೀ ಚಾಪ್ಯ ಜೀಜನತ್ ।
ವಿನತಾ ಜನಯಾ ಮಾಸ ಗರುಡಂ ಚಾರುಣಂ ಶುಭಾ ॥೩೨॥
ಸೌದಾಮಿನೀಂ ತಥಾ ಕನ್ಯಾಂ ಸರ್ವಲೋಕ ಭಯಂಕರೀಂ ।
ಸುರಸಾಯಾಃ ಸಹಸ್ರಂ ತು ಸರ್ಪಾಣಾ ಮಭವತ್ಪುರಾ ॥೩೩॥
ಕದ್ರ್ವಾಃ ಸಹಸ್ರ ಶಿರಸಾಂ ಸಹಸ್ರಂ ಪ್ರಾಪ ಸುವ್ರತಾ ।
ಪ್ರಧಾನಾಸ್ತೇಷು ವಿಖ್ಯಾತಾಃ ಷಡ್ವಿಂಶತಿ ರನುತ್ತಮಾಃ ॥೩೪॥

---

೩೦. ಶುಕಿಯು ಗಿಣಿಗಳನ್ನೂ, ಮತ್ತು ಗೂಬೆಗಳನ್ನೂ, ಧರ್ಮಾರ್ಥವಾಗಿ ಹೆತ್ತಳು. ಹಾಗೆಯೇ ಶ್ಯೇನಿಯು ಗಿಡಗಗಳನ್ನೂ, ಭಾಸಿಯು ಜಿಂಕೆಗಳನ್ನೂ, ಹಡೆದಳು.

೩೧. ಗೃಧ್ರಿಯು ಹದ್ದುಗಳನ್ನೂ, ಪಾರಿವಾಳಗಳನ್ನೂ, ಶುಚಿಯು ಹಂಸ, ಮತ್ತು ಬಕವೆಂಬ ನೀರುಹಕ್ಕಿಗಳನ್ನೂ, ಪ್ರಸವಿಸಿದಳು.

೩೨. ಸುಗ್ರೀವಿಯು ಆಡು, ಕುದುರೆ, ಮೇಕೆ, ವಂಟೆ, ಕತ್ತೆಗಳನ್ನೂ, ಹೆತ್ತಳು. ಮಂಗಳ ಸ್ವರೂಪಳಾದ ವಿನತೆಯು ಕೆಂಪಗಿರುವ ಗರುಡನನ್ನು ಪ್ರಸವಿಸಿಳು.

೩೩. ವಿನತೆಯು ಸೌದಾಮಿನಿಯೆಂಬ ಎಲ್ಲಾ ಪ್ರಪಂಚಕ್ಕೂ ಭಯವನ್ನುಂಟುಮಾಡುವ ಹೆಣ್ಣುಮಗಳನ್ನೂ ಹೆತ್ತಳು. ಹಿಂದೆ ಸುರಸೆಗಾದರೋ ಸಾವಿರ ಹಾವುಗಳು ಹುಟ್ಟಿದುವು.

೩೪. ಪತಿವ್ರತೆಯಾದ ಕದ್ರುವು ಸಾವಿರ ಹೆಡೆಗಳುಳ್ಳ ಸಾವಿರ ಹಾವುಗಳನ್ನು ಹೊಂದಿದಳು. ಅವುಗಳಲ್ಲಿ ಅತ್ಯಂತ ಶ್ರೇಷ್ಠಗಳೂ, ಬಹುಮುಖ್ಯವಾದವೂ ಆದ ಸರ್ಪಗಳು ಇಪ್ಪತ್ತಾರು.

ಶೇಷ ವಾಸುಕಿ ಕರ್ಕೋಟ ಶಂಖೈರಾವತ ಕಂಬಲಾಃ ।
ಧನಂಜಯ ಮಹಾನೀಲ ಪದ್ಮಾಶ್ವತರ ತಕ್ಷಕಾಃ ॥೩೫॥

ಏಲಾಪತ್ರ ಮಹಾಪದ್ಮ ಧೃತರಾಷ್ಟ್ರ ಬಲಾಹಕಾಃ ।
ಶಂಖಪಾಲ ಮಹಾಶಂಖ ಪುಷ್ಪದಂಷ್ಟ್ರಶುಭಾನನಾಃ ॥೩೬॥

ಶಂಖಲೋಮಾ ಚ ನಹುಷೋ ವಾಮನಃ ಫಣಿತ ಸ್ತಥಾ ।
ಕಪಿಲೋ ದುರ್ಮುಖ ಶ್ಚಾಪಿ ಪತಂಜಲಿ ರಿತಿ ಸ್ಮೃತಃ ॥೩೭॥

ರಕ್ಷೋಗಣಂ ಕ್ರೋಧವಶಾ ಮಹಾಮಾಯಂ ವ್ಯಜೀಜನತ್ ।
ರುದ್ರಾಣಾಂ ಚ ಗಣಂ ತದ್ವ ದ್ಗೋಮಹಿಷ್ಯಾ ವರಾಂಗನಾ ॥೩೮॥

ಸುರಭಿ ರ್ಜನಯಾ ಮಾಸ ಕಶ್ಯಪಾದಿತಿ ನಃ ಶ್ರುತಂ ।
ಮುನಿ ರ್ಮುನೀನಾಂ ಚ ಗಣಂ ಗಣಮಪ್ಸರಸಾಂ ತಥಾ ॥೩೯॥

---

೩೫–೩೭. ಶೇಷ, ವಾಸುಕಿ, ಕರ್ಕೋಟ, ಶಂಖ, ಐರಾವತ, ಕಂಬಲ, ಧನಂಜಯ, ಮಹಾನೀಲ, ಪದ್ಮ, ಅಶ್ವತರ, ತಕ್ಷಕ, ಏಲಾಪುತ್ರ, ಮಹಾಪದ್ಮ, ಧೃತರಾಷ್ಟ್ರ, ಬಲಾಹಕ, ಶಂಖಪಾಲ, ಮಹಾಶಂಖ, ಪುಷ್ಪದಂಷ್ಟ್ರ, ಶುಭಾನನ, ಶಂಖಲೋಮಾ, ನಹುಷ, ವಾಮನ, ಫಣಿತ, ಕಪಿಲ, ದುರ್ಮುಖ, ಪತಂಜಲಿ, ಇವೇ ಇಪ್ಪತ್ತಾರು ಮುಖ್ಯವಾದ ಸರ್ಪಗಳೆಂದು ಹೇಳಲ್ಪಟ್ಟಿವೆ.

೩೮. ಕ್ರೋಧವಶ ಎಂಬುವಳು ಮಹಾ ಕಪಟಿಗಳಾದ ರಾಕ್ಷಸರ ಸಮೂಹವನ್ನು ಹೆತ್ತಳು. ವರಾಂಗನೆಯು ರುದ್ರರ ಸಮೂಹವನ್ನು ಹೆತ್ತಳು.

೩೯. ಕಶ್ಯಪನ ಸಂಬಂಧದಿಂದ ಸುರಭಿಯು ಎತ್ತುಗಳನ್ನೂ ಮತ್ತು ಎಮ್ಮೆಗಳನ್ನೂ ಪ್ರಸವಿಸಿದಳು. ಮುನಿ ಎಂಬುವಳು ಋಷಿಗಳ ಸಮೂಹವನ್ನೂ, ಮತ್ತು ಅಪ್ಸರಸ್ಸುಗಳ ಗುಂಪನ್ನೂ ಪ್ರಸವಿಸಿದಳು.

ತಥಾ ಕಿನ್ನರ ಗಂಧರ್ವಾನ್ ಅರಿಷ್ಟಾಽ ಜನಯದ್ಬಹೂನ್ ।
ತೃಣ ವೃಕ್ಷ ಲತಾಗುಲ್ಮ ಮಿಲಾ ಸರ್ವ ಮಜೀಜನತ್ ॥೪೦॥
ತ್ರಿಷಾ ತು ಯಕ್ಷರಕ್ಷಾಂಸಿ ಜನಯಾ ಮಾಸ ಕೋಟಿಶಃ ।
ಏತೇ ತು ಕಾಶ್ಯಪೇಯಾಶ್ಚ ಸಂಕ್ಷೇಪಾತ್ಪರಿ ಕೀರ್ತಿತಾಃ ॥೪೧॥
ಏತೇಷಾಂ ಪುತ್ರ ಪೌತ್ರಾದಿ ವಂಶಾಶ್ಚ ಬಹವಃ ಸ್ಮೃತಾಃ ।
ಏವಂ ಪ್ರಜಾಸು ಸೃಷ್ಟಾಸು ಕಶ್ಯಪೇನ ಮಹಾತ್ಮನಾ ॥೪೨॥
ಪ್ರತಿಷ್ಠಿತಾಸು ಸರ್ವಾಸು ಚರಾಸು ಸ್ಥಾವರಾಸು ಚ ।
ಅಭಿಷಿಚ್ಯಾಧಿಪತ್ಯೇಷು ತೇಷಾಂ ಮುಖ್ಯಾನ್ಪ್ರಜಾ ಪತಿಃ ॥೪೩॥
ತತೋ ಮನುಷ್ಯಾಧಿಪತಿಂ ಚಕ್ರೇ ವೈವಸ್ವತಂ ಮನುಂ ।
ಸ್ವಾಯಂಭುವೇಽಂತರೇ ಪೂರ್ವಂ ಬ್ರಹ್ಮಣಾ ಯೇಽಭಿ ಷೇಚಿತಾಃ ॥

---

೪೦. ಹಾಗೆಯೇ ಅರಿಷ್ಟಾ ಎಂಬುವಳು ಅನೇಕ ಕಿನ್ನರರೆಂಬ ದೇವತೆಗಳಲ್ಲಿನ ಪ್ರಭೇದವನ್ನೂ, ಗಂಧರ್ವರನ್ನೂ, ಪ್ರಸವಿಸಿದಳು. ಇಲಾ ಎಂಬುವಳು ,ಹುಲ್ಲು, ಮರ, ಬಳ್ಳಿ, ಪೊದರುಗಳನ್ನು ಪ್ರಸವಿಸಿದಳು.

೪೧. ತ್ರಿಷಾ, ಎಂಬುವಳು ಕೋಟ್ಯಾಂತರ ರಾಕ್ಷಸರನ್ನು ಹೆತ್ತಳು. ಹೀಗೆ ಕಶ್ಯಪನ ಮಕ್ಕಳುಗಳ ವಿಷಯವನ್ನು ಸಂಕ್ಷೇಪವಾಗಿ ಹೇಳಿದ್ದೇನೆ.

೪೨–೪೪. ಇವರ ಮಕ್ಕಳುಮತ್ತು ಮೊಮ್ಮಕ್ಕಳೂ, ಮುಂತಾದವರ ವಂಶಗಳು ಬಹಳವಾಗಿವೆಯೆಂದು ತಿಳಿದು ಬರುತ್ತವೆ. ಹೀಗೆ ಮಹಾತ್ಮನಾದ ಕಶ್ಯಪನು ಇಷ್ಟೊಂದು ಸಂತಾನವನ್ನು ಪಡೆದನು. ಮತ್ತು ಈ ಸಂತಾನವೆಲ್ಲವೂ ಲೋಕದಲ್ಲಿ ಸ್ಥಾವರಜಂಗಮ ರೂಪದಲ್ಲಿರಲು ಇವರೆಲ್ಲರೂ ಅಲ್ಲಲ್ಲಿ ಇಡಲ್ಪಟ್ಟರು. ಬ್ರಹ್ಮನು ಇವರಲ್ಲಿ ಮುಖ್ಯರಾದವರನ್ನು ಕೆಲವು ಸ್ಥಾನಗಳಿಗೆ ಅಧಿಪತಿಗಳನ್ನಾಗಿ ಮಾಡಿದನು. ಅನಂತರದಲ್ಲಿ ಬ್ರಹ್ಮನು ವೈವಸ್ವತಮನುವನ್ನು ಮನುಷ್ಯರಿಗೆ ಅಧಿಪತಿಯನ್ನಾಗಿ ಮಾಡಿದನು. ಹಿಂದೆ ಸ್ವಾಯಂಭುವ ಮನ್ವಂತರದಲ್ಲಿ ಕೆಲವರು ಬ್ರಹ್ಮನಿಂದ ಅಧಿಪತಿಗಳಾಗಿ ಪಟ್ಟಾಭಿಷೇಕ ಮಾಡಲ್ಪಟ್ಟಿದ್ದರು.

ತ್ಯೈರಿಯಂ ಪೃಥಿವೀ ಸರ್ವಾ ಸಪ್ತದ್ವೀಪಾ ಸಪರ್ವತಾ ।
ಯಥೋಪದೇಶ ಮದ್ಯಾಪಿ ಧರ್ಮೇಣ ಪ್ರತಿಪಾಲ್ಯತೇ ॥೪೫॥

ಸ್ವಾಯಂಭುವೇಽಂತರೇ ಪೂರ್ವೇ ಬ್ರಹ್ಮಣಾ ಯೇಽಭಿಷೇಚಿತಾಃ ।
ತೇ ಹ್ಯೇತೇ ಚಾಭಿ ಷಿ ಚ್ಯಂತೇ ಮನವಶ್ಚ ಭವಂತಿ ತೇ ॥೪೬॥

ಮನ್ವಂತರೇ ಷ್ವತೀತೇಷು ಗತಾ ಹ್ಯೇತೇಷು ಪಾರ್ಥಿವಾಃ ।
ಏವ ಮನ್ಯೇಽಭಿ ಷಿ ಚ್ಯಂತೇ ಪ್ರಾಪ್ತೇ ಮನ್ವಂತರೇ ತತಃ ॥೪೭॥

ಅತೀತಾನಾಗತಾಃ ಸರ್ವೇ ನೃಪಾ ಮನ್ವಂತರೇ ಸ್ಮೃತಾಃ ।
ಏತಾನುತ್ಪಾದ್ಯ ಪುತ್ರಾಂಸ್ತು ಪ್ರಜಾ ಸಂತಾನ ಕಾರಣಾತ್ ॥೪೮॥

ಕಶ್ಯಪೋ ಗೋತ್ರ ಕಾಮಸ್ತು ಚಚಾರ ಸ ಪುನಸ್ತಪಃ ।
ಪುತ್ರೋ ಗೋತ್ರಕರೋ ಮಹ್ಯಂ ಭವತಾ ದಿತಿ ಚಿಂತಯನ್ ॥೪೯॥

---

೪೫. ಅವರಿಂದಲೇ ಏಳು ದ್ವೀಪಗಳುಳ್ಳ ಪರ್ವತಗಳಿಂದ ಕೂಡಿದ ಈ ಭೂಮಿಯು ಹಿಂದೆ ಬ್ರಹ್ಮನಿಂದ ಉಪದೇಶಮಾಡಲ್ಪಟ್ಟಂತೆಯೇ ಈಗಲೂ ಧರ್ಮದಿಂದ ಕಾಪಾಡಲ್ಪಡುತ್ತಾ ಇದೆ.

೪೬–೪೮. ಹಿಂದೆ ಸ್ವಾಯಂಭುವ ಮನ್ವಂತರದಲ್ಲಿ ಯಾರು ಬ್ರಹ್ಮನಿಂದ ಅಭಿಷೇಕಮಾಡಲ್ಪಟ್ಟರೋ ಅವರೇ ಪುನಃ ಅಭಿಷೇಕಮಾಡಲ್ಪಡುತ್ತಾರೆ. ಮತ್ತು ಅವರೇ ಮನುಗಳಾಗುತ್ತಾರೆ. ಹೀಗೆ ಮನ್ವಂತರಗಳು ಕಳೆಯಲು ಈ ದೊರೆಗಳು ನಿವೃತ್ತರಾಗುತ್ತಾರೆ. ಮುಂದಿನ ಮನ್ವಂತರದಲ್ಲಿ ಬೇರೇ ದೊರೆಗಳು ಮನುಗಳಾಗುತ್ತಾರೆ. ಮನ್ವಂತರಗಳಲ್ಲಿ ಹೊರಟು ಹೋದವರು ಮತ್ತು ಮುಂದೆ ಬರುವವರು, ಎಂದು ಎರಡು ವಿಧವಾದ ಮನುಗಳೆಂದು ತಿಳಿಯಬೇಕು. ಪ್ರಜೆಗಳ ಸೃಷ್ಟಿಗಾಗಿ ಇವರ ಉತ್ಪತ್ತಿಯನ್ನು ಕಶ್ಯಪ ಮಹರ್ಷಿಯು ಮಾಡಿದನು.

೪೯. ಪುನಃ ಕಶ್ಯಪನು ಗೋತ್ರ ಸಂತಾನವನ್ನು ಅಪೇಕ್ಷಿಸುವವನಾಗಿ ವಂಶಾಭಿವೃದ್ಧಿಯಾಗುವ ಮಕ್ಕಳಾಗಲೆಂದು ಆಲೋಚಿಸಿ ಪುನಃ ತಪಸ್ಸನ್ನು ಆಚರಿಸಿದನು.

ತಸ್ಯೈವಂ ಧ್ಯಾಯಮಾನಸ್ಯ ಕಶ್ಯಪಸ್ಯ ಮಹಾತ್ಮನಃ ।
ಬ್ರಹ್ಮಯೋಗಾತ್ಸುತೌ ಪಶ್ಚಾತ್ಪ್ರಾದುರ್ಭೂತೌ ಮಹೌಜಸೌ ॥

ವತ್ಸರಶ್ಚಾಸಿತಶ್ಚೈವ ತಾವುಭೌ ಬ್ರಹ್ಮವಾದಿನೌ ।
ವತ್ಸರಾನ್ನೈಧ್ರುವೋ ಜಜ್ಞೇ ರೈಭ್ಯಶ್ಚ ಸುಮಹಾಯಶಾಃ ॥೫೧॥

ರೈಭ್ಯಸ್ಯ ರೈಭ್ಯಾ ವಿಜ್ಞೇಯಾ ನೈಧ್ರುವಸ್ಯ ವದಾಮಿ ವಃ ।
ಚ್ಯವನಸ್ಯ ತು ಕನ್ಯಾಯಾಂ ಸುಮೇಧಾಃ ಪ್ರತ್ಯಪದ್ಯತ ॥೫೨॥

ನೈಧ್ರುವಸ್ಯತು ಸಾ ಪತ್ನೀ ಮಾತಾ ವೈ ಕುಂಡಪಾಯಿನಾಂ ।
ಅಸಿತಸ್ಯೈಕಪರ್ಣಾಯಾಂ ಬ್ರಹ್ಮಿಷ್ಠಃ ಸಮಪದ್ಯತ ॥೫೩॥

---

೫೦. ಹೀಗೆ ಧ್ಯಾನಮಾಡುತ್ತಿರುವ ಮಹಾತ್ಮನಾದ ಕಶ್ಯಪನಿಗೆ ಬ್ರಹ್ಮನ ಅನುಗ್ರಹದಿಂದ ಆ ಮೇಲೆ ಬಹಳ ತೇಜಸ್ವಿಗಳಾದ ಇಬ್ಬರು ಮಕ್ಕಳಾದರು.

೫೧. ಆ ತೇಜಸ್ವಿಗಳಾದ ಕಶ್ಯಪನ ಮಕ್ಕಳು ವತ್ಸರ, ಅಸಿತ, ಎಂದು ಕರೆಯಲ್ಪಟ್ಟರು. ಮತ್ತು ಅವರು ಬ್ರಹ್ಮಜ್ಞಾನಿಗಳೆಂದು ಪ್ರಸಿದ್ಧರಾಗಿದ್ದರು. ಅವರಲ್ಲಿ ಬಹಳ ಕೀರ್ತಿವಂತನಾದ ರೈಭ್ಯ, ನೈಧ್ರುವ, ಎಂಬ ಮಕ್ಕಳು ವತ್ಸರನಿಗೆ ಹುಟ್ಟಿದರು.

೫೨. ರೈಭ್ಯನಿಗೆ, ರೈಭ್ಯರೆಂಬ ಮಕ್ಕಳಾದರು. ನೈಧ್ರುವನ ವಿಚಾರವನ್ನು ಹೇಳುವೆನು, ಕೇಳಿರಿ. ಅವನಿಗೆ ಚ್ಯವನನ ಮಗಳಲ್ಲಿ, ಸುಮೇಧಾ, ಎಂಬುವನು ಹುಟ್ಟಿದನು.

೫೩. ನೈಧ್ರುವನ ಹೆಂಡಿತಿಯು "ಕುಂಡಪಾಯಿ" ಎಂಬ ಮಕ್ಕಳಿಗೆ ತಾಯಿಯಾದಳು. ಅಸಿತನಿಗೆ, ಏಕಪರ್ಣಾ, ಎಂಬುವಳಲ್ಲಿ ಬ್ರಹ್ಮಿಷ್ಠನು ಹುಟ್ಟಿದನು.

ಶಾಂಡಿಲ್ಯಾನಾಂ ವರಃ ಶ್ರೀಮಾನ್ ನ್ದೇವಲಃ ಸುಮಹಾತಪಾಃ ।
ಶಾಂಡಿಲ್ಯಾ ನೈಧ್ರುವಾ ರೈಭ್ಯಾ ಸ್ತ್ರಯಃ ಪಕ್ಷಾಸ್ತು ಕಾಶ್ಯಪಾಃ ॥
ನವಪ್ರಕೃತ ಯೋಃ ದೇವಾಃ ಪುಲಸ್ತ್ಯಸ್ಯ ವದಾಮಿ ವಃ ।
ಚತುರ್ಯುಗೇ ಹ್ಯತಿಕ್ರಾಂತೇ ಮನೋ ರೇಕಾದಶೇ ಪ್ರಭೋಃ ॥೫೫॥
ಅರ್ಧಾವ ಶಿಷ್ಟೇ ತಸ್ಮಿಂಸ್ತು ದ್ವಾಪರೇ ಸಂಪ್ರವರ್ತಿತೇ ।
ಮಾನವಸ್ಯ ನರಿಷ್ಯಂತಃ ಪುತ್ರ ಆಸೀ ದ್ದಮಃ ಕಿಲ ॥೫೬॥
ದಮಸ್ಯ ತಸ್ಯ ದಾಯಾದ ಸ್ತೃಣಬಿಂದು ರಿತಿಸ್ಮೃತಃ ।
ತ್ರೇತಾಯುಗಮುಖೇ ರಾಜಾ ತೃತೀಯೇ ಸಂಬಭೂವ ಹ ॥೫೭॥
ತಸ್ಯ ಕನ್ಯಾ ತ್ವಿಲವಿಲಾ ರೂಪೇಣಾ ಪ್ರತಿಮಾಽ ಭವತ್ ।
ಪುಲಸ್ತ್ಯಾಯ ಸ ರಾಜರ್ಷಿ ಸ್ತಾಂ ಕನ್ಯಾಂ ಪ್ರತ್ಯಪಾದಯತ್ ॥೫೮॥

---

೫೪. ಮಹಾ ತಪಸ್ವಿಯೂ, ಮಹನೀಯನೂ, ಆದ ದೇವಲನು ಶಾಂಡಿಲ್ಯರುಗಳಲ್ಲಿ ಶ್ರೇಷ್ಠನು. ಹೀಗೆ ಶಾಂಡಿಲ್ಯ, ನೈಧ್ರುವ ಮತ್ತು ರೈಭ್ಯ, ಎಂಬ ಮೂರು ಗೋತ್ರಗಳೂ, ಕಶ್ಯಪನಿಂದ ಹುಟ್ಟಿದುವು.

೫೫–೫೭. ದೇವತೆಗಳಲ್ಲದ ಪುಲಸ್ತ್ಯನ ಒಂಬತ್ತು ಜನ ಮಕ್ಕಳ ವಿಷಯವನ್ನು ಈಗ ಹೇಳುತ್ತೇನೆ. ಪ್ರಭುಗಳಾದ ಹನ್ನೊಂದು ಜನ ಮನುಗಳು ನಾಲ್ಕು ಯುಗಗಳಲ್ಲಿ ಆಗಿ ಹೋಗಲು ಅರ್ಧ ಯುಗವು ಉಳಿದಿತ್ತು. ಆಗ ದ್ವಾಪರಯುಗವು ಪ್ರಾಪ್ತವಾಗಿರಲು ಮನುಪುತ್ರನಾದ ನರಿಷ್ಯಂತನಿಗೆ ದಮ ಎಂಬ ಮಗನಾದನು. ದಮನ ದಾಯಾದಿಯು ತೃಣಬಿಂದು, ಎಂದು ಹೇಳಲ್ಪಟ್ಟಿದ್ದಾನೆ. ತ್ರೇತಾಯುಗದ ಪ್ರಾರಂಭದಲ್ಲಿ ಮೂರನೆಯ ಭಾಗದಲ್ಲಿ ಇವನು ರಾಜನಾದನು.

೫೮. ಅವನಿಗೆ ಬಹಳ ರೂಪವತಿಯಾದ ಇಲವಿಲಾ, ಎಂಬ ಮಗಳು ಹುಟ್ಟಿದಳು. ಆ ರಾಜರ್ಷಿಯು ಪುಲಸ್ತ್ಯನಿಗೆ ಆ ಹೆಣ್ಣುಮಗಳನ್ನು ಕೊಟ್ಟನು.

ಋಷಿ ರೈರವಿಲೋ ಯಸ್ಯಾಂ ವಿಶ್ರವಾಃ ಸಮಪದ್ಯತ ।
ತಸ್ಯ ಪತ್ನ್ಯ ಶ್ಚತಸ್ರಸ್ತು ಪೌಲಸ್ತ್ಯ ಕುಲವರ್ಧನಾಃ ॥೫೯॥

ಬೃಹಸ್ಪತೇಃ ಶುಭಾ ಕನ್ಯಾ ನಾಮ್ನಾ ವೈ ದೇವ ವರ್ಣಿನೀ ।
ಪುಷ್ಪೋತ್ಕಟಾ ಬಲಾಕಾ ಚ ಸುತೇ ಮಾಲ್ಯವತಃ ಸ್ಮೃತೇ ॥೬೦॥

ಕೈಕಸೀ ಮಾಲಿನಃ ಕನ್ಯಾ ತಾಸಾಂ ವೈ ಶೃಣುತ ಪ್ರಜಾಃ ।
ಜ್ಯೇಷ್ಠಂ ವೈಶ್ರವಣಂ ತಸ್ಮಾತ್ಸುಷುವೇ ದೇವ ವರ್ಣಿನೀ ॥೬೧॥

ಕೈಕಸೀ ಚಾಪ್ಯ ಜನಯ ದ್ರಾವಣಂ ರಾಕ್ಷಸಾಧಿಪಂ ।
ಕುಂಭಕರ್ಣಂ ಶೂರ್ಪನಖಾಂ ಧೀಮಂತಂ ಚ ವಿಭೀಷಣಂ ॥೬೨॥

ಪುಷ್ಪೋತ್ಕಟಾ ಹ್ಯ ಜನಯ ತ್ಪುತ್ರಾಂ ಸ್ತಸ್ಮಾದ್ದ್ವಿಜೋತ್ತಮಾಃ ।
ಮಹೋದರಂ ಪ್ರಹಸ್ತಂ ಚ ಮಹಾಪಾರ್ಶ್ವಂ ಖರಂ ತಥಾ ॥೬೩॥

---

೫೯–೬೦. ಆ ರಾಜರ್ಷಿಯಾದ ಐರವಿಲನು, ಅವಳಲ್ಲಿ "ವಿಶ್ರವಸ್" ಎಂಬ ಕುಮಾರನನ್ನು ಪಡೆದನು. ಅವನ ನಾಲ್ಕು ಪತ್ನಿಯರೂ ಪೌಲಸ್ತ್ಯ ವಂಶವನ್ನು ವೃದ್ಧಿಮಾಡುವವರಾಗಿದ್ದರು. ದೇವವರ್ಣಿನೀ, ಎಂಬ ಮಂಗಳ ಸ್ವರೂಪಳಾದ ಮಗಳು ಬೃಹಸ್ಪತಿಯಿಂದ ಹುಟ್ಟಿದಳು. ಮಾಲ್ಯವಂತನಿಗೆ ಪುಷ್ಪೋತ್ಕಟಾ, ಬಲಾಕಾ, ಎಂದು ಇಬ್ಬರು ಹೆಣ್ಣುಮಕ್ಕಳು ಹುಟ್ಟಿದರೆಂದು ತಿಳಿಯಬೇಕು.

೬೧. ಮಾಲಿಯು ಅವರಲ್ಲಿ "ಕೈಕಸಿ" ಎಂಬ ಮಗಳನ್ನು ಪಡೆದನೆಂದು ತಿಳಿಯಿರಿ. ದೇವವರ್ಣಿನಿಯು ಅವನಿಂದಲೇ ವೈಶ್ರವಣ ಎಂಬ ಹಿರಿಯ ಮಗನನ್ನು ಪಡೆದಳು.

೬೨. ಕೈಕಸಿಯು ರಾಕ್ಷಸರಿಗೆ ಒಡೆಯನಾದ ರಾವಣನನ್ನೂ, ಕುಂಭಕರ್ಣನನ್ನೂ, ಶೂರ್ಪನಖಿಯನ್ನೂ, ಮತ್ತು ಬುದ್ಧಿಶಾಲಿಯಾದ ವಿಭೀಷಣನನ್ನೂ, ಹೆತ್ತಳು.

೬೩. ಎಲೈ ಬ್ರಾಹ್ಮಣಶ್ರೇಷ್ಠರೇ, ಪುಷ್ಪೋತ್ಕಟೆಯು ಅವನ ಸಂಬಂಧದಿಂದ ಮಹೋದರನನ್ನೂ, ಪ್ರಹಸ್ತನನ್ನೂ, ಮಹಾಪಾರ್ಶ್ವನನ್ನೂ ಮತ್ತು ಖರನನ್ನೂ ಹೆತ್ತಳು.

ಕುಂಭೀನಸೀಂ ತಥಾ ಕನ್ಯಾಂ ಬಲಾಯಾಃ ಶೃಣುತ ಪ್ರಜಾಃ ।
ತ್ರಿಶಿರಾ ದೂಷಣಶ್ಚೈವ ವಿದ್ಯುಜ್ಜಿಹ್ವಶ್ಚ ರಾಕ್ಷಸಃ ॥೬೪॥
ಕನ್ಯಾ ವೈ ಮಾಲಿಕಾ ಚಾಪಿ ಬಲಾಯಾಃ ಪ್ರಸವಃ ಸ್ಮೃತಃ ।
ಇತ್ಯೇತೇ ಕ್ರೂರ ಕರ್ಮಾಣಃ ಪೌಲಸ್ತ್ಯಾ ರಾಕ್ಷಸಾ ನವ ॥೬೫॥
ವಿಭೀಷಣೋಽತಿ ಶುದ್ಧಾತ್ಮಾ ಧರ್ಮಜ್ಞಃ ಪರಿಕೀರ್ತಿತಃ ।
ಪುಲಸ್ತ್ಯಸ್ಯ ಮೃಗಾಃ ಪುತ್ರಾಃ ಸರ್ವೇ ವ್ಯಾಘ್ರಾಶ್ಚದಂಷ್ಟ್ರಿಣಃ ॥೬೬॥
ಭೂತಾಃ ಪಿಶಾಚಾಃ ಸರ್ಪಾಶ್ಚ ಸೂಕರಾ ಹಸ್ತಿನ ಸ್ತಥಾ ।
ವಾನರಾಃ ಕಿನ್ನರಾಶ್ಚೈವ ಯೇ ಚ ಕಿಂಪುರುಷಾಸ್ತಥಾ ॥೬೭॥
ಅನಪತ್ಯಃ ಕ್ರತುಸ್ತಸ್ಮಿನ್ ಸ್ಮೃತೋ ವೈವಸ್ವತೇಽಂತರೇ।
ಅತ್ರೇಃ ಪತ್ನ್ಯೋ ದಶೈವಾಸ ನ್ಸುಂದರ್ಯ ಶ್ಚ ಪತಿವ್ರತಾಃ ॥೬೮॥

---

೬೪–೬೫. ಬಲಾ ಎಂಬವಳ ಮಕ್ಕಳ ವಿಷಯವನ್ನು ಕೇಳಿರಿ. ಇವಳು ಕುಂಭೀನಸಿ, ಮತ್ತು ಮಾಲಿಕಾ, ಎಂಬ ಹೆಣ್ಣುಮಕ್ಕಳನ್ನೂ, ತ್ರಿಶಿರಸ್ಸು, ದೂಷಣ, ವಿದ್ಯುಜ್ಜಿಹ್ವ, ಎಂಬ ರಾಕ್ಷಸರನ್ನೂ ಪ್ರಸವಿಸಿದಳು. ಎಂದು ತಿಳಿಯಿರಿ. ಹೀಗೆ ಪುಲಸ್ತ್ಯ ವಂಶದಲ್ಲಿ ಒಂಬತ್ತು ರಾಕ್ಷಸರೂ, ಬಹಳ ಕ್ರೂರವಾದ ಕೆಲಸಗಳನ್ನು ಮಾಡುತ್ತಿದ್ದರು.

೬೬–೬೮. ಪುಲಸ್ತ್ಯನ ಮಕ್ಕಳು ಯಾವಾಗಲೂ ಮೃಗಗಳು, ಹುಲಿಗಳು, ಸಿಂಹಗಳು, ಭೂತಗಳು, ಪಿಶಾಚಿಗಳು, ಸರ್ಪಗಳು, ಹಂದಿಗಳು, ಆನೆಗಳು, ಕೋತಿಗಳು, ಕಿನ್ನರರೆಂಬ ದೇವತೆಗಳು, ಮತ್ತು ಕಿಂಪುರುಷರೆಂಬ ದೇವತೆಗಳು, ಇವುಗಳ ಜೊತೆಯಲ್ಲಿಯೇ ಇರುತ್ತಿದ್ದರು. ವೈವಸ್ವತ ಮನ್ವಂತರದಲ್ಲಿ ಕ್ರತು, ಎಂಬುವನು ಮಕ್ಕಳಿಲ್ಲದವನಾಗಿದ್ದನು. ಅತ್ರಿಗೆ ಸುಂದರಿಯರಾಗಿಯೂ, ಪತಿವ್ರತೆಯರಾಗಿಯೂ, ಇದ್ದ ಹತ್ತು ಮಂದಿ ಹೆಂಡತಿಯರಿದ್ದರು.

ಭದ್ರಾಶ್ವಸ್ಯ ಘೃತಾಚ್ಯಾಂ ವೈ ದಶಾಪ್ಸರಸಿ ಸೂನವಃ ।
ಭದ್ರಾಭದ್ರಾ ಚ ಜಲದಾ ಮಂದಾ ನಂದಾ ತಥೈವಚ ॥೬೯॥

ಬಲಾಬಲಾ ಚ ವಿಪ್ರೇಂದ್ರಾ ಯಾಚ ಗೋಪ ಬಲಾ ಸ್ಮೃತಾ ।
ತಥಾ ತಾಮರಸಾ ಚೈವ ವರಕ್ರೀಡಾಚ ವೈ ದಶ ॥೭೦॥

ಆತ್ರೇಯಮ ವಂಶಪ್ರಭವಾ ಸ್ತಾಸಾಂ ಭರ್ತಾ ಪ್ರಭಾಕರಃ ।
ಸ್ವರ್ಭಾನು ಪಿಹಿತೇ ಸೂರ್ಯೇ ಪತಿತೇಽಸ್ಮಿನ್ದಿವೋ ಮಹೀಂ ॥೭೧॥

ತಮೋಽಭಿ ಭೂತೇ ಲೋಕೇಽಸ್ಮಿ ನ್ಪ್ರಭಾ ಯೇನ ಪ್ರವರ್ತಿತಾ ।
ಸ್ವಸ್ತ್ಯಸ್ತು ಹಿ ತವೇತ್ಯುಕ್ತೇ ಪತನ್ನಿಹ ದಿವಾಕರಃ ॥೭೨॥

ಬ್ರಹ್ಮರ್ಷೇ ರ್ವಚನಾತ್ತಸ್ಯ ಪಪಾತ ನ ವಿಭುರ್ದಿವಃ ।
ಅತಃ ಪ್ರಭಾಕರೇ ತ್ಯುಕ್ತಃ ಪ್ರಭುರತ್ರಿಃ ಮಹರ್ಷಿಭಿಃ ॥೭೩॥

---

೬೯–೭೦. ಭದ್ರಾಶ್ವನಿಗೆ ಘೃತಾಚಿ, ಎಂಬ ಅಪ್ಸರಸ್ಸಿನಲ್ಲಿ ಹತ್ತು ಗಂಡು ಮಕ್ಕಳೂ, ಮತ್ತು ಭದ್ರಾಭದ್ರಾ, ಜಲದಾ, ಮಂದಾ, ಆನಂದಾ, ಬಲಾಬಲಾ, ಯಾಚ ಗೋಪಾ, ಬಲಾ, ತಾಮರಸಾ, ವರಕ್ರೀಡಾ, ಎಂಬ ಹತ್ತು ಹೆಣ್ಣುಮಕ್ಕಳೂ ಇದ್ದರು.

೭೧–೭೩. ಅತ್ರಿಮಹರ್ಷಿ ವಂಶದಲ್ಲಿ ಹುಟ್ಟಿದ ಈ ಕನ್ಯೆಯರುಗಳಿಗೆ, ಪ್ರಭಾಕರ ಎಂದರೆ ಸೂರ್ಯನು, ಪತಿಯು. ಸೂರ್ಯನು ರಾಹುವಿನಿಂದ ಮುಚ್ಚಲ್ಪಟ್ಟು ಆಕಾಶದಿಂದ ಭೂಮಿಗೆ ಬೀಳಲು, ಈ ಲೋಕವೆಲ್ಲವೂ ಕತ್ತಲೆಯಿಂದ ಆವರಿಸಲ್ಪಟ್ಟಿತು. ಆಗ ಬ್ರಹ್ಮರ್ಷಿಗಳಾದ ಅತ್ರಿಗಳ ಅನುಗ್ರಹದಿಂದ, ಬೆಳಕನ್ನು ಕೊಡುವ ಸೂರ್ಯನಿಗೆ ಕ್ಷೇಮವುಂಟಾಗಲಿ, ಎಂಬ ಅವರ ಆಶೀರ್ವಾದದಿಂದ, ಸೂರ್ಯನು ಭೂಮಿಗೆ ಬೀಳಲಿಲ್ಲ. ಅತ್ರಿಮಹರ್ಷಿಗಳು ವರ ಕೊಟ್ಟ, ಪ್ರಭಾಕರ ನಾಗು ಎಂಬ ಆಶೀರ್ವಾದದಿಂದ, ಬೆಳಕನ್ನುಂಟುಮಾಡಿದುದರಿಂದ ಸೂರ್ಯನು ಪ್ರಭಾಕರನಾದನು.

ಭದ್ರಾಯಾಂ ಜನಯಾಮಾಸ ಸೋಮಂ ಪುತ್ರಂ ಯಶಸ್ವಿನಂ ।
ಸ ತಾಸು ಜನಯಾಮಾಸ ಪುನಃ ಪುತ್ರಾಂ ಸ್ತಪೋ ಧನಃ ॥೭೪॥

ಸ್ವಸ್ಯಾತ್ರೇಯಾ ಇತಿ ಖ್ಯಾತಾ ಋಷಯೋ ವೇದಪಾರಗಾಃ ।
ತೇಷಾಂ ದ್ವೌ ಖ್ಯಾತ ಯಶಸೌ ಬ್ರಹ್ಮಿಷ್ಠೌ ಚ ಮಹೌಜಸೌ ॥೭೫॥

ದತ್ತೋ ಹ್ಯತ್ರಿವರೋ ಜ್ಯೇಷ್ಠೋ ದುರ್ವಾಸಾಸ್ತಸ್ಯ ಚಾನುಜಃ ।
ಯವೀಯಸೀ ಸ್ವಸಾ ತೇಷಾ ಮಮಲಾ ಬ್ರಹ್ಮವಾದಿನೀ ॥೭೬॥

ತಸ್ಯ ಗೋತ್ರದ್ವಯೇ ಜಾತಾ ಶ್ಚತ್ವಾರಃ ಪ್ರಥಿತಾ ಭುವಿ ।
ಶ್ಯಾವಶ್ಚ ಪ್ರತ್ವಸ ಶ್ಚೈವ ವವಲ್ಗುಶ್ಚಾಥ ಗಹ್ವರಃ ॥೭೭॥

ಆತ್ರೇಯಾಣಾಂ ಚ ಚತ್ವಾರಃ ಸ್ಮೃತಾಃ ಪಕ್ಷಾ ಮಹಾತ್ಮನಾಂ ।
ಕಾಶ್ಯಪೋ ನಾರದಶ್ಚೈವ ಪರ್ವತೋಽನುದ್ಧತಸ್ತಥಾ ॥೭೮॥

ಜಜ್ಞಿರೇ ಮಾನಸಾ ಹ್ಯೇತೇ ಅರುಂಧತ್ಯಾ ನಿಬೋಧತ ।
ನಾರದಸ್ತು ವಸಿಷ್ಠಾಯಾರುಂಧತೀಂ ಪ್ರತ್ಯಪಾದಯತ್ ॥೭೯॥

---

೭೪–೭೬. ಅತ್ರಿಮಹರ್ಷಿಯು, ಭದ್ರೆ ಎಂಬುವಳಲ್ಲಿ ಕೀರ್ತಿವಂತನಾದ "ಸೋಮ" ಎಂಬ ಮಗನನ್ನೂ, ಪುನಃ ಅವಳಲ್ಲಿಯೇ ಇನ್ನೂ ಕೆಲವು ಮಕ್ಕಳನ್ನೂ ಪಡೆದನು. ಇವರು ವೇದಪಾರಂಗತರೂ, ಋಷಿಗಳೂ, ಮಂಗಳಸ್ವರೂಪರೂ ಆದ ಆತ್ರೇಯರೆಂದು ಪ್ರಖ್ಯಾತರಾದರು. ಇವರಿಗೆ ಬ್ರಹ್ಮಜ್ಞಾನಿಗಳೂ, ಮತ್ತು ಬಹಳ ತೇಜಸ್ವಿಗಳೂ, ಜಗತ್ತಿನಲ್ಲಿ ಕೀರ್ತಿಮಂತರೂ ಆದ ದತ್ತ, ಎಂಬ ಶ್ರೇಷ್ಠನಾದ ಹಿರಿಯ ಮಗನೂ, ದುರ್ವಾಸಾ, ಎಂಬ ಅವನ ತಮ್ಮನೂ, ಬ್ರಹ್ಮಜ್ಞಾನಿಯಾದ ಅವರೆಲ್ಲರಿಗೂ, ಚಿಕ್ಕ ತಂಗಿಯಾದ ಅಮಲಾ, ಎಂಬ ಹೆಣ್ಣುಮಗಳೂ, ಉತ್ಪನ್ನರಾದರು.

೭೭–೭೯. ಮಹಾತ್ಮನಾದ ಅತ್ರಿವಂಶದ ನಾಲ್ಕು ಗುಂಪುಗಳು, ಕಾಶ್ಯಪ, ನಾರದ, ಪರ್ವತ, ಮತ್ತು ಅನುದ್ಧತ, ಎಂದು ಪ್ರಸಿದ್ಧವಾಗಿವೆ. ಅರುಂಧತಿಯ ಮನಸ್ಸಿನಿಂದಲೇ ಇವರು ಸೃಷ್ಟಿಮಾಡಲ್ಪಟ್ಟರು. ಎಂದು ತಿಳಿಯಿರಿ. ನಾರದನು ವಸಿಷ್ಠನಿಗೆ ಅರುಂಧತಿಯನ್ನು ಕೊಟ್ಟು ವಿವಾಹವನ್ನು ಮಾಡಿದನು

ಊರ್ಧ್ವರೇತಾ ಮಹಾತೇಜಾ ದಕ್ಷ ಶಾಪಾತ್ತು ನಾರದಃ ।
ಪುರಾ ದೇವಾಸುರೇ ಯುದ್ಧೇ ಘೋರೇ ವೈ ತಾರಕಾ ಮಯೇ ॥

ಅನಾವೃಷ್ಟ್ಯಾ ಹತೇ ಲೋಕೇ ಹ್ಯಗ್ರೇ ಲೋಕೇಶ್ವರೈಃ ಸಹ ।
ವಸಿಷ್ಠಸ್ತಪಸಾ ಧೀಮಾ ನ್ಧಾರಯಾ ಮಾಸ ವೈ ಪ್ರಜಾಃ ॥೮೧॥

ಅನ್ನೋ ದಕಂ ಮೂಲಫಲಂ ಓಷಧೀಶ್ಚ ಪ್ರವರ್ತಯನ್ ।
ತಾನೇತಾನ್ ಜೀವಯಾಮಾಸ ಕಾರುಣ್ಯಾದೌ ಷ ಧೇನ ಚ ॥೮೨॥

ಅರುಂಧತ್ಯಾಂ ವಸಿಷ್ಠಸ್ತು ಸುತಾನುತ್ಪಾದಯ ಚ್ಛತಂ ।
ಜ್ಯಾಯಸೋಽಜನಯಚ್ಛಕ್ತೇರ ದೃಶ್ಯಂತೀ ಪರಾಶರಂ ॥೮೩॥

ರಕ್ಷಸಾ ಭಕ್ಷಿತೇ ಶಕ್ತೌ ರುಧಿರೇಣ ತು ವೈ ತದಾ ।
ಕಾಲೀ ಪರಾಶರಾಜ್ಜಜ್ಞೇ ಕೃಷ್ಣ ದ್ವೈ ಪಾಯನಂ ಪ್ರಭುಂ ॥೮೪॥

---

೮೦–೮೧. ಬಹಳ ತೇಜಸ್ವಿಯಾದ ನಾರದನು ಹಿಂದೆ ದಕ್ಷಶಾಪದಿಂದ ಭಯಂಕರವಾದ ತಾರಕಾಸುರನಿಗೂ, ದೇವತೆಗಳಿಗೂ, ಉಂಟಾದ ದೇವಾಸುರ ಯುದ್ಧದಕಾಲದಲ್ಲಿ ಮೇಲ್ಮುಖವಾದ ರೇತಸ್ಸುಳ್ಳವನಾಗಿದ್ದನು. ಆಗ ಭಯಂಕರವಾದ ರೀತಿಯಲ್ಲಿ ಲೋಕದಲ್ಲಿ ಮಳೆಯೇ ಇಲ್ಲದಿರಲು ಲೋಕೇಶ್ವರರೊಡನೆ ವಸಿಷ್ಠನು ತನ್ನ ತಪಸ್ಸಿನಿಂದ ಲೋಕವನ್ನು ಕಾಪಾಡಿದನು.

೮೨. ಆಗ ವಸಿಷ್ಠಮಹರ್ಷಿಯು ಬಹಳ ಕೃಪೆಯಿಂದ ಕೂಡಿದವನಾಗಿ ಅನ್ನ ನೀರುಗಳಿಂದಲೂ, ಸಸ್ಯಗಳಿಂದಲೂ, ಗೆಡ್ಡೆಗೆಣಸುಗಳಿಂದಲೂ, ಮೂಲಿಕೆಗಳಿಂದಲೂ, ಲೋಕವನ್ನು ಬದುಕಿಸಿದನು.

೮೩–೮೪. ವಸಿಷ್ಠಮಹರ್ಷಿಯು ಅರುಂಧತಿಯಲ್ಲಿ ನೂರು ಮಕ್ಕಳನ್ನು, ಪಡೆದನು. ಕಾಳಿಯು ವಸಿಷ್ಠನ ಪುತ್ರಶ್ರೇಷ್ಠನಾದ ಶಕ್ತಿಯು ರಾಕ್ಷಸರ ರಕ್ತದಿಂದ ನುಂಗಲ್ಪಟ್ಟಿರುವುದನ್ನು ಕಂಡಳು. ಆಗ ಅವಳು ಪರಾಶರಮಹರ್ಷಿಗಳ ಮೂಲಕ ಮಹಾಮಹಿಮರಾದ ವ್ಯಾಸಮಹರ್ಷಿಗಳನ್ನು ಸೃಜಿಸಿದಳು.

ದ್ವೈಪಾಯನೋ ಹ್ಯರಣ್ಯಾಂ ವೈ ಶುಕಮುತ್ಪಾದ ಯತ್ಸುತಂ ।
ಉಪಮನ್ಯುಂ ಚ ಪೀವರ್ಯಂ ವಿದ್ಧೀಮೇ ಶುಕ ಸೂನವಃ ॥೮೫॥
ಭೂರಿಶ್ರವಾಃ ಪ್ರಭುಃ ಶಂಭುಃ ಕೃಷ್ಣೋ ಗೌರಸ್ತು ಪಂಚಮಃ ।
ಕನ್ಯಾ ಕೀರ್ತಿಮತೀ ಚೈವ ಯೋಗಮಾತಾ ಧೃತವ್ರತಾ ॥೮೬॥
ಜನನೀ ಬ್ರಹ್ಮದತ್ತಸ್ಯ ಪತ್ನೀ ಸಾ ತ್ವನು ಹಸ್ಯಚ ।
ಶ್ವೇತಃ ಕೃಷ್ಣಶ್ಚ ಗೌರಶ್ಚ ಶ್ಯಾಮೋ ಧೂಮ್ರಸ್ತಥಾಽರುಣಃ ॥೮೭॥
ನೀಲೋ ಬಾದರಿಕಶ್ಚೈವ ಸರ್ವೇಚೈತೇ ಪರಾಶರಾಃ ।
ಪರಾಶರಾಣಾ ಮಷ್ಟೌತೇ ಪಕ್ಷಾಃ ಪ್ರೋಕ್ತಾ ಮಹಾತ್ಮನಾಂ ॥೮೮॥
ಅತ ಊರ್ಧ್ವಂ ನಿಬೋಧಧ್ವ ಮಿಂದ್ರಪ್ರಮಿತಿ ಸಂಭವಂ ।
ವಸಿಷ್ಠಸ್ಯ ಕಪಿಂಜಲ್ಯೋ ಘೃತಾಚ್ಯಾ ಮುದಪದ್ಯತ ॥೮೯॥

---

೮೫. ವ್ಯಾಸಮಹರ್ಷಿಗಳು "ಅರಣೀ" ಎಂಬುವಳಲ್ಲಿ, ಅಗ್ನಿಮಥನಕ್ಕಾಗಿ ಉಪಯೋಗಿಸುವ ಮರದಲ್ಲಿ, ಶುಕ ಮಹರ್ಷಿಯನ್ನು ಪಡೆದರು. ಶುಕಮಹರ್ಷಿಗಳು ಉಪಮನ್ಯು, ಪೀವರ್ಯ, ಅಣುಹನ ಪತ್ನಿಯೂ, ಬ್ರಹ್ಮದತ್ತನ ತಾಯಿಯೂ ಆದ ಕೀರ್ತಿಮತೀ (ಕೃತ್ವೀ), ಎಂಬ ಮಕ್ಕಳನ್ನು ಪಡೆದರು.

೮೬–೮೮. ಶುಕಮಹರ್ಷಿಗೆ ಪೀವರಿಯಲ್ಲಿ ಭೂರಿಶ್ರವಸ್ಸು, ಪ್ರಭು, ಶಂಭು, ಕೃಷ್ಣ, ಐದನೆಯವನಾದ ಗೌರ, ಎಂಬುವನೂ, ಕೀರ್ತಿಮತೀ, ಯೋಗಮಾತಾ, ಧೃತವ್ರತಾ, ಎಂಬ ಹೆಣ್ಣುಮಕ್ಕಳೂ ಆದರು. ಇವರು ಪರಾಶರಮಹರ್ಷಿಗಳ ಗುಂಪಿನವರು, ನೀಲ, ಬಾದರಿಕ, ಶ್ವೇತ, ಕೃಷ್ಣ, ಗೌರ, ಶ್ಯಾಮ, ಧೂಮ್ರ, ಅರುಣ, ಎಂಬುವರೂ ಪರಾಶರರಿಗೆ ಸಂಬಂಧಪಟ್ಟವರು. ಇವರೇ ಮಹಾತ್ಮರಾದ ಪರಾಶರರಿಗೆ ಸಂಬಂಧಪಟ್ಟ ಎಂಟು ಗೋತ್ರಗಳ ಗುಂಪುಗಳು ಎಂದು ತಿಳಿಯಿರಿ.

೮೯. ಇದಾದಮೇಲೆ ಇಂದ್ರಪ್ರಮಿತಿಯಿಂದ ಹುಟ್ಟಿದ ವರನ್ನು ತಿಳಿಯಿರಿ. ವಸಿಷ್ಠನಿಂದ ಘೃತಾಚಿ ಎಂಬ ಅಪ್ಸರಸೆಯಲ್ಲಿ "ಕಪಿಂಜಲ್ಯ" ಎಂಬ ಮಗನು ಹುಟ್ಟಿದರು.

ತ್ರಿಮೂರ್ತಿರ್ಯಃ ಸಮಾಖ್ಯಾತ ಇಂದ್ರಪ್ರಮಿತಿ ರುಚ್ಯತೇ ।
ಪೃಥೋಃ ಸುತಾಯಾಂ ಸಂಭೂತೋ ಭದ್ರಸ್ತಸ್ಯಾ ಭವದ್ವಸುಃ ॥
ಉಪಮನ್ಯುಃ ಸುತಸ್ತಸ್ಯ ಬಹವೋ ಹ್ಯುಪಮನ್ಯವಃ ।
ಮಿತ್ರಾವರುಣಯೋಶ್ಚೈವ ಕೌಂಡಿನ್ಯಾ ಯೇ ಪರಿಶ್ರುತಾಃ ॥೯೧॥
ಏತೇ ಪಕ್ಷಾ ವಸಿಷ್ಠಾನಾಂ ಸ್ಮೃತಾ ದಶ ಮಹಾತ್ಮನಾಂ ॥೯೨॥
ಇತ್ಯೇತೇ ಬ್ರಹ್ಮಣಃ ಪುತ್ರಾ ಮಾನಸಾ ವಿಶ್ರುತಾ ಭುವಿ ।
ಭರ್ತಾರಶ್ಚ ಮಹಾಭಾಗಾ ಏಷಾಂ ವಂಶಾಃ ಪ್ರಕೀರ್ತಿತಾಃ ॥೯೩॥

---

೯೦. ತ್ರಿಮೂರ್ತಿ ಎಂದು ಪ್ರಸಿದ್ಧನಾಗಿರುವವನೇ ಇಂದ್ರಪ್ರಮಿತಿ, ಎಂದು ಹೆಸರು ಪಡೆದಿದ್ದಾನೆ. ಆ ತ್ರಿಮೂರ್ತಿಗೆ ಪೃಥುವಿನ ಮಗಳಲ್ಲಿ ವಸುವು ಹುಟ್ಟಿದನು.

೯೧–೯೨. ಅವನಿಗೆ ಉಪಮನ್ಯುವು ಮಗನು. ಉಪಮನ್ಯುವಿನ ಮಕ್ಕಳು ಅನೇಕರು. ಮಿತ್ರಾವರುಣರಾದ ವಸಿಷ್ಠರಿಂದ ಉತ್ಪನ್ನರಾದ ಕೌಂಡಿನ್ಯರೆಂದು ಹೆಸರುಳ್ಳ ವಸಿಷ್ಠರು ಅನೇಕ ಮಂದಿ ಒಂದೇ ಋಷಿಯಿಂದ ಹುಟ್ಟಿದವರೆಂದು ಪ್ರಸಿದ್ಧರಾಗಿದ್ದಾರೆ, ಮಹಾತ್ಮರಾದ ವಸಿಷ್ಠರಿಗೆ ಸಂಬಂಧಪಟ್ಟ ಇವೇ ಹತ್ತು ಗುಂಪುಗಳು, ಎಂದು ತಿಳಿಯಬೇಕು.

೯೩–೯೫. ಈ ರೀತಿಯಾಗಿ ಬ್ರಹ್ಮನ ಮನಸ್ಸಿನಿಂದ ಹುಟ್ಟಿದ, ಮಹಾಭಾಗ್ಯಶಾಲಿಗಳೂ ಮತ್ತು ಅಧಿಪತಿಗಳೂ ಆದ ಮಕ್ಕಳು ಮತ್ತು ಅವರ ವಂಶವೂ ಹೇಳಲ್ಪಟ್ಟಿದೆ. ಇವರಿಂದ ಮೂರು ಲೋಕವನ್ನೂ ಕಾಪಾಡುವುದರಲ್ಲಿ ಸಮರ್ಥರಾದ ದೇವತೆಗಳೂ, ಋಷಿಗಳೂ, ಮುಂತಾದ

ತ್ರಿಲೋಕ ಧಾರಣೇ ಶಕ್ತಾ ದೇವರ್ಷಿಕುಲ ಸಂಭವಾಃ ।
ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಶತಶೋಽಥ ಸಹಸ್ರಶಃ ॥೯೪॥
ಯ್ಯೈಸ್ತು ವ್ಯಾಪ್ತಾಸ್ತ್ರಯೋ ಲೋಕಾಃ ಸೂರ್ಯಸ್ಯೇವ ಗಭಸ್ತಿಭಿಃ ॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ದೇವಾದಿಸೃಷ್ಟಿ ವಿವರಣಂ
ನಾಮ ತ್ರಿ ಷಷ್ಟಿತಮೋಽಧ್ಯಾಯಃ

---

ವರು ದೇವರ್ಷಿಗಳವಂಶಗಳಲ್ಲಿ ಹುಟ್ಟಿದರು. ಇವರಿಗೆ ನೂರಾರು, ಸಹಸ್ರಾರು ಮಂದಿ ಮಕ್ಕಳೂ, ಮೊಮ್ಮಕ್ಕಳೂ, ಹುಟ್ಟಿದರು. ಸೂರ್ಯನ ಕಿರಣದಂತೆ ಈ ಮಕ್ಕಳುಗಳಿಂದ ಮೂರುಲೋಕವೂ, ವ್ಯಾಪಿಸಲ್ಪಟ್ಟಿದೆ.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ದೇವಾದಿಗಳಸೃಷ್ಟಿಯ ವಿವರಣೆ
ಎಂಬ ಅರವತ್ತುಮೂರನೆಯ ಅಧ್ಯಾಯವು ಮುಗಿದುದು.



## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಚತುಃ ಷಷ್ಟಿತಮೋಽಧ್ಯಾಯಃ

॥ ಋಷಯ ಊಚುಃ ॥

ಕಥಂ ಹಿ ರಕ್ಷಸಾ ಶಕ್ತಿ ರ್ಭಕ್ಷಿತಃ ಸೋಽನುಜೈಃ ಸಹ ।
ವಾಸಿಷ್ಠೋ ವದತಾಂ ಶ್ರೇಷ್ಠ ಸೂತ ವಕ್ತು ಮಿಹಾರ್ಹಸಿ ॥ ೧ ॥

॥ ಸೂತ ಉವಾಚ ॥

ರಾಕ್ಷಸೋ ರುಧಿರೋ ನಾಮ ವಸಿಷ್ಠಸ್ಯ ಸುತಂ ಪುರಾ ।
ಶಕ್ತಿಂ ಸ ಭಕ್ಷಯಾ ಮಾಸ ಶಕ್ತೇಃ ಶಾಪಾ ತ್ಸಹಾನುಜೈಃ ॥ ೨ ॥
ವಸಿಷ್ಠಯಾಜ್ಯಂ ವಿಪ್ರೇಂದ್ರಾ ಸ್ತದಾವಿಶ್ಯೈವ ಭೂಪತಿಂ ।
ಕಲ್ಮಾಷ ಪಾದಂ ರುಧಿರೋ ವಿಶ್ವಾಮಿತ್ರೇಣ ಚೋದಿತಃ ॥ ೩ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಅರವತ್ತುನಾಲ್ಕನೆಯ ಅಧ್ಯಾಯವು.

೧. ಋಷಿಗಳು ಹೇಳಿದರು: ವಸಿಷ್ಠವಂಶ ಪ್ರಸೂತನಾದ, ತಿಳಿಯಹೇಳುವವರಲ್ಲಿ ಶ್ರೇಷ್ಠನಾದ, ಓ ಸೂತಮಹರ್ಷಿಗಳೇ, ತಮ್ಮಂದಿರೊಡನೆ ರಾಕ್ಷಸನು ಆ ಶಕ್ತಿಯನ್ನು ನುಂಗಿದ ಬಗೆಯನ್ನು ದಯವಿಟ್ಟು ತಾವು ತಿಳಿಸಬೇಕು.

೨. ಸೂತನು ಹೇಳಿದನು: ಹಿಂದೆ ರುಧಿರನೆಂಬ ರಾಕ್ಷಸನು ತಮ್ಮಂದಿರೊಡನೆ ವಸಿಷ್ಠನ ಮಗನಾದ ಶಕ್ತಿಯನ್ನೂ, ವಿಶ್ವಾಮಿತ್ರನಿಂದ ಕೊಡಲ್ಪಟ್ಟ ಶಕ್ತಿಯ ಶಾಪದಿಂದ ನುಂಗುಹಾಕಿದನು. ಈ ಕಥೆಯನ್ನು ವಾಲ್ಮೀಕಿ ರಾಮಯಣವಲ್ಲಿ ವಿವರಿಸಿದೆ.

೩-೪. ಎಲೈ ಬ್ರಾಹ್ಮಣರೇ, ವಿಶ್ವಾಮಿತ್ರನಿಂದ ಪ್ರೇರಿಸಲ್ಪಟ್ಟವನಾಗಿ ರುಧಿರ ರಾಕ್ಷಸನು, ವಸಿಷ್ಠನ ಶಿಷ್ಯನಾದ ಕಲ್ಮಾಷಪಾದನನ್ನು

ಭಕ್ಷಿತಃ ಸ ಇತಿ ಶ್ರುತ್ವಾ ವಸಿಷ್ಠಸ್ತೇನ ರಕ್ಷಸಾ ।
ಶಕ್ತಿಃ ಶಕ್ತಿಮತಾಂ ಶ್ರೇಷ್ಠೋ ಭ್ರಾತೃಭಿಃ ಸಹ ಧರ್ಮವಿತ್ ॥ ೪ ॥

ಹಾ ಪುತ್ರ ಪುತ್ರೇತಿ ಕ್ರಂದಮಾನೋ ಮುಹುರ್ಮುಹುಃ ।
ಅರುಂಧತ್ಯಾ ಸಹ ಮುನಿಃ ಪಪಾತ ಭುವಿ ದುಃಖಿತಃ ॥ ೫ ॥

ನಷ್ಟಂ ಕುಲಮಿತಿ ಶ್ರುತ್ವಾ ಮರ್ತುಂ ಚಕ್ರೇ ಮತಿಂ ತದಾ ।
ಸ್ಮರನ್ ಪುತ್ರ ಶತಂ ಚೈವ ಶಕ್ತಿ ಜ್ಯೇಷ್ಠಂ ಚ ಶಕ್ತಿಮಾನ್ ॥ ೬ ॥

ನ ತಂ ವಿನಾಽಹಂ ಜೀವಿಷ್ಯೇ ಇತಿ ನಿಶ್ಚಿತ್ಯ ದುಃಖಿತಃ ॥ ೭ ॥

ಆರುಹ್ಯ ಮೂರ್ಧಾನ ಮ ಜಾತ್ಮಜೋಽಸೌ ।
ತಯಾಽಽತ್ಮವಾನ್ ಸರ್ವ ವಿದಾತ್ಮ ವಿಚ್ಚ ॥

---

ದೊರೆಯನ್ನಾಗಿ ನಿಯಮಿಸಿ ಯಾಗಮಾಡುತ್ತಿರುವ ಸಂದರ್ಭದಲ್ಲಿ ವಸಿಷ್ಠನ ಮಗನಾದ ಶಕ್ತಿಯನ್ನು ತಮ್ಮಂದಿರೊಡನೆ ತಿಂದು ಹಾಕಿದನು. ಎಂಬ ಮಹಾಪ್ರಭಾವ ಶಾಲಿಯಾದ ಧರ್ಮಜ್ಞನಾದ ವಸಿಷ್ಠನಿಗೆ ಈ ವಿಷಯವು ತಿಳಿಯಿತು.

೫. ವಸಿಷ್ಠಮಹರ್ಷಿಯು ಅರುಂಧತಿಯೊಂದಿಗೆ ಬಹಳ ಸಂಕಟಪಡುತ್ತಾ, ಅಯ್ಯೋ ಮಗನೆ! ಅಯ್ಯೋ ಮಗನೆ! ಎಂದು ಬಾರಿಬಾರಿಗೂ ಅಳುತ್ತಾ ಭೂಮಿಯಮೇಲೆ ಬಿದ್ದು ಬಿಟ್ಟನು.

೬–೮. ಮಹಾಮಹಿಮನಾದ ವಸಿಷ್ಠನು ತನ್ನ ಕುಲವೇ ನಷ್ಟವಾಯಿತೆಂದು ಕೇಳಿ, ನೂರಾರು ಮಕ್ಕಳನ್ನೂ, ಹಿರಿಯವನಾದ ಶಕ್ತಿಯನ್ನೂ ಜ್ಞಾಪಿಸಿಕೊಳ್ಳುತ್ತಾ ಸಾಯಲು ಇಚ್ಛಿಸಿದನು. ಮಹಾತ್ಮನಾದ ವಸಿಷ್ಠನು ಆತ್ಮಜ್ಞಾನಿಯಾಗಿದ್ದರೂ, ಎಲ್ಲವನ್ನೂ ತಿಳಿದಿದ್ದರೂ, ಪುತ್ರಮರಣ ಸಂಕಟವನ್ನು ತಡೆಯಲಾರದೆ ಕಣ್ಣೀರಿಡುತ್ತಾ ಆಗ ಪತ್ನಿಯೊಡನೆ ಪರ್ವತಾಗ್ರದಿಂದ ಭೂಮಿಗೆ ಬಿದ್ದು ಬಿಟ್ಟನು.

ಧರಾ ಧರಸ್ಯೈವ ತದಾ ಧರಾಯಾಂ ।
ಪಪಾತ ಪತ್ನ್ಯಾ ಸಹ ಸಾಶ್ರು ದೃಷ್ಟಿಃ ॥ ೮ ॥

ಧರಾ ಧರಾತ್ತಂ ಪತಿತಂ ಧರಾ ತದಾ ।
ದಧಾರ ತತ್ರಾಪಿ ವಿಚಿತ್ರ ಕಂ ಠೀ ॥

ಕರಾಂಬುಜಾಭ್ಯಾಂ ಕರಿಬೇಲ ಗಾಮಿನೀ ।
ರುದಂತ ಮಾದಾಯ ರುದೋದಸಾ ಚ ॥ ೯ ॥

ತದಾ ತಸ್ಯ ಸ್ನುಷಾ ಪ್ರಾಹ ಪತ್ನೀ ಶಕ್ತೇರ್ಮಹಾ ಮುನಿಂ ।
ವಸಿಷ್ಠಂ ವದತಾಂ ಶ್ರೇಷ್ಠಂ ರುದಂತೀ ಭಯ ವಿಹ್ವಲಾ ॥೧೦॥

ಭಗವನ್ಬ್ರಹ್ಮಣ ಶ್ರೇಷ್ಠ ತವದೇಹ ಮಿಮಂ ಶುಭಂ ।
ಪಾಲಯಸ್ವ ವಿಭೋ ದ್ರಷ್ಟುಂ ತವ ಪೌತ್ರಂ ಮ ಮಾತ್ಮಜಂ ॥೧೧॥

ಸ ತ್ಯಾಜ್ಯಂ ತವ ವಿಪ್ರೇಂದ್ರ ದೇಹಮೇತತ್ಸು ಶೋಭನಂ ।
ಗರ್ಭಸ್ಥೋ ಮಮ ಸರ್ವಾರ್ಥ ಸಾಧಕಃ ಶಕ್ತಿಜೋ ಯುತಃ ॥೧೨॥

---

೯. ಪರ್ವತದಿಂದ ಬಿದ್ದು ಅಳುತ್ತಿರುವ ವಸಿಷ್ಠಮಹರ್ಷಿಯನ್ನು ಸುಂದರವಾದ ಕತ್ತುಳ್ಳ, ಆನೆಯಂತೆ ಮಂದಗಾಮಿನಿಯಾದ ಭೂಮಿದೇವಿಯು ತನ್ನ ಕಮಲದಂತೆ ಇರುವ ಕೈಗಳಿಂದ ತಡೆದು ಧರಿಸಿಕೊಂಡಳು ಮತ್ತು ಅವಳೂ ಸಹಾನುಭೂತಿಯಿಂದ ಅತ್ತಳು.

೧೦–೧೨. ಆಗ ಅವನ ಸೊಸೆಯಾದ ಶಕ್ತಿಯ ಪತ್ನಿಯು, ಋಷಿ ಶ್ರೇಷ್ಠನಾದ, ಒಳ್ಳೆಯ ಮಾತುಗಾರನಾದ ವಸಿಷ್ಠನನ್ನು ಕುರಿತು ಇಂತೆಂದಳು. ಅವಳು ಮಾತನಾಡುವಾಗ, ಅಳುತ್ತಲೂ, ಭಯಗ್ರಸ್ತಳಾಗಿಯೂ ಇದ್ದಳು. ಅವಳು ಹೇಳಿದ್ದೇನೆಂದರೆ; ಪೂಜ್ಯರಾದ ಶ್ರೇಷ್ಠ ಬ್ರಾಹ್ಮಣರೇ, ತಮ್ಮ ಪವಿತ್ರವಾದ ಶರೀರವನ್ನು ದಯವಿಟ್ಟು ಉಳಿಸಿರಿ. ಏಕೆಂದರೆ ಸ್ವಾಮಿಯಾದ ತಾವು ನಿಮ್ಮ ಮೊಮ್ಮಗನನ್ನು ನೋಡಬೇಕು. ಶಕ್ತಿಯಿಂದ ಉತ್ಪನ್ನವಾದ ಶಿಶುವು ಇನ್ನೂ ನನ್ನ ಗರ್ಭದಲ್ಲೇ ಇದೆ. ಅದು ಶಕ್ತಿಯಿಂದ ಉತ್ಪನ್ನವಾದ್ದರಿಂದ ಎಲ್ಲಾ ಸಿದ್ಧಿಗಳನ್ನೂ ಪಡೆಯುವ ಶಕ್ತಿಯುಳ್ಳದ್ದು.

ಏವ ಮುಕ್ತ್ವಾಽಥ ಧರ್ಮಜ್ಞಾ ಕರಾಭ್ಯಾಂ ಕಮಲೇಕ್ಷಣಾ ।
ಉತ್ಥಾಪ್ಯ ಶ್ವಶುರಂ ನತ್ವಾ ನೇತ್ರೇ ಸಂಮೃಜ್ಯ ವಾರಿಣಾ ॥೧೩॥
ದುಃಖಿತಾಽಪಿ ಪರಿತ್ರಾತುಂ ಶ್ವಶುರಂ ದುಃಖಿತಂ ತದಾ ।
ಅರುಂಧತೀಂ ಚ ಕಲ್ಯಾಣೀಂ ಪ್ರಾರ್ಥಯಾ ಮಾಸ ದುಃಖಿತಾಂ ॥
ಸ್ನುಷಾವಾಕ್ಯಂ ತತಃ ಶ್ರುತ್ವಾ ವಸಿಷ್ಠೋ ತ್ಥಾಯ ಭೂತಲಾತ್ ।
ಸಂಜ್ಞಾ ಮವಾಪ್ಯ ಚಾಲಿಂಗ್ಯ ಸಾ ಪಪಾತ ಸು ದುಃಖಿತಾ ॥೧೫॥
ಅರುಂಧತೀ ಕರಾಭ್ಯಾಂ ತಾಂ ಸಂಸ್ಪೃಶ್ಯಾ ಸ್ರಾಕುಲೇಕ್ಷಣಾಂ ।
ರುರೋದ ಮುನಿಶಾರ್ದೂಲೋ ಭಾರ್ಯಯಾ ಸುತ ವತ್ಸಲಃ ॥೧೬॥
ಅಥ ಸಾಭ್ಯಂಬುಜೇ ವಿಷ್ಣೋರ್ಯಥಾ ತಸ್ಯಾಶ್ಚತುರ್ಮುಖಃ ।
ಆಸೀನೋ ಗರ್ಭ ಶಯ್ಯಾಯಾಂ ಕುಮಾರ ಋಚ ಮಾಹ ಸಃ ॥

---

೧೩–೧೫. ಹೀಗೆ ಹೇಳಿದ ನಂತರ ಧರ್ಮವನ್ನರಿತ, ಕಮಲ ಲೋಚನೆಯಾದ ಅವನ ಸೊಸೆಯು ವಸಿಷ್ಠನನ್ನು ನಮಸ್ಕರಿಸಿ, ಅವನನ್ನು ತನ್ನ ಕೈಗಳಿಂದ ಎಬ್ಬಿಸಿ, ಅವನ ಕಣ್ಣೀರನ್ನು ನೀರಿನಿಂದ ಒರೆಸಿದಳು. ವಸಿಷ್ಠನು ಸೊಸೆಯ ಮಾತನ್ನು ಕೇಳಿ ಮೂರ್ಛೆಯಿಂದ ಎಚ್ಚೆತ್ತು ಭೂಮಿಯಿಂದೆದ್ದನು. ಆಗ ಅವನು ಅರುಂಧತಿಯನ್ನು ಆಲಂಗಿಸಿ ಸಮಾಧಾನಗೊಳಿಸಿದನು. ಆದರೂ ಅರುಂಧತಿಯು ಬಹಳ ದುಃಖದಿಂದ ಭೂಮಿಯ ಮೇಲೆ ಪುನಃ ಬಿದ್ದುಬಿಟ್ಟಳು.

೧೬. ಮುನಿಶ್ರೇಷ್ಠನಾದ ವಸಿಷ್ಠನು ದುಃಖದಿಂದ ಅಳುತ್ತಿರುವ ಅರುಂಧತಿಯನ್ನು ಕೈಗಳಿಂದ ಸವರಿ ಪುತ್ರಪ್ರೇಮದಿಂದ ಅವಳೊಂದಿಗೆ ಪುನಃ ಇವನೂ ಅತ್ತನು.

೧೭. ಅನಂತರ ವಿಷ್ಣುವಿನ ನಾಭಿಕಮಲಗಳಲ್ಲಿ ಬ್ರಹ್ಮನು ಹೇಗೋ ಹಾಗೆ ಗರ್ಭದೊಳಗೆ ಕುಮಾರನು ಸುಖವಾಗಿರಲು, ಒಂದು ಋಙ್ಮಂತ್ರವನ್ನು ಹೇಳಿದನು. ವಸಿಷ್ಠನಿಗೆ ಆ ವೇದಮಂತ್ರ ಒಂದು ಕೇಳಿಸಿತು.

ತತೋ ನಿಶಮ್ಯ ಭಗವಾನ್ ವಸಿಷ್ಠ ಋಚ ಮಾದರಾತ್ ।
ಕೇನೋಕ್ತ ಮಿತಿ ಸಂಚಿಂತ್ಯ ತದಾಽ ತಿಷ್ಠತ್ಸ ಮಾಹಿತಃ ॥೧೮॥

ವ್ಯೋಮಾಂಗಣಸ್ಥೋಽಥ ಹರಿಃ ಪುಂಡರೀಕ ನಿಭೇಕ್ಷಣಃ ।
ವಸಿಷ್ಠ ಮಾಹ ವಿಶ್ವಾತ್ಮಾ ಘೃಣಯಾ ಸ ಘೃಣಾನಿಧಿಃ ॥೧೯॥

ಭೋ ವತ್ಸ ವತ್ಸ ವಿಪ್ರೇಂದ್ರ ವಸಿಷ್ಠ ಸುತ ವತ್ಸಲ ।
ತವ ಪೌತ್ರ ಮುಖಾಂ ಭೋಜಾ ದೃಗೇ ಷಾಽದ್ಯ ವಿನಿಃ ಸ್ಸೃತಾ॥೨೦॥

ಮತ್ಸ ಮಸ್ತವ ಪೌತ್ರೋಽಸೌ ಶಕ್ತಿಜಃ ಶಕ್ತಿಮಾನ್ಮ ನೇ ।
ತಸ್ಮಾದುತ್ತಿಷ್ಠ ಸಂತ್ಯಜ್ಯ ಶೋಕಂ ಬ್ರಹ್ಮ ಸುತೋತ್ತಮ ॥೨೧॥

ರುದ್ರ ಭಕ್ತಶ್ಚ ಗರ್ಭಸ್ಥೋ ರುದ್ರ ಪೂಜಾ ಪರಾಯಣಃ ।
ರುದ್ರ ದೇವ ಪ್ರಭಾವೇಣ ಕುಲಂ ತೇ ಸಂತರಿಷ್ಯತಿ ॥೨೨॥

---

೧೮. ಆಗ ಪೂಜ್ಯನಾದ ವಸಿಷ್ಠನು ಆ ವೇದಮಂತ್ರವನ್ನು ಪ್ರೀತಿಯಿಂದ ಕೇಳಿ, ಯಾರು ಹೀಗೆ ಹೇಳುತ್ತಿರುವರು ? ಎಂದು ಸಾವಧಾನವಾಗಿ ಯೋಚಿಸಿದನು.

೧೯-೨೧. ಆಗ ಆಕಾಶಮಧ್ಯದಲ್ಲಿ ನಿಂತುಕೊಂಡು, ಕಮಲದಂತೆ ಕಣ್ಣುಗಳುಳ್ಳ, ಜಗತ್ತಿನಲ್ಲೆಲ್ಲಾ ವ್ಯಾಪಿಸಿರುವ, ಕರುಣೆಗೆ ನಿಧಿಯಾದ, ಶ್ರೀ ಹರಿಯು, ವಸಿಷ್ಠನನ್ನು ಕುರಿತು, ಎಲೈ ಪ್ರೀತಿಪಾತ್ರನಾದ ನನ್ನ ಮಗುವೇ, ಬ್ರಾಹ್ಮಣ ಶ್ರೇಷ್ಠನಾದ, ಮಕ್ಕಳಲ್ಲಿ ವಾತ್ಸಲ್ಯವುಳ್ಳ, ವಸಿಷ್ಠಮಹರ್ಷಿಯೇ, ನಿನ್ನ ಮೊಮ್ಮಗನ ಕಮಲದಂತಿರುವ ಮುಖದಿಂದಲೇ ಈ ವೇದಮಂತ್ರವು ಹೊರಟಿತು. ಶಕ್ತಿಯಿಂದ ಹುಟ್ಟಿದ ನಿನ್ನ ಮೊಮ್ಮಗನು ನನಗೆ ಸಮಾನನಾಗುವನು. ಆದುದರಿಂದ ಶಾಂತಿಹೊಂದು. ಎಲೈ ಬ್ರಹ್ಮನ ಮಕ್ಕಳಲ್ಲಿ ಅತ್ಯಂತ ಶ್ರೇಷ್ಠನಾದ ವಸಿಷ್ಠಮಹರ್ಷಿಯೇ ದುಃಖವನ್ನು ಬಿಟ್ಟು ಏಳು, ಎಂದು ಹೇಳಿದನು. ಮತ್ತು

೨೨. ಈ ಗರ್ಭದಲ್ಲಿರುವ ಮಗುವು ರುದ್ರನಿಗೆ ಭಕ್ತನು. ರುದ್ರನ ಪೂಜೆಯಲ್ಲಿ ಆಸಕ್ತಿಯುಳ್ಳವನು. ರುದ್ರದೇವನ ಮಹಿಮೆಯಿಂದಲೇ ನಿನ್ನ ಕುಲವನ್ನು ಉದ್ಧರಿಸುವನು.

ಏವ ಮುಕ್ತ್ವಾ ಘೃಣೀ ವಿಪ್ರಂ ಭಗವಾನ್ಪುರುಷೋತ್ತಮಃ ।
ವಸಿಷ್ಠಂ ಮುನಿಶಾರ್ದೂಲಂ ತತ್ರೈವಾಂತರಧೀಯತ ॥೨೩॥

ತತಃ ಪ್ರಣಮ್ಯ ಶಿರಸಾ ವಸಿಷ್ಠೋ ವಾರಿಜೇಕ್ಷಣಂ ।
ಅದೃಶ್ಯಂತ್ಯಾ ಮಹಾತೇಜಾಃ ಪಸ್ಪರ್ಶೋದರ ಮಾದರಾತ್ ॥೨೪॥

ಹಾ ಪುತ್ರ ಪುತ್ರ ಪುತ್ರೇತಿ ಪಪಾತ ಚ ಸು ದುಃಖಿತಃ ।
ಲಲಾಪಾರುಂಧತೀ ಪ್ರೇಕ್ಷ್ಯ ತದಾಽಸೌ ರುದತೀಂ ದ್ವಿಜಾಃ ॥೨೫॥

ಸ್ವಪುತ್ರಂ ಚ ಸ್ಮರಸ್ದುಃಖಾ ತ್ಪುನರೇ ಹ್ಯೇತಿ ಪುತ್ರಕ ।
ತವ ಪುತ್ರ ಮಿಮಂ ದೃಷ್ಟ್ವಾ ಭೋ ಶಕ್ತೇ ಕುಲಧಾರಣಂ ॥೨೬॥

ತವಾಂತಿಕಂ ಗಮಿಷ್ಯಾಮಿ ತವ ಮಾತ್ರಾ ನ ಸಂಶಯಃ ।

॥ ಸೂತ ಉವಾಚ ॥

ಏವ ಮುಕ್ತ್ವಾ ರುದನ್ವಿಪ್ರ ಆಲಿಂಗ್ಯಾರುಂಧತೀಂ ತದಾ ॥೨೭॥

---

೨೩. ಹೀಗೆ ವಸಿಷ್ಠನಿಗೆ ಹೇಳಿ ಕರುಣಾಶಾಲಿಯಾದ, ಪುರುಷ ಶ್ರೇಷ್ಠನಾದ ನಾರಾಯಣ ಪರಮಾತ್ಮನು ಅಲ್ಲಿಯೇ ಅಂತರ್ಧಾನ ವಾದನು.

೨೪–೨೬. ಅನಂತರದಲ್ಲಿ ವಸಿಷ್ಠನು ಕಮಲದಂತೆ ಕಣ್ಣುಳ್ಳ ವಿಷ್ಣು ವನ್ನು ಶಿರಸ್ಸಿನಿಂದ ನಮಸ್ಕರಿಸಿ, ಕಣ್ಣಿಗೆ ಕಾಣದೇ ಒಳಗೆ ಇರುವ ಅದೃಶ್ಯಂತಿಯ ಹೊಟ್ಟೆಯನ್ನು ಬಹಳ ಪ್ರೀತಿಯಿಂದ ಮುಟ್ಟಿದನು. ಆದರೆ ಅವನು ಪುನಃ ಪುತ್ರಶೋಕದಿಂದ ಅಯ್ಯೋ ಮಗನೆ! ಎಂದು ಬಾರಿ ಬಾರಿಗೂ ಅಳುತ್ತಾ ಭೂಮಿಯಮೇಲೆ ಬಿದ್ದನು. ಎಲೈ ಬ್ರಾಹ್ಮಣರೇ, ಅರುಂಧತಿಯು ಇವನನ್ನು ನೋಡಿ ಬಹಳವಾಗಿ ಅತ್ತಳು. ಅವಳು ತನ್ನ ಮಗನನ್ನು ಜ್ಞಾಪಿಸಿಕೊಂಡು ಅಯ್ಯೋ ಮಗನೇ! ಎಲ್ಲಿ ಹೋದೆ? ಪುನಃ ಬಾ! ಎಂದು ಮುಂತಾಗಿ ಹೇಳುತ್ತಾ ಅತ್ತಳು. ಎಲೈ ಶಕ್ತಿಯೇ, ಕುಲೋದ್ಧಾರಕನಾದ ನಿನ್ನ ಮಗನನ್ನು ನೋಡುವುದಿಲ್ಲವೇ? ಎಂದು ಮುಂತಾಗಿ ಹೇಳುತ್ತಾ ಅತ್ತಳು.

೨೭–೨೯. ಎಲೈ ಬ್ರಾಹ್ಮಣರೇ, ವಸಿಷ್ಠಮಹರ್ಷಿಯು ಮೃತನಾದ ಮಗನನ್ನು ಜ್ಞಾಪಿಸಿಕೊಳ್ಳುತ್ತಾ, ನಿನ್ನ ತಾಯಿಯ ಜೊತೆಯಲ್ಲಿ ನಿನ್ನ

ಪಪಾತ ತಾಡಯಂ ತೀವ ಸ್ವಸ್ಯ ಕುಕ್ಷೀ ಕರೇಣ ವೈ ।
ಅದೃಶ್ಯಂತೀ ಜಘಾನಾಥ ಶಕ್ತಿಜಸ್ಯಾಲಯಂ ಶುಭಾ ॥೨೮॥
ಸ್ನೋಪರಂ ದುಃಖಿತಾ ಭೂಮೌ ಲಲಾಪ ಚ ಪಪಾತ ಚ ।
ಅರುಂಧತೀ ತದಾ ಭೀತಾ ವಸಿಷ್ಠಶ್ಚ ಮಹಾಮತಿಃ ॥೨೯॥
ಸಮುತ್ಥಾಪ್ಯ ಸ್ನುಷಾಂ ಬಾಲಾ ಮೂಚತುರ್ಭಯವಿಹ್ವಲೌ ॥೩೦॥
ವಿಚಾರ ಮುಗ್ಧೇ ತವ ಗರ್ಭ ಮಂಡಲಂ ।
ಕರಾಂಬುಜಾಭ್ಯಾಂ ವಿನಿಹತ್ಯ ದುರ್ಲಭಂ ॥
ಕುಲಂ ವಸಿಷ್ಠಸ್ಯ ಸಮಸ್ತ ಮಸ್ಯ ಹೋ ।
ನಿಹಂತು ಮಾರ್ಯೇ ಕಥ ಮುದ್ಯತಾ ವದ ॥೩೧॥

---

ಹತ್ತಿರಕ್ಕೆ ಬರುವೆನು. ಎಂದು ಹೇಳಿಕೊಳ್ಳುತ್ತಾ ಅರುಂಧತಿಯನ್ನು ಆಲಂಗಿಸಿ ಪುನಃ ಪುನಃ ಅಳತೊಡಗಿದನು. ಅರುಂಧತಿಯೂ ಕೂಡ ತನ್ನ ನಾಭಿಪ್ರದೇಶವನ್ನು ಕೈಗಳಿಂದ ಹೊಡೆದುಕೊಂಡಳು. ಆಗ ಸೊಸೆಯೂ ಕೂಡ ಶಕ್ತಿಯನ್ನು ನೆನೆದುಕೊಂಡು, ಬಹು ದುಃಖಪಟ್ಟು ತನ್ನ ಹೊಟ್ಟೆಯನ್ನು ಬಡಿದುಕೊಂಡಳು. ಭೂಮಿಯಲ್ಲಿ ಬಿದ್ದು ಅಳತೊಡಗಿದಳು. ಆಗ ಅರುಂಧತಿಯೂ, ವಸಿಷ್ಠನೂ, ಇಬ್ಬರೂ, ಬಹಳ ಸಂಕಟ ಮತ್ತು ಭಯಗಳಿಗೊಳಗಾಗಿದ್ದರು.

೩೦. ಭಯಗ್ರಸ್ತರಾದ ಅತ್ತೆ ಮಾವಂದಿರಿಬ್ಬರೂ ಸೊಸೆಯನ್ನು ಎಬ್ಬಿಸಿ ಸಮಾಧಾನೋಕ್ತಿಗಳನ್ನು ಹೇಳಿದರು.

೩೧. ವಿಚಾರ ಶಕ್ತಿಯುಳ್ಳ ಎಲೌ ಸೊಸೆಯೇ, ನಿನ್ನ ಕಮಲದಂತಿರುವ ಕೈಗಳಿಂದ ದುರ್ಲಭವಾದ ಗರ್ಭವನ್ನು ಹೊಡೆದುಕೊಂಡು, ವಸಿಷ್ಠಮಹರ್ಷಿಯ ಕುಲವನ್ನೇ ಹಾಳುಮಾಡುವುದು ಯುಕ್ತವೇ? ಆರ್ಯಳೇ, ನೀನೇ ಹೇಳು.

ತವಾತ್ಮಜಂ ಶಕ್ತಿಸುತಂ ಚ ದೃಷ್ಟ್ವಾ ।
ಚಾಸ್ವಾದ್ಯ ವಕ್ತ್ರಾಮೃತ ಪೂರ್ವ ಸೂನೋಃ ॥
ತ್ರಾತುಂ ಯ ತೋ ದೇಹ ಮಿಮಂ ಮುನೀಂದ್ರಃ ।
ಸುನಿಶ್ಚಿತಃ ಪಾಹಿ ತತಃ ಶರೀರಂ ॥೩೨॥

॥ ಸೂತ ಉವಾಚ ॥

ಏವಂ ಸ್ನುಷಾ ಮುಪಾಲಭ್ಯ ಮುನಿಂ ಚಾರುಂಧತೀ ಸ್ಥಿತಾ ।
ಅರುಂಧತೀ ವಸಿಷ್ಠಸ್ಯ ಪ್ರಾಹ ಚಾರ್ತೇತಿ ವಿಹ್ವಲಾ ॥೩೩॥
ತ್ವಯ್ಯೇವ ಜೀವಿತಂ ಚಾಸ್ಯ ಮುನೇರ್ಭ್ರಾತ್ರ್ಯಸ್ಸ ಪ್ರತೇ ಮಮ ।
ಜೀವಿತಂ ರಕ್ಷ ದೇಹಸ್ಯ ಧಾತ್ರೀ ಚ ಕುರು ಯುದ್ಧಿತಂ ॥೩೪॥

॥ ಅದೃಶ್ಯಂತೀ ಉವಾಚ ॥

ಮಯಾ ಯದಿ ಮುನಿಶ್ರೇಷ್ಠೋ ತ್ರಾತುಂ ಸ್ವೈ ನಿಶ್ಚಿತಂ ಸ್ವಕಂ ।
ಮಮಾ ಶುಭಂ ಶುಭಂ ದೇಹಂ ಕಥಂಚಿತ್ಪಾಲಯಾ ಮ್ಯಹಂ ॥೩೫॥

---

೩೨. ಶಕ್ತಿಯಮಗನೂ, ನಿನ್ನಹೊಟ್ಟೆಯಲ್ಲಿ ಹುಟ್ಟಿದವನೂ ಆದ ಶ್ರೇಷ್ಠವಾದ ಶಿಶುವಿನ ಮುಖದರ್ಶನದ ಆನಂದವನ್ನೂ, ಅನುಭವಿಸಲಿಚ್ಛಿಸಿ ವಸಿಷ್ಠಮಹರ್ಷಿಗಳೂ ಕೂಡ ತಮ್ಮ ದೇಹವನ್ನು ಉಳಿಸಿ ಕೊಂಡಿದ್ದಾರೆ. ನೀನೂ ನಿನ್ನ ಶರೀರವನ್ನು ಉಳಿಸಿ ಕೊಳ್ಳುವುದು ಯುಕ್ತವು.

೩೩–೩೪. ಸೂತನು ಹೇಳಿದನು:– ಹೀಗೆ ಅರುಂಧತಿಯು ಸೊಸೆಯನ್ನೂ, ತನ್ನ ಪತಿಯಾದ ವಸಿಷ್ಠನನ್ನೂ ಎಚ್ಚರಿಸಿ ಸೊಸೆಯನ್ನು ಕುರಿತು ಕಳವಳದಿಂದಲೂ ಭಯದಿಂದಲೂ, ಹೀಗೆ ಹೇಳಿದನು. ಈ ಗರ್ಭಕ್ಕೂ, ನನಗೂ ನೀನೇ ರಕ್ಷಕಳು. ಆದುದರಿಂದ, ಎಲ್ಲಕ್ಕೂ ಹಿತವಾವುದೆಂದು ತಿಳಿದು ನೀನು ಈಗ ಗರ್ಭಕ್ಕೆ ಪೋಷಕಳಾಗಿರುವುದರಿಂದ ದೇಹಪರಿತ್ಯಾಗವನ್ನು ಮಾಡಬಾರದು.

೩೫. ವಸಿಷ್ಠನ ಸೊಸೆಯಾದ ಅದೃಶ್ಯಂತಿಯು ಹೇಳಿದಳು. ನನಗೋಸ್ಕರ ಋಷಿಶ್ರೇಷ್ಠರಾದ ವಸಿಷ್ಠರು ತಮ್ಮ ದೇಹವನ್ನು ಕಾಪಾಡುವುದಾದರೆ, ಪತಿನಾಶದಿಂದ ಅಮಂಗಳಕರವೂ, ಉತ್ತಮ ಗರ್ಭದಿಂದ ಮಂಗಳಕರವೂ ಆದ ಈ ದೇಹವನ್ನು ನಾನೂ ಹೇಗೋಹಾಗೆಉಳಿಸಿಕೊಳ್ಳುತ್ತೇನೆ.

ಪ್ರಿಯಂ ದುಃಖಸುಹಂ ಪ್ರಾಪ್ತಾ ಹ್ಯಸತೀ ನಾತ್ರ ಸಂಶಯಃ ।
ಮುನೇ ದುಃಖಾದಹಂ ದಗ್ಧಾ ಯತಃ ಪುತ್ರೀ ಮುನೇ ತವ ॥೩೬॥

ಅಹೋಽದ್ಭುತಂ ಮಯಾ ದೃಷ್ಟಂ ದುಃಖಪಾತ್ರೀ ಹ್ಯಹಂ ವಿಭೋ ।
ದುಃಖತ್ರಾತಾ ಭವ ಬ್ರಹ್ಮನ್ ಬ್ರಹ್ಮಸೂನೋ ಜಗದ್ಗುರೋ ॥೩೭॥

ತಥಾಽಪಿ ಭರ್ತೃರಹಿತಾ ದೀನಾ ನಾರೀ ಭವೇದಿಹ ।
ಪಾಹಿ ಮಾಂ ತತ ಆರ್ಯೇಂದ್ರ ಪರಿಭೂತಾ ಭವಿಷ್ಯತಿ ॥೩೮॥

ಪಿತಾ ಮಾತಾ ಚ ಪುತ್ರಾಶ್ಚ ಪೌತ್ರಾಃ ಶ್ವಶುರ ಏವಚ ।
ಏತೇ ನ ಬಾಂಧವಾಃ ಸ್ತ್ರೀಣಾಂ ಭರ್ತಾ ಬಂಧುಃ ಪರಾ ಗತಿಃ ॥೩೯॥

ಆತ್ಮನೋ ಯದ್ಧಿ ಕಥಿತ ಮಪ್ಯರ್ಧ ಮಿತಿ ಪಂಡಿತೈಃ ।
ತದಪ್ಯತ್ರ ಮೃಷಾ ಹ್ಯಾಸೀ ದ್ಗತಃ ಶಕ್ತಿರಹಂ ಸ್ಥಿತಾ ॥೪೦॥

---

೩೬ ಓ ಮುನಿಶ್ರೇಷ್ಠರೇ, ಪತಿಯ ಮರಣದಿಂದ ನಾನುಅಮಂಗಳ ಕರಳು. ಎಂಬುದರಲ್ಲಿ ಸಂದೇಹವಿಲ್ಲ. ನಿಮ್ಮಸೊಸೆಯಾದ ನಾನು ದುಖಃ ಕರವಾದರೂ ಪ್ರಿಯವಾದಸ್ಥಿತಿಯಲ್ಲಿ ಇದೇನೆಂಬುದು ತಮಗೆ ಗೊತ್ತೇಇದೆ.

೩೭. ಓ ಜಗದ್ಗುರುವಾದ ಬ್ರಹ್ಮಪುತ್ರರಾದ, ಮತ್ತು ಬ್ರಾಹ್ಮಣ ಶ್ರೇಷ್ಠರಾದ ಮಹರ್ಷಿಗಳೇ, ನನ್ನಕಷ್ಟವು ವರ್ಣಿಸಲಶಕ್ಯವು. ಆಶ್ಚರ್ಯ ವನ್ನು ಕಂಡೆನು! ತಾವು ದಯವಿಟ್ಟು ನನ್ನ ದುಃಖ ನಿವಾರಣೆ ಮಾಡಬೇಕು.

೩೮–೩೯. ಯಾರೇ ರಕ್ಷಕರಿದ್ದರೂ, ಪತಿಯಿಲ್ಲದಿದ್ದರೆ ಸ್ತ್ರೀಯು ದೀನಳಾಗುವಳು. ಓ ಪೂಜ್ಯರೇ, ಹಾಳಾಗಿರುವ ನನ್ನನ್ನು ತಾವು ರಕ್ಷಿಸಬೇಕು. ಸ್ತ್ರೀಯರಿಗೆ ತಂದೆ, ತಾಯಿ, ಮಕ್ಕಳು, ಮೊಮ್ಮಕ್ಕಳೂ, ಮತ್ತು ಮಾವನೂ, ಒಬ್ಬರೂ ನಿಜವಾದ ಬಂಧುಗಳಲ್ಲ, ಪತಿಯೊಬ್ಬನೇ ನಿಜವಾದ ಬಂಧುವೂ, ರಕ್ಷಕನೂ, ಆಗಿರುತ್ತಾನೆ.

೪೦. ವಿದ್ವಾಂಸರು ಪತ್ನಿಯು ಪತಿಯ ಅರ್ಧಭಾಗವೇ ಆಗಿರುತ್ತಾಳೆಂದು ಹೇಳುತ್ತಾರೆ. ಆದರೆ ಈಗ ಈ ಮಾತು ಸುಳ್ಳಾಯಿತು. ಏಕೆಂದರೆ ನನ್ನ ಪತಿಯಾದ ಶಕ್ತಿಯು ಹೊರಟು ಹೋದರು. ಆದರೂ ನಾನು ಬದುಕಿದ್ದೇನೆ!

ಅಹೋ ಮಮಾತ್ರ ಕಾಠಿಣ್ಯಂ ಮನಸೋ ಮುನಿಪುಂಗವ।
ಪತಿಂ ಪ್ರಾಣಸಮಂ ತ್ಯಕ್ತ್ವಾ ಸ್ಥಿತಾ ಯತ್ರ ಕ್ಷಣಂ ಯತಃ ॥೪೧॥
ವಸಿಷ್ಠಾಶ್ವತ್ಥ ಮಾಶ್ರಿತ್ಯ ಹ್ಯ ಮೃತಾ ತು ಯಥಾ ಲತಾ ।
ನಿರ್ಮೂಲಾಃ ಪ್ಯಮೃತಾ ಭರ್ತ್ರಾ ತ್ಯಕ್ತಾ ದೀನಾ ಸ್ಥಿತಾಃ ಸ್ಪೃಹಂ ॥
ಸ್ನುಷಾವಾಕ್ಯಂ ನಿಶಮ್ಯೈವ ವಸಿಷ್ಠೋ ಭಾರ್ಯಯಾ ಸಹ ।
ತದಾ ಚಕ್ರೇ ಮತಿಂ ಧೀಮಾನ್ ಯಾತುಂ ಸ್ವಾಶ್ರಮ ಮಾಶ್ರಮೀ॥
ಕೃಚ್ಛ್ರಾತ್ಸ ಭಾರ್ಯೋ ಭಗವಾನ್ ವಸಿಷ್ಠಃ ಸ್ವಾಶ್ರಮಂ ಕ್ಷಣಾತ್ ।
ಅದೃಶ್ಯಂತ್ಯಾಚ ಪುಣ್ಯಾತ್ಮಾ ಸಂವಿವೇಶ ಸ ಚಿಂತಯನ್ ॥೪೪॥
ಸಾ ಗರ್ಭಂ ಪಾಲಯಾ ಮಾಸ ಕಥಂ ಚಿನ್ಮುನಿ ಪುಂಗವಾಃ।
ಕುಲ ಸಂಧಾರಣಾರ್ಥಾಯ ಶಕ್ತಿ ಪತ್ನೀ ಪತಿವ್ರತಾ ॥೪೫॥

---

೪೧–೪೨. ಓ ಮುನಿಶ್ರೇಷ್ಠನೇ, ನನ್ನ ಮನಸ್ಸು ಬಹಳ ಕಠಿಣ ವಾದುದು. ಏಕೆಂದರೆ ಪ್ರಾಣಕ್ಕೆ ಸಮಾನನಾದ ಪತಿಯನ್ನು ಕಳೆದು-ಕೊಂಡು ಕ್ಷಣಕಾಲ ಬದುಕಿದ್ದೇನೆ. ಎಲೈ ಋಷಿಶ್ರೇಷ್ಠರೇ, ಅಶ್ವತ್ಥ ಮರದ ಮೇಲಿರುವ ಬಳ್ಳಿಯು ಬುಡವಿಲ್ಲದಿದ್ದರೂ ಹೇಗೆ ನಿಲ್ಲುವುದೋ, ಹಾಗೆ ರಕ್ಷಕನಾದ ಪತಿಯು ಮೃತಿಹೊಂದಿದರೂ ನಾನು ಮೃತಳಾಗದೇ ಇದ್ದೇನೆ.

೪೩–೪೫. ಹೀಗೆ ಸೊಸೆಯ ಮಾತನ್ನು ಕೇಳಿ, ವಸಿಷ್ಠಮಹರ್ಷಿಯು ತನ್ನ ಹೆಂಡಿತಿಯೊಡನೆ ಆಶ್ರಮವನ್ನು ಕುರಿತು ತೆರಳಲು ಸಿದ್ಧನಾದನು. ಪೂಜ್ಯನಾದ ವಸಿಷ್ಠನು ಒಂದು ಕ್ಷಣಕಾಲದಲ್ಲಿಯೇ, ತನ್ನ ಹೆಂಡಿತಿ ಯೊಡನೆ ಮತ್ತು ಸೊಸೆಯಾದ ಅದೃಶ್ಯಂತಿಯೊಡನೆ ದುಃಖಪೂರ್ಣನಾಗಿಯೇ ಬಂದು ಸೇರಿದನು. ಎಲೈ ಮುನಿಶ್ರೇಷ್ಠರೇ, ಶಕ್ತಿಯ ಪತ್ನಿಯಾದ ಪತಿವ್ರತೆಯಾದ ಅದೃಶ್ಯಂತಿಯು ವಂಶೋದ್ಧಾರಕ್ಕಾಗಿ ಗರ್ಭವನ್ನು ಕಷ್ಟದಿಂದ ಕಾಪಾಡುತ್ತಿದ್ದಳು.

ತತಃ ಸಾಽಸೂತ ತನಯಂ ದಶಮೇ ಮಾಸಿ ಸುಪ್ರಭಂ ।
ಶಕ್ತಿ ಪತ್ನೀ ಯಥಾ ಶಕ್ತಿಂ ಶಕ್ತಿಮಂತ ಮರುಂಧತೀ ॥೪೬॥
ಅಸೂತ ಸಾ ದಿತಿ ರ್ವಿಷ್ಣುಂ ಯಥಾ ಸ್ವಾಹಾ ಗುಹಂ ಸುತಂ ।
ಅಗ್ನಿಂ ಯಥಾಽರಣಿಃ ಪತ್ನೀ ಸಾಕ್ಷಾತ್ ಶಕ್ತೇಃ ಪರಾಶರಂ ॥೪೭॥
ಯದಾ ತದಾ ಶಕ್ತಿಸೂನು ರವತೀರ್ಣೋ ಮಹೀತಲೇ ।
ಶಕ್ತಿ ಸ್ತ್ಯಕ್ತ್ವಾ ತದಾ ದುಃಖಂ ಪಿತೄಣಾಂ ಸಮತಾಂ ಯಯೌ ॥
ಭ್ರಾತೃಭಿಃ ಸಹ ಪುಣ್ಯಾತ್ಮಾ ಆದಿತ್ಯೈ ರಿವ ಭಾಸ್ಕರಃ ।
ರರಾಜ ಪಿತೃ ಲೋಕಸ್ಥೋ ವಾಸಿಷ್ಠೋ ಮುನಿಪುಂಗವಾಃ ॥೪೯॥
ಜಗು ಸ್ತದಾ ಚ ಪಿತರೋ ನನೃತು ಶ್ಚ ಪಿತಾಮಹಾಃ ।
ಪ್ರಪಿತಾಮಹಾಶ್ಚ ವಿಪ್ರೇಂದ್ರಾ ಹ್ಯವತೀರ್ಣೇ ಪರಾಶರೇ ॥೫೦॥

---

೪೬. ಅನಂತರ ಶಕ್ತಿಯ ಹೆಂಡತಿಯು ಹತ್ತನೆಯ ತಿಂಗಳಲ್ಲಿ ಬಹಳ ಕಾಂತಿಯುಕ್ತನಾದ, ಮತ್ತು ಶೂರನಾದ ಮಗನನ್ನು, ಅರುಂಧತಿಯು ಹೇಗೆ ಶಕ್ತಿಯನ್ನು ಪಡೆದಳೋ, ಹಾಗೆಯೇ ಪ್ರಸವಿಸಿದಳು.

೪೭–೪೮. ದಿತಿಯು ವಿಷ್ಣುವನ್ನೂ, ಷಣ್ಮುಖನನ್ನು ಸ್ವಾಹಾದೇವಿಯೂ, ಅರಣಿಯು ಅಗ್ನಿಯನ್ನೂ, ಹೇಗೋ ಹಾಗೆ, ಶಕ್ತಿಯ ಪತ್ನಿಯಾದ ಅದೃಶ್ಯಂತಿಯು ಪರಾಶರನನ್ನು ಪ್ರಸವಿಸಿದಳು. ಭೂಮಿಯ ಮೇಲೆ ಶಕ್ತಿಯ ಮಗನು ಜನ್ಮತಾಳಲು ಶಕ್ತಿಯು ದುಃಖಮುಕ್ತನಾಗಿ ಪಿತೃದೇವತೆಗಳ ಸ್ಥಾನವನ್ನಲಂಕರಿಸಿದನು.

೪೯. ಎಲೈ ಮುನಿಶ್ರೇಷ್ಠರೇ, ವಸಿಷ್ಠನ ಪುತ್ರನಾದ, ಪುಣ್ಯಶಾಲಿಯಾದ ಶಕ್ತಿಯು ತನ್ನ ತಮ್ಮಂದಿರೊಡನೆ, ಸೂರ್ಯನು ಇತರ ಆದಿತ್ಯರೊಂದಿಗೆ ಹೇಗೋ ಹಾಗೆ, ಪಿತೃಲೋಕದಲ್ಲಿ ಪ್ರಕಾಶಿಸಿದನು.

೫೦–೫೧. ಎಲೈ ವಿಪ್ರಶ್ರೇಷ್ಠರೇ, ಪರಾಶರನು ಭೂಮಿಯಲ್ಲಿ ಅವತಾರ ಮಾಡಲು, ಪಿತೃದೇವತೆಗಳು ಹರ್ಷದಿಂದ ಗಾನಮಾಡಿದರು. ಇವನ ಸ್ವರ್ಗಸ್ಥರಾದ ತಾತಂದಿರು ಅಲ್ಲಿ ಕುಣಿದಾಡಿದರು. ಬ್ರಹ್ಮಜ್ಞಾನಿ

ಯೇ ಬ್ರಹ್ಮವಾದಿನೋ ಭೂಮೌ ನನೃತು ರ್ದಿವಿ ದೇವತಾಃ ।
ಪುಷ್ಕರಾದ್ಯಾಶ್ಚ ಸಸೃಜುಃ ಪುಷ್ಪವರ್ಷಂ ಚ ಖೇಚರಾಃ ॥೫೧॥
ಪುರೇಷು ರಾಕ್ಷಸಾನಾಂ ಚ ಪ್ರಣಾದಂ ವಿಷಮಂ ದ್ವಿಜಾಃ ।
ಆಶ್ರಮಸ್ಥಾಶ್ಚ ಮುನಯಃ ಸಮೂಹು ರ್ಹರ್ಷ ಸಂತತಿಂ ॥೫೨॥
ಅವತೀರ್ಣೋ ಯಥಾ ಹ್ಯಂಡಾ ದ್ಭಾನುಃ ಸೋಽಪಿ ಪರಾಶರಃ ।
ಅದೃಶ್ಯಂತ್ಯಾ ಶ್ಚತುರ್ವಕ್ತ್ರೋ ಮೇಘಜಾಲಾ ದ್ದಿವಾಕರಃ ॥೫೩॥
ಸುಖಂ ಚ ದುಃಖ ಮುಭಪ ದದೃಶ್ಯಂತ್ಯಾ ಸ್ತಥಾ ದ್ವಿಜಾಃ ।
ದೃಷ್ಟ್ವಾ ಪುತ್ರಂ ಪತಿಂ ಸ್ಮೃತ್ವಾ ಅರುಂಧತ್ಯಾ ಮುನೇ ಸ್ತಥಾ ॥೫೪॥
ದೃಷ್ಟ್ವಾ ಚ ತನಯಂ ಬಾಲಾ ಪರಾಶರ ಮತಿ ದ್ಯುತಿಂ ।
ಲಲಾಪ ವಿಹ್ವಲಾ ಬಾಲಾ ಸನ್ನ ಕಂಠೀ ಪಪಾತ ಚ ॥೫೫॥

---

ಗಳಾದ ಋಷಿಗಳೂ, ಭೂಮಿಯಲ್ಲಿ ಹರ್ಷದಿಂದ ಕುಣಿದಾಡಿದರು. ಸ್ವರ್ಗದಲ್ಲಿ ದೇವತೆಗಳು ನಲಿದಾಡಿದರು. ಪುಷ್ಕರವೇ ಮೊದಲಾದ ಮೇಘಗಳು ಮಳೆಯನ್ನೂ, ದೇವತೆಗಳು ಹೂಮಳೆಯನ್ನೂ ಕರೆದರು. ಹದ್ದೇ ಮೊದಲಾದ ಪಕ್ಷಿಗಳು ರಾಕ್ಷಸರ ಪಟ್ಟಣಗಳಲ್ಲಿ ವಿಕಾರವಾಗಿ ಅರಿಚಿದವು. ಆಶ್ರಮವಾಸಿಗಳಾದ ಋಷಿಗಳು ಸಂತೋಷದಿಂದ ನಲಿದಾಡಿದರು.

೫೩. ಬ್ರಹ್ಮಾಂಡದಿಂದಲೂ, ಮೋಡಗಳ ಮಧ್ಯಭಾಗದಿಂದಲೂ, ಸೂರ್ಯನು ತುಂಬ ಪ್ರಕಾಶಮಾನನಾಗಿ ಹೊರಗೆ ಬರುವಂತೆ, ಅದೃಶ್ಯಂತಿಯ ಉದರದಲ್ಲಿ ಸಾಕ್ಷಾದ್ಬ್ರಹ್ಮನೇ ಜನಿಸಿದನು.

೫೪–೫೬. ಎಲೈ ಬ್ರಾಹ್ಮಣರೇ, ಆಗ ಅದೃಶ್ಯಂತಿಗೆ ಪುತ್ರನನ್ನು ನೋಡಿ ಸುಖವೂ, ಪತಿಯನ್ನು ಜ್ಞಾಪಿಸಿಕೊಂಡು ದುಃಖವೂ ಏಕಕಾಲದಲ್ಲಿ ಆದುವು. ಅರುಂಧತೀ ವಸಿಷ್ಠರಿಗೂ, ಹಾಗೆಯೇ ಆಯಿತು. ಅದೃಶ್ಯಂತಿಯು ಬಹಳ ಕಾಂತಿಯುಳ್ಳ ಪರಾಶರನನ್ನು ನೋಡಿ ಸಂತೋಷಿಸಿದಳು. ಆ ಸಮಯದಲ್ಲಿ ಪತಿಯು ಇಲ್ಲದೇ ಹೋದನಲ್ಲಾ ಎಂದು ಬಹಳ ಸಂಕಟಪಡುತ್ತಾ ಭೂಮಿಗೆ ಬಿದ್ದುಬಿಟ್ಟಳು. ಅವಳು ಬಹಳ ಬುದ್ಧಿಶಾಲಿಯಾದ, ದೇವದಾನವ ಮುಂತಾದವರಿಂದಲೂ, ಪೂಜಿಸಲ್ಪಡು

ಸಾ ಪರಾಶರ ಮಹೋ ಮಹಾ ಮತಿಂ ।
ದೇವ ದಾನವ ಗಣೈಶ್ಚ ಪೂಜಿತಂ॥
ಜಾತಮಾತ್ರ ಮನಘಂ ಶುಚಿ ಸ್ಮಿತಾ ।
ಬುಧ್ಯ ಸಾಶ್ರುನಯನಾ ಲಲಾಪ ಚ ॥೫೬॥

ಹಾ ವಸಿಷ್ಠಸುತ ಕುತ್ರ ಚಿ ದ್ಗತಃ ।
ಪಶ್ಯ ಪುತ್ರ ಮನಘಂ ತವಾತ್ಮಜಂ ॥
ತ್ಯಜ್ಯ ದೀನವದನಾಂ ವನಾಂತರೇ ।
ಪುತ್ರ ದರ್ಶನಪರಾ ಮಿಮಾಂ ಪ್ರಭೋ ॥೫೭॥

ಶಕ್ತೇ ಸ್ವಂಚ ಸುಖಂ ಪಶ್ಯ ಭ್ರಾತೃಭಿಃ ಸಹ ಷಣ್ಮುಖಂ ।
ಯಥಾ ಮಹೇಶ್ವರೋಽಪಶ್ಯ ತ್ಸ ಗಣೋ ಹೃತಿತಾನನಃ ॥೫೮॥

ಅಥ ತಸ್ಯಾ ಸ್ತದಾಲಾಪಂ ವಸಿಷ್ಠೋ ಮುನಿಸತ್ತಮಃ ।
ಶ್ರುತ್ವಾ ಸ್ನುಷಾ ಮುವಾ ಚೇದಂ ಮಾರೋದೀ ರಿತಿ ದುಃಖಿತಃ ॥

---

ತ್ತಿರುವ ಮಗನನ್ನು ನೋಡಿ ಸಂತೋಷಪಟ್ಟಳು. ಆದರೆ ಹುಟ್ಟಿದಾಗಲೇ ಪವಿತ್ರವಾದ ಈ ಮೂರ್ತಿಯನ್ನು ನೋಡಲು ತನ್ನ ಪತಿಯು ಇಲ್ಲದೇ ಹೋದನಲ್ಲಾ ಎಂದು ಬಹಳ ಅತ್ತಳು.

೫೭–೫೯. ಅದೃಶ್ಯಂತಿಯು ಪತಿಯನ್ನು ಸ್ಮರಿಸಿ ಹೀಗೆಂದಳು. ಓ ಸ್ವಾಮಿಯೇ ಕುಂದಿದ ಮುಖವುಳ್ಳ ನನ್ನನ್ನು ಕಾಡಿನಲ್ಲಿ ಬಿಟ್ಟು ಎಲ್ಲಿ ಹೋಗಿದ್ದೀರಿ? ನಿಮ್ಮ ಪವಿತ್ರವಾದ ಈ ಮಗುವನ್ನು ನೋಡಿರಿ. ಮಹೇಶ್ವರನು ತನ್ನ ಪರಿವಾರದೊಂದಿಗೆ ಷಣ್ಮುಖನನ್ನು ಸಂತೋಷದಿಂದ ಹೇಗೆ ನೋಡಿದನೋ ಹಾಗೆ ನಿಮ್ಮ ತಮ್ಮಂದಿರೊಡನೆ ಈ ಮಗುವನ್ನು ನೋಡಿ. ಮುನಿಶ್ರೇಷ್ಠನಾದ ವಸಿಷ್ಠನು ಸೊಸೆಯು ಅಳುತ್ತಿರುವುದನ್ನು ನೋಡಿ ತಾನೂ ದುಃಖದಿಂದ "ಅಳಬೇಡ" ಎಂದು ಹೇಳಿ ಸಮಾಧಾನಪಡಿಸಿದನು.

ಆಜ್ಞಯಾ ತಸ್ಯ ಸಾ ಶೋಕಂ ವಸಿಷ್ಠಸ್ಯ ಕುಲಾಂಗನಾ ।
ತ್ಯಕ್ತ್ವಾ ಹ್ಯಪಾಲಯು ದ್ಬಾಲಂ ಬಾಲಾ ಬಾಲಮೃಗೇ ಕ್ಷಣಾ ॥೬೦॥
ದೃಷ್ಟ್ವಾ ತಾ ಮಬಲಾಂ ಪ್ರಾಹ ಮಂಗಳಾ ಭರಣೈರ್ವಿನಾ ।
ಆಸೀನಾ ಮಾಕುಲಾಂ ಸಾಧ್ವೀಂ ಬಾಷ್ಪ ಪರ್ಯಾ ಕುಲೇಕ್ಷಣಾಂ ॥

॥ ಶಾಕ್ತೇಯ ಉವಾಚ ॥

ಅಂಬ ಮಂಗಳ ವಿಭೂಷಣೈ ರ್ವಿನಾ ।
ದೇಹಮುಜ್ಜ್ವಿರನಘೇ ನ ಶೋಭತೇ ॥
ವಕ್ತುಮರ್ಹಸಿ ತವಾದ್ಯ ಕಾರಣಂ ।
ಚಂದ್ರಬಿಂಬ ರಹಿತೇವ ಶರ್ವರೀ ॥೬೨॥
ಮಾತ ರ್ಮಾತಃ ಕಥಂ ತ್ಯಕ್ತ್ವಾ ಮಂಗಳಾ ಭರಣಾನಿ ವೈ ।
ಆಸೀನಾ ಭರ್ತೃಹೀನೇವ ವಕ್ತು ಮರ್ಹಸಿ ಶೋಭನೇ ॥೬೩॥

---

೬೦. ಎಳೆಯ ಜಿಂಕೆಯಂತೆ ಕಣ್ಣುಳ್ಳ ಸತ್ಕುಲ ಪ್ರಸೂತಳಾದ ಅದೃಶ್ಯಂತಿಯು ವಸಿಷ್ಠನ ಅಪ್ಪಣೆಯಂತೆ ತನ್ನ ದುಃಖವನ್ನು ಕಮ್ಮಿಮಾಡಿ ಕೊಂಡು ಮಗುವನ್ನು ಸಂರಕ್ಷಿಸಿದಳು.

೬೧. ಅವಳ ಮಗನು ತನ್ನ ತಾಯಿಯು ಮಂಗಳಕರವಾದ ಒಡವೆ ಗಳನ್ನು ಬಿಟ್ಟು ದುಃಖದಿಂದ ಕಣ್ಣೀರು ಬಿಡುತ್ತಿರುವುದನ್ನು ನೋಡಿ ಹೀಗೆ ಹೇಳಿದನು.

೬೨. ಶಕ್ತಿಯ ಮಗನು ಹೇಳಿದನು: ಎಲೌ ತಾಯಿಯೇ, ನಿನ್ನ ಪವಿತ್ರವಾದ ದೇಹವು ಆಭರಣವಿಲ್ಲದೇ ಚಂದ್ರನಿಲ್ಲದಿರುವ ರಾತ್ರಿ ಯಂತೆ ಶೋಭಿಸುವುದಿಲ್ಲ. ಹೀಗೆ ಆಭರಣಗಳನ್ನು ತ್ಯಜಿಸಲು ಕಾರಣ ವನ್ನು ಹೇಳು.

೬೩. ಎಲೌ ಮಂಗಳಕರಳಾದ ತಾಯಿಯೇ, ಗಂಡನಿಲ್ಲದ ಹೆಂಗಸಿ ನಂತೆ ಒಡವೆಗಳನ್ನು ನೀನು ಏಕೆ ಧರಿಸಿಲ್ಲ ?

ಅದೃಶ್ಯಂತೀ ತದಾ ವಾಕ್ಯಂ ಶ್ರುತ್ವಾ ತಸ್ಯ ಸುತಸ್ಯ ಸಾ ।
ನ ಕಿಂಚಿದಬ್ರವೀ ತ್ಪುತ್ರಂ ಶುಭಂ ವಾ ಯದಿ ವೇತರತ್ ॥೬೪॥

ಅದೃಶ್ಯಂತೀಂ ಪುನಃ ಪ್ರಾಹ ಶಾಕ್ತೇಯೋ ಭಗವಾನ್ಮಮ
ಮಾತಃ ಕುತ್ರ ಮಹಾತೇಜಾಃ ಪಿತಾ ವದ ವದೇತಿ ಮಾಂ ॥೬೫॥

ಶ್ರುತ್ವಾ ರುರೋದ ಸಾ ವಾಕ್ಯಂ ಪುತ್ರಸ್ಯಾತೀವ ವಿಹ್ವಲಾ ।
ಭಕ್ಷಿತೋ ರಕ್ಷಸಾ ತಾತ ಸ್ತವೇತಿ ನಿಪ ಪಾತ ಚ ॥೬೬॥

ಶ್ರುತ್ವಾ ವಸಿಷ್ಠೋಽಪಿ ಪಪಾತ ಭೂಮೌ ।
ಪೌತ್ರಸ್ಯ ವಾಕ್ಯಂ ಸರುದ ಸ್ದಯಾಳುಃ ॥
ಅರುಂಧತೀ ಚಾಶ್ರಮ ವಾಸಿನ ಸ್ತದಾ ।
ಮುಸೇ ರ್ವಸಿಷ್ಠಸ್ಯ ಮುನೀಶ್ವರಾಶ್ಚ ॥೬೭॥

ಭಕ್ಷಿತೋ ರಕ್ಷಸಾ ಮಾತುಃ ಪಿತಾ ತವ ಮುಖಾದಿತಿ ।
ಶ್ರುತ್ವಾ ಪರಾಶರೋ ಧೀಮಾನ್ ಪ್ರಾಹ ಚಾಸ್ರಾ ವಿಲೇಕ್ಷಣಃ ॥

---

೬೪–೬೬. ಅದೃಶ್ಯಂತಿಯು ಮಗುವಿನ ಮಾತನ್ನು ಕೇಳಿ, ಒಳ್ಳೆಯ ಅಥವಾ ಅಮಂಗಳಕರವಾದ ಯಾವ ಮಾತನ್ನೂ ಆಡಲಿಲ್ಲ. ಶಕ್ತಿಯ ಮಗನು ಪುನಃ ಅದೃಶ್ಯಂತಿಯನ್ನು ಮಹಾತೇಜಸ್ವಿಯಾದ ನನ್ನ ತಂದೆ ಯೆಲ್ಲಿ? ಎಂದು ಪ್ರಶ್ನಿಸಿದನು. ಮಗುವಿನ ಈ ಮಾತನ್ನು ಕೇಳಿ ಅದೃಶ್ಯಂತಿಯು ಬಹಳವಾಗಿ ಅಳುತ್ತಾ, ರಾಕ್ಷಸರಿಂದ ನಿಮ್ಮ ತಂದೆಯು ತಿನ್ನಲ್ಪಟ್ಟನು. ಎಂದು ಹೇಳಿ ಸಂಕಟದಿಂದ ಭೂಮಿಯಮೇಲೆ ಬಿದ್ದು ಬಿಟ್ಟಳು.

೬೭. ಆಗ ಮಗುವಿನ ಈ ಪ್ರಶ್ನೆಯನ್ನು ಕೇಳಿ ಕರುಣಾಶಾಲಿಯಾದ ವಸಿಷ್ಠರೂ, ಅರುಂಧತಿಯೂ, ಆಶ್ರಮವಾಸಿಗಳಾದ ಇತರ ಋಷಿ ಶ್ರೇಷ್ಠರೂ, ಸಂಕಟದಿಂದ ಭೂಮಿಯಮೇಲೆ ಬಿದ್ದುಬಿಟ್ಟರು.

೬೮. ಬುದ್ಧಿಶಾಲಿಯಾದ ಪರಾಶರನು ತನ್ನ ತಂದೆಯು ರಾಕ್ಷಸ ನಿಂದ ಭಕ್ಷಿಸಲ್ಪಟ್ಟನೆಂದು ತಾಯಿಯಿಂದಲೇ ಕೇಳಿ ಕಣ್ಣೀರಿನಿಂದ ನೋಟವು ಮಂದವಾಗಿರಲು ಹೀಗೆ ಹೇಳಿದನು.

॥ ಪರಾಶರ ಉವಾಚ ॥

ಅಭ್ಯರ್ಚ್ಯ ದೇವದೇವೇಶಂ ತ್ರೈಲೋಕ್ಯಂ ಸ ಚರಾಚರಂ ।
ಕ್ಷಣೇನ ಮಾತಃ ಪಿತರಂ ದರ್ಶಯಾಮೀತಿ ಮೇ ಮತಿಃ ॥೬೯॥

ಸಾ ನಿಶಮ್ಯ ವಚನಂ ತದಾ ಶುಭಂ ।
ಸಸ್ಮಿತಾ ತನಯ ಮಾಹ ವಿಸ್ಮಿತಾ ॥
ತಥ್ಯಮೇ ತದಿತಿ ತಂ ನಿರೀಕ್ಷ್ಯ ಸಾ ।
ಪುತ್ರ ಪುತ್ರ ಭವಮರ್ಚಯೇತಿ ಚ ॥೭೦॥

ಜ್ಞಾತ್ವಾ ಶಕ್ತಿಸ್ತು ತಸ್ಯಾಸ್ಯ ಸಂಕಲ್ಪಂ ಮುನಿಪುಂಗವಃ ।
ವಸಿಷ್ಠೋ ಭಗವಾನ್ಪ್ರಾಹ ಪೌತ್ರಂ ಧೀಮಾ ನ್ಕೃಪಾನಿಧಿಃ ॥೭೧॥

ಸ್ಥಾನೇ ಪೌತ್ರಂ ಮುನಿಶ್ರೇಷ್ಠ ಸಂಕಲ್ಪ ಸ್ತವ ಸುವ್ರತ ।
ತಥಾಽಪಿ ಶೃಣು ಲೋಕಸ್ಯ ಕ್ಷಯಂ ಕರ್ತುಂ ನ ಚಾರ್ಹಸಿ ॥೭೨॥

ರಾಕ್ಷಸಾನಾ ಮಭಾವಾಯ ಕುರು ಸರ್ವೇಶ್ವರಾರ್ಚನಂ ।
ತ್ರೈಲೋಕ್ಯಂ ಶೃಣು ಶಾಕ್ತೇಯ ಅಪರಾಧ್ಯತಿ ಕಿಂತವ ॥೭೩॥

---

೬೯–೭೦. ಪರಾಶರನು ಹೇಳಿದನು:– ಎಲೌ ತಾಯಿಯೇ, ಎಲ್ಲಾ ದೇವತೆಗಳಿಗೂ ಅಧಿಪತಿಯಾದ ಮಹೇಶ್ವರನನ್ನು ಪೂಜಿಸಿ, ಸ್ಥಾವರಜಂಗ ಮಾತ್ಮಕವಾದ ಎಲ್ಲಾ ಲೋಕಗಳನ್ನೂ ಸುಟ್ಟು ಕ್ಷಣಮಾತ್ರದಲ್ಲಿ ನನ್ನ ತಂದೆಯನ್ನು ನಿನಗೆ ತೋರಿಸುವೆನು. ಅದೃಶ್ಯಂತಿಯು ಮಗನ ಈ ಶುಭವಾದ ಮಾತನ್ನು ಕೇಳಿ, ಆಶ್ಚರ್ಯಭರಿತಳಾಗಿ ಇದನ್ನು ನಿಜವೆಂದು ನಂಬಿ ಪರಮೇಶ್ವರನನ್ನು ಪೂಜಿಸಿ, ಹಾಗೆಯೇ ಮಾಡು, ಎಂದು ಹೇಳಿದಳು.

೭೧–೭೩. ಮುನಿ ಶ್ರೇಷ್ಠನಾದ ವಸಿಷ್ಠನು, ಶಕ್ತಿಯ ಮಗನಾದ ಪರಾಶರನ ಮನೋನಿಶ್ಚಯವನ್ನು ಕೇಳಿ ಕರುಣೆಯಿಂದ ಈ ಮಾತನ್ನು ಹೇಳಿದನು:– ಎಲೈ ದೃಢವ್ರತನಾದ ಪರಾಶರನೇ, ನಿನ್ನ ಸಂಕಲ್ಪವೇನೋ ಶ್ಲಾಘ್ಯವಾದುದೇ. ಆದರೆ ಮೂರು ಲೋಕದ ನಾಶವನ್ನು ಮಾಡುವುದು ನಿನಗೆ ಯುಕ್ತವಲ್ಲ. ನಿನಗೆ ಮೂರು ಲೋಕವೂ ತಪ್ಪುಮಾಡಿರುವುದೇನು ? ಆದರೆ ರಾಕ್ಷಸರ ನಾಶಕ್ಕಾಗಿ ಪರಮೇಶ್ವರನ ಪೂಜೆಯನ್ನೇ ಮಾಡು.

ತತ ಸ್ತಸ್ಯ ವಸಿಷ್ಠಸ್ಯ ನಿಯೋಗಾ ಚ್ಛಕ್ತಿ ನಂದನಃ ।
ರಾಕ್ಷಸಾನಾಮ ಭಾವಾಯ ಮತಿಂ ಚಕ್ರೇ ಮಹಾಮತಿಃ ॥೭೪॥

ಅದೃಶ್ಯಂತೀಂ ವಸಿಷ್ಠಂ ಚ ಪ್ರಣಮ್ಯಾ ರುಂಧತೀಂ ತತಃ ।
ಕೃತ್ವೈಕಲಿಂಗಂ ಕ್ಷಣಿಕಂ ಪಾಂಸುನಾ ಮುನಿಸನ್ನಿಧೌ ॥೭೫॥

ಸಂಪೂಜ್ಯ ಶಿವಸೂಕ್ತೇನ ತ್ರ್ಯಂಬಕೇನ ಶುಭೇನ ಚ ।
ಜಪ್ತ್ವಾತ್ವರಿತ ರುದ್ರಂಚ ಶಿವಸಂಕಲ್ಪಮೇ ವಚ ॥೭೬॥

ನೀಲರುದ್ರಂ ಚ ಶಾಕ್ತೇಯ ಸ್ತಥಾ ರುದ್ರಂ ಚ ಶೋಭನಂ ।
ವಾಮೀಯಂ ಪವಮಾನಂ ಚ ಪಂಚಬ್ರಹ್ಮ ತಥೈವಚ ॥೭೭॥

ಹೋತಾರಂ ಲಿಂಗಸೂಕ್ತಂ ಚ ಅಥರ್ವ ಶಿರ ಏವಚ ।
ಅಷ್ಟಾಂಗ ಮರ್ಘ್ಯಂ ರುದ್ರಾಯ ದತ್ವಾಽಭ್ಯರ್ಚ್ಯ ಯಥಾವಿಧಿ ॥೭೮॥

॥ ಪರಾಶರ ಉವಾಚ ॥

ಭಗವನ್ರಕ್ಷಸಾ ರುದ್ರ ಭಕ್ಷಿತೋ ರುಧಿರೇಣ ವೈ ।
ಪಿತಾ ಮಮ ಮಹಾತೇಜಾ ಭ್ರಾತೃಭಿಃ ಸಹ ಶಂಕರ ॥೭೯॥

---

೭೪. ವಸಿಷ್ಠನ ಅಪ್ಪಣೆಯ ಪ್ರಕಾರ ಶಕ್ತಿಯ ಮಗನಾದ ಪರಾಶರನು ರಾಕ್ಷಸರ ನಾಶಕ್ಕೆ ಮಾತ್ರ ಸಂಕಲ್ಪಮಾಡಿದನು.

೭೫–೭೭. ಪರಾಶರನು ವಸಿಷ್ಠನನ್ನೂ ಅರುಂಧತಿಯನ್ನೂ ನಮಸ್ಕರಿಸಿ, ಋಷಿ ಶ್ರೇಷ್ಠನಾದ ವಸಿಷ್ಠನ ಸಮೀಪದಲ್ಲಿ ಮಣ್ಣಿನಿಂದ ತಾತ್ಕಾಲಿಕವಾದ ಪಾರ್ಥಿವ ಲಿಂಗವನ್ನು ಸ್ಥಾಪಿಸಿದನು. ಮಹೇಶ್ವರ ಸಂಬಂಧಿಯಾದ ಪವಿತ್ರವಾದ ಶಿವಸೂಕ್ತದಿಂದ ರುದ್ರನನ್ನು ಆಹ್ವಾನಮಾಡಿ ಶಿವಪೂಜೆಯನ್ನು ಪ್ರಾರಂಭಿಸಿದನು. ಅವನು ನೀಲರುದ್ರ ಮುಂತಾದ ಶಿವ ಪ್ರಕಾಶಕವಾದ ಮಂತ್ರವನ್ನೂ ವಾಮೀಯ, ಪವಮಾನ. ಮುಂತಾದ ಪೂಜ್ಯವಾದ ರುದ್ರಸೂಕ್ತಗಳನ್ನೂ ಭಕ್ತಿಪುರಸ್ಸರವಾಗಿ ಜಪಿಸಿ ಪೂಜಿಸಿದನು.

೭೮–೮೦. ಪರಾಶರನು ಅಥರ್ವವೇದದ ಶಿರಸ್ಸಾದ ಲಿಂಗ ಸೂಕ್ತವನ್ನು ಹೇಳಿ ಸ್ವಾಮಿಯಾದ ರುದ್ರನನ್ನು ಜಪಿಸಿ ಎಂಟು ವಿಧವಾದ ಅರ್ಘ್ಯವನ್ನು ಕೊಟ್ಟು ಭಗವಂತನನ್ನು ಶಾಸ್ತ್ರೋಕ್ತ ಕ್ರಮದಲ್ಲಿ ಪೂಜಿಸಿದನು. ಮತ್ತು ಅವನು ಭಗವಂತನನ್ನು ಕುರಿತು ಓ, ಸ್ವಾಮಿಯೇ, ನನ್ನ ತಂದೆಯನ್ನು ರಾಕ್ಷಸನಾದ ರುಧಿರನು ತಿಂದುಹಾಕಿದನು. ಬಹಳ

ದ್ರಷ್ಟುಮಿಚ್ಛಾಮಿ ಭಗವನ್ ಪಿತರಂ ಭ್ರಾತೃಭಿಃ ಸಹ ।
ಏವಂ ವಿಜ್ಞಾಪಯು ಲ್ಲಿಂಗಂ ಪ್ರಣಿಪತ್ಯ ಮುಹುರ್ಮುಹುಃ ॥೮೦॥

ಹಾ ರುದ್ರ ರುದ್ರ ರುದ್ರೇತಿ ರುರೋದ ನಿಪ ಪಾತ ಚ ।
ತಂ ದೃಷ್ಟ್ವಾ ಭಗವಾನ್ರುದ್ರೋ ದೇವೀ ಮಾಹ ಚ ಶಂಕರಃ ॥೮೧॥

ಪಶ್ಯ ಬಾಲಂ ಮಹಾಭಾಗೇ ಬಾಷ್ಪಪರ್ಯಾ ಕುಲೇಕ್ಷಣಂ ।
ಮಮಾನು ಸ್ಮರಣೇ ಯುಕ್ತಂ ಮದಾರಾಧನ ತತ್ಪರಂ ॥೮೨॥

ಸಾ ಚ ದೃಷ್ಟ್ವಾ ಮಹಾದೇವೀ ಪರಾಶರ ಮನಿಂದಿತಾ ।
ದುಃಖಾತ್ಸಂಕ್ಲಿಷ್ಟ ಸರ್ವಾಂಗ ಮಸ್ರಾಕುಲ ವಿಲೋಚನಂ ॥೮೩॥

ಲಿಂಗಾರ್ಚನಸ ವಿಧೌ ಸಕ್ತಂ ಹರ ರುದ್ರೇತಿ ವಾದಿನಂ ।
ಪ್ರಾಹ ಭರ್ತಾರ ಮೀಶಾನಂ ಶಂಕರಂ ಜಗತಾಮುಮಾ ॥೮೪॥

ಈಪ್ಸಿತಂ ಯಚ್ಛ ಸಕಲಂ ಪ್ರಸೀದ ಪರಮೇಶ್ವರ ।
ನಿಶಮ್ಯ ವಚನಂ ತಸ್ಯಾಃ ಶಂಕರಃ ಪರಮೇಶ್ವರಃ ॥೮೫॥

---

ತೇಜಸ್ವಿಯಾದ ತಂದೆಯೊಡನೆ ಅವನ ತಮ್ಮಂದಿರೂ ತಿಂದು ಹಾಕಲ್ಪಟ್ಟರು. ನಮ್ಮ ತಂದೆಯನ್ನು ಅವನ ತಮ್ಮಂದಿರೊಂದಿಗೆ ನೋಡಲು ನನಗೆ ಆಸೆ ಇದೆ. ಹೀಗೆ ಹೇಳಿ ಭಗವಂತನನ್ನು ಪುನಃ ಪುನಃ ನಮಸ್ಕಾರ ಮಾಡಿದನು.

೮೧–೮೩. ಪರಾಶರನು, ಭಗರ್ವರುದ್ರ, ರುದ್ರ, ಎಂದು ಸ್ವಾಮಿಯನ್ನು ಪೂಜಿಸುತ್ತಾ ತಂದೆಯನ್ನು ನೆನೆದು ಅಳುತ್ತಾ, ಭೂಮಿಯ ಮೇಲೆ ಬಿದ್ದನು. ಸ್ವಾಮಿಯಾದ ಶಿವನು ಇವನನ್ನು ನೋಡಿ, ತನ್ನ ಪತ್ನಿಯಾದ ಪಾರ್ವತಿಯೊಂದಿಗೆ ಹೀಗೆ ಹೇಳಿದನು:– ಎಲೌ ಮಹಾಭಾಗ್ಯಶಾಲಿನಿಯಾದ ಉಮೆಯೇ, ದುಃಖದಿಂದ ಕಣ್ಣೀರಿಡುತ್ತಿರುವ ನನ್ನ ಪೂಜೆ ಮತ್ತು ಜಪಗಳಲ್ಲಿ ಆಸಕ್ತನಾದ ಈ ಹುಡುಗನನ್ನು ನೋಡು. ಮಹಾನುಭಾವಳಾದ ಪಾರ್ವತಿಯು ಸಂಕಟಪಡುತ್ತಿರುವ ಮತ್ತು ಕಣ್ಣೀರಿನಿಂದ ದೇಹವೆಲ್ಲವೂ ನೆನದುಹೋಗಿರುವ ಪರಾಶರನನ್ನು ನೋಡಿದಳು.

೮೪–೮೬. ಪಾರ್ವತಿಯು ಶಿವಾರ್ಚನೆಯನ್ನು ಭಕ್ತಿಪುರುಸ್ಸರವಾಗಿ ಮಾಡುತ್ತಾ, ಹರ, ರುದ್ರ, ಎನ್ನುತ್ತಿದ್ದ ಬಾಲಕನನ್ನು ನೋಡಿ, ತನ್ನ ಪತಿಯಾದ ಪರಮೇಶ್ವರನನ್ನು ಕುರಿತು ಇಂತೆಂದಳು, :—ಸ್ವಾಮಿಯೇ,

ತತ ಸ್ತಸ್ಯ ವಸಿಷ್ಠಸ್ಯ ನಿಯೋಗಾ ಚ್ಛಕ್ತಿ ನಂದನಃ ।
ರಾಕ್ಷಸಾನಾಮ ಭಾವಾಯ ಮತಿಂ ಚಕ್ರೇ ಮಹಾಮತಿಃ ॥೭೪॥

ಅದೃಶ್ಯಂತೀಂ ವಸಿಷ್ಠಂ ಚ ಪ್ರಣಮ್ಯಾ ರುಂಧತೀಂ ತತಃ ।
ಕೃತ್ವೈಕಲಿಂಗಂ ಕ್ಷಣಿಕಂ ಪಾಂಸುನಾ ಮುನಿಸನ್ನಿಧೌ ॥೭೫॥

ಸಂಪೂಜ್ಯ ಶಿವಸೂಕ್ತೇನ ತ್ರ್ಯಂಬಕೇನ ಶುಭೇನ ಚ ।
ಜಪ್ತ್ವಾತ್ವರಿತ ರುದ್ರಂಚ ಶಿವಸಂಕಲ್ಪಮೇ ವಚ ॥೭೬॥

ನೀಲರುದ್ರಂ ಚ ಶಾಕ್ತೇಯ ಸ್ತಥಾ ರುದ್ರಂ ಚ ಶೋಭನಂ ।
ವಾಮೀಯಂ ಪವಮಾನಂ ಚ ಪಂಚಬ್ರಹ್ಮ ತಥೈವಚ ॥೭೭॥

ಹೋತಾರಂ ಲಿಂಗಸೂಕ್ತಂ ಚ ಅಥರ್ವ ಶಿರ ಏವಚ ।
ಅಷ್ಟಾಂಗ ಮರ್ಘ್ಯಂ ರುದ್ರಾಯ ದತ್ವಾಽಭ್ಯರ್ಚ್ಯ ಯಥಾವಿಧಿ ॥೭೮॥

॥ ಪರಾಶರ ಉವಾಚ ॥

ಭಗವನ್ರಕ್ಷಸಾ ರುದ್ರ ಭಕ್ಷಿತೋ ರುಧಿರೇಣ ವೈ ।
ಪಿತಾ ಮಮ ಮಹಾತೇಜಾ ಭ್ರಾತೃಭಿಃ ಸಹ ಶಂಕರ ॥೭೯॥

---

೭೪. ವಸಿಷ್ಠನ ಅಪ್ಪಣೆಯ ಪ್ರಕಾರ ಶಕ್ತಿಯ ಮಗನಾದ ಪರಾಶರನು ರಾಕ್ಷಸರ ನಾಶಕ್ಕೆ ಮಾತ್ರ ಸಂಕಲ್ಪಮಾಡಿದನು.

೭೫–೭೭. ಪರಾಶರನು ವಸಿಷ್ಠನನ್ನೂ ಅರುಂಧತಿಯನ್ನೂ ನಮಸ್ಕರಿಸಿ, ಋಷಿ ಶ್ರೇಷ್ಠನಾದ ವಸಿಷ್ಠನ ಸಮೀಪದಲ್ಲಿ ಮಣ್ಣಿನಿಂದ ತಾತ್ಕಾಲಿಕವಾದ ಪಾರ್ಥಿವ ಲಿಂಗವನ್ನು ಸ್ಥಾಪಿಸಿದನು. ಮಹೇಶ್ವರ ಸಂಬಂಧಿಯಾದ ಪವಿತ್ರವಾದ ಶಿವಸೂಕ್ತದಿಂದ ರುದ್ರನನ್ನು ಆಹ್ವಾನಮಾಡಿ ಶಿವಪೂಜೆಯನ್ನು ಪ್ರಾರಂಭಿಸಿದನು. ಅವನು ನೀಲರುದ್ರ ಮುಂತಾದ ಶಿವ ಪ್ರಕಾಶಕವಾದ ಮಂತ್ರವನ್ನೂ ವಾಮೀಯ, ಪವಮಾನ. ಮುಂತಾದ ಪೂಜ್ಯವಾದ ರುದ್ರಸೂಕ್ತಗಳನ್ನೂ ಭಕ್ತಿಪುರಸ್ಸರವಾಗಿ ಜಪಿಸಿ ಪೂಜಿಸಿದನು.

೭೮–೮೦. ಪರಾಶರನು ಅಥರ್ವವೇದದ ಶಿರಸ್ಸಾದ ಲಿಂಗ ಸೂಕ್ತವನ್ನು ಹೇಳಿ ಸ್ವಾಮಿಯಾದ ರುದ್ರನನ್ನು ಜಪಿಸಿ ಎಂಟು ವಿಧವಾದ ಅರ್ಘ್ಯವನ್ನು ಕೊಟ್ಟು ಭಗವಂತನನ್ನು ಶಾಸ್ತ್ರೋಕ್ತ ಕ್ರಮದಲ್ಲಿ ಪೂಜಿಸಿದನು. ಮತ್ತು ಅವನು ಭಗವಂತನನ್ನು ಕುರಿತು ಓ, ಸ್ವಾಮಿಯೇ, ನನ್ನ ತಂದೆಯನ್ನು ರಾಕ್ಷಸನಾದ ರುಧಿರನು ತಿಂದುಹಾಕಿದನು. ಬಹಳ

ದ್ರಷ್ಟುಮಿಚ್ಛಾಮಿ ಭಗವನ್ ಪಿತರಂ ಭ್ರಾತೃಭಿಃ ಸಹ ।
ಏವಂ ವಿಜ್ಞಾಪಯಲ್ಲಿಂಗಂ ಪ್ರಣಿಪತ್ಯ ಮುಹುರ್ಮುಹುಃ ॥೮೦॥

ಹಾ ರುದ್ರ ರುದ್ರ ರುದ್ರೇತಿ ರುರೋದ ನಿಪಪಾತ ಚ ।
ತಂ ದೃಷ್ಟ್ವಾ ಭಗವಾನ್ರುದ್ರೋ ದೇವೀಂ ಪ್ರಾಹ ಚ ಶಂಕರಃ ॥೮೧॥

ಪಶ್ಯ ಬಾಲಂ ಮಹಾಭಾಗೇ ಬಾಷ್ಪಪರ್ಯಾಕುಲೇಕ್ಷಣಂ ।
ಮಮಪಾಸ್ಮರಣೇ ಯುಕ್ತಂ ಮದಾರಾಧನ ತತ್ಪರಂ ॥೮೨॥

ಸಾ ಚ ದೃಷ್ಟ್ವಾ ಮಹಾದೇವೀ ಪರಾಶರ ಮನಿಂದಿತಾ ।
ದುಃಖಾತ್ಸಂಕ್ಲಿನ್ನ ಸರ್ವಾಂಗ ಮಸ್ರಾಕುಲ ವಿಲೋಚನಂ ॥೮೩॥

ಲಿಂಗಾರ್ಚನ ವಿಧೌ ಸಕ್ತಂ ಹರ ರುದ್ರೇತಿ ವಾದಿನಂ ।
ಪ್ರಾಹ ಭರ್ತಾರ ಮೀಶಾನಂ ಶಂಕರಂ ಜಗತಾಮುಮಾ ॥೮೪॥

ಈಪ್ಸಿತಂ ಯಚ್ಛ ಸಕಲಂ ಪ್ರಸೀದ ಪರಮೇಶ್ವರ ।
ನಿಶಮ್ಯ ವಚನಂ ತಸ್ಯಾಃ ಶಂಕರಃ ಪರಮೇಶ್ವರಃ ॥೮೫॥

---

ತೇಜಸ್ವಿಯಾದ ತಂದೆಯೊಡನೆ ಅವನ ತಮ್ಮಂದಿರೂ ತಿಂದು ಹಾಕಲ್ಪಟ್ಟರು. ನಮ್ಮ ತಂದೆಯನ್ನು ಅವನ ತಮ್ಮಂದಿರೊಂದಿಗೆ ನೋಡಲು ನನಗೆ ಆಸೆ ಇದೆ. ಹೀಗೆ ಹೇಳಿ ಭಗವಂತನನ್ನು ಪುನಃ ಪುನಃ ನಮಸ್ಕಾರ ಮಾಡಿದನು.

೮೧–೮೩. ಪರಾಶರನು, ಭಗರ್ವರುದ್ರ, ರುದ್ರ, ಎಂದು ಸ್ವಾಮಿಯನ್ನು ಪೂಜಿಸುತ್ತಾ ತಂದೆಯನ್ನು ನೆನೆದು ಅಳುತ್ತಾ, ಭೂಮಿಯ ಮೇಲೆ ಬಿದ್ದನು. ಸ್ವಾಮಿಯಾದ ಶಿವನು ಇವನನ್ನು ನೋಡಿ, ತನ್ನ ಪತ್ನಿಯಾದ ಪಾರ್ವತಿಯೊಂದಿಗೆ ಹೀಗೆ ಹೇಳಿದನು:– ಎಲೌ ಮಹಾಭಾಗ್ಯಶಾಲಿನಿಯಾದ ಉಮೆಯೇ, ದುಃಖದಿಂದ ಕಣ್ಣೀರಿಡುತ್ತಿರುವ ನನ್ನ ಪೂಜೆ ಮತ್ತು ಜಪಗಳಲ್ಲಿ ಆಸಕ್ತನಾದ ಈ ಹುಡುಗನನ್ನು ನೋಡು. ಮಹಾನುಭಾವಳಾದ ಪಾರ್ವತಿಯು ಸಂಕಟಪಡುತ್ತಿರುವ ಮತ್ತು ಕಣ್ಣೀರಿನಿಂದ ದೇಹವೆಲ್ಲವೂ ನೆನೆದುಹೋಗಿರುವ ಪರಾಶರನನ್ನು ನೋಡಿದಳು.

೮೪–೮೬. ಪಾರ್ವತಿಯು ಶಿವಾರ್ಚನೆಯನ್ನು ಭಕ್ತಿಪುರುಸ್ಸರವಾಗಿ ಮಾಡುತ್ತಾ, ಹರ, ರುದ್ರ, ಎನ್ನುತ್ತಿದ್ದ ಬಾಲಕನನ್ನು ನೋಡಿ, ತನ್ನ ಪತಿಯಾದ ಪರಮೇಶ್ವರನನ್ನು ಕುರಿತು ಇಂತೆಂದಳು,:—ಸ್ವಾಮಿಯೇ,

ಭಾರ್ಯಾ ಮಾರ್ಯಾ ಮುಮಾಂ ಪ್ರಾಹ ತತೋ ಹಾಲಾಹಲಾಶನಃ ।
ರಕ್ಷಾಮ್ಯೇನಂ ದ್ವಿಜಂ ಬಾಲಂ ಫುಲ್ಲೇಂದೀವರ ಲೋಚನಂ ॥೮೬॥

ದದಾಮಿ ದೃಷ್ಟಿಂ ಮದ್ರೂಪ ದರ್ಶನಕ್ಷಮ ಏಷ ವೈ ।
ಏವಮುಕ್ತ್ವಾ ಗಣೈರ್ದಿವ್ಯೈ ರ್ಭಗವಾನ್ನೀಲ ಲೋಹಿತಃ ॥೮೭॥

ಬ್ರಹ್ಮೇಂದ್ರ ವಿಷ್ಣು ರುದ್ರಾದ್ಯೈಃ ಸಂವೃತಃ ಪರಮೇಶ್ವರಃ ।
ದದೌ ಚ ದರ್ಶನಂ ತಸ್ಮೈ ಮುನೇಃ ಪುತ್ರಾಯ ಧೀಮತೇ ॥೮೮॥

ಸೋಽಪಿದೃಷ್ಟ್ವಾ ಮಹಾದೇವ ಮಾನಂದಾ ಸ್ರಾವಿಲೇಕ್ಷಣಃ ।
ನಿಪಪಾತ ಚ ಹೃಷ್ಟಾತ್ಮಾ ಪಾದಯೋ ಸ್ತಸ್ಯ ಸಾದರಂ ॥೮೯॥

ಪುನರ್ಭವಾನ್ಯಾಃ ಪಾದೌ ಚ ನಂದಿನಶ್ಚ ಮಹಾತ್ಮನಃ ।
ಸಫಲಂ ಜೀವಿತಂ ಮೇಽದ್ಯ ಬ್ರಹ್ಮಾದ್ಯಾಂಸ್ತಾಂಸ್ತದಾಽಽಹಸಃ॥೯೦॥

---

ಈ ಬಾಲನ ಇಷ್ಟಾರ್ಥಗಳನ್ನೆಲ್ಲವನ್ನೂ ದಯವಿಟ್ಟು ಸಲ್ಲಿಸಿ, ಇವನಿಗೆ ಅನುಗ್ರಹವನ್ನು ಕರುಣೆಯಿಂದ ಮಾಡಿ. ಹಾಲಾಹಲ ವಿಷವನ್ನು ಪಾನ ಮಾಡಿದ ಪರಮೇಶ್ವರನು ತನ್ನ ಪತ್ನಿಗೆ ಹಾಗೆಯೇ ಆಗಲೆಂದು ಹೇಳಿ, ಅರಳಿದ ಕಮಲದಂತೆ ಕಣ್ಣುಳ್ಳ ಬಾಲಕನ ಇಷ್ಟಾರ್ಥವನ್ನು ಸಲ್ಲಿಸುವೆನೆಂದು ಒಪ್ಪಿದನು.

೮೭–೮೮. ನನ್ನ ಸ್ವರೂಪವನ್ನು ನೋಡಲು ಬೇಕಾದ ದಿವ್ಯದೃಷ್ಟಿಯನ್ನು ಈ ಬಾಲಕನಿಗೆ ಕೊಡುವೆನೆಂದು ಹೇಳಿ, ಪೂಜ್ಯನಾದ ಪರಮೇಶ್ವರನು ಬ್ರಹ್ಮ, ವಿಷ್ಣು, ರುದ್ರನೇ ಮೊದಲಾದ ದೇವತೆಗಳೊಡನೆ, ಋಷಿಕುಮಾರನೂ ಬುದ್ಧಿಶಾಲಿಯೂ ಆದ ಈ ಬಾಲಕನಿಗೆ ದರ್ಶನ ಕೊಟ್ಟನು.

೮೯. ಶ್ರೀ ಪರಮೇಶ್ವರನ ದರ್ಶನವನ್ನು ಪಡೆದು ಬಾಲಕನು ಆನಂದ ಬಾಷ್ಪವನ್ನು ಸುರಿಸುತ್ತಾ, ಸ್ವಾಮಿಯ ಪಾದಗಳಿಗೆ ನಮಸ್ಕಾರ ಮಾಡಿದನು.

೯೦–೯೨. ಮತ್ತು ಪರಾಶರನು, ಪಾರ್ವತಿ, ನಂದೀಶ್ವರ ಇವರ ಚರಣಗಳಿಗೂ ಎರಗಿ, ತನ್ನ ಜೀವಿತವು ಈಗ ಸಾರ್ಥಕವಾಯಿತೆಂದು ಬ್ರಹ್ಮನೇ ಮೊದಲಾದ ದೇವತೆಗಳನ್ನು ಕುರಿತು ಹೇಳಿದನು ಮತ್ತು

ರಕ್ಷಾರ್ಥಮಾಗತಸ್ತ್ವದ್ಯ ಮಮ ಬಾಲೇಂದು ಭೂಷಣಃ ।
ಕೋಽನ್ಯಃ ಸಮೋಽಮಯಾಲೋಕೇ ದೇವೋ ವಾದಾನವೋಽಪಿವಾ
ಅಥ ತಸ್ಮಿನ್ ಕ್ಷಣಾದೇವ ದದರ್ಶದಿವಿ ಸಂಸ್ಥಿತಂ ।
ಪಿತರಂ ಭ್ರಾತೃಭಿಃ ಸಾರ್ಧಂ ಶಾಕ್ತೇಯಸ್ತು ಪರಾಶರಃ ॥೯೨॥
ಸೂರ್ಯ ಮಂಡಲ ಸಂಕಾಶೇ ವಿಮಾನೇ ವಿಶ್ವತೋಮುಖೇ ।
ಭ್ರಾತೃಭಿಃ ಸಹಿತಂ ದೃಷ್ಟ್ವಾ ನನಾಮ ಚ ಜಹರ್ಷ ಚ ॥೯೩॥
ತದಾ ವೃಷಧ್ವಜೋ ದೇವಃ ಸಭಾರ್ಯಃ ಸ ಗಣೇಶ್ವರಃ ।
ವಸಿಷ್ಠ ಪುತ್ರಂ ಪ್ರಾಹೇದಂ ಪುತ್ರದರ್ಶನ ತತ್ಪರಂ ॥೯೪॥

॥ ಶ್ರೀ ದೇವ ಉವಾಚ ॥

ಶಕ್ತೇ ಪಶ್ಯ ಸುತಂ ಬಾಲ ಮಾನಂದಾಸ್ರಾ ವಿಲೇಕ್ಷಣಂ ।
ಅದೃಶ್ಯಂತೀಂ ಚ ವಿಪ್ರೇಂದ್ರ ವಸಿಷ್ಠಂ ಪಿತರಂ ತವ ॥೯೫॥

---

ಸಾಕ್ಷಾತ್ಸ್ವಾಮಿಯಾದ ತನ್ನ ರಕ್ಷಣೆಗಾಗಿ ಬಂದಿರುವ ಪರಮೇಶ್ವರನ ದರ್ಶನವಾದ್ದರಿಂದ ದೇವದಾನವರಿಗಿಂತಲೂ ತಾನು ಶ್ರೇಷ್ಠನಾದವನೆಂದು ಸಂತೋಷದಿಂದ ಹೇಳಿದನು. ಕ್ಷಣಮಾತ್ರದಲ್ಲಿಯೇ ಪರಾಶರನು ತನ್ನ ತಂದೆಯನ್ನೂ, ಅವನ ತಮ್ಮಂದಿರನ್ನೂ, ಆಕಾಶದಲ್ಲಿದ್ದುದನ್ನು ಕಂಡನು.

೯೩. ಪರಾಶರನು ಸೂರ್ಯಮಂಡಲಕ್ಕೆ ಸಮಾನವಾಗಿ ವಿಸ್ತಾರವಾಗಿಯೂ ಪ್ರಕಾಶಮಾನವಾಗಿಯೂ ಇದ್ದ ವಿಮಾನದಲ್ಲಿ ತಂದೆಯನ್ನು ಅವನ ತಮ್ಮಂದಿರೊಡನೆ ಇದ್ದುದನ್ನು ಕಂಡು ನಮಸ್ಕಾರಮಾಡಿ ಬಹಳ ಸಂತೋಷಪಟ್ಟನು.

೯೪–೯೬. ಆಗ ಧರ್ಮವೇ ಧ್ವಜವಾಗಿ ಉಳ್ಳ ಸ್ವಾಮಿಯೂ, ಪತ್ನೀಸಮೇತನೂ, ಗಣಾಧಿಪತಿಗಳಿಂದ ಕೂಡಿದವನೂ ಆದ ಪರಮೇಶ್ವರನು, ಪುತ್ರನನ್ನು ನೋಡಬೇಕೆಂಬ ಕುತೂಹಲವುಳ್ಳ ವಸಿಷ್ಠನ ಮಗನಾದ ಶಕ್ತಿಯನ್ನು ಕುರಿತು ಇಂತೆಂದನು. ಪರಮೇಶ್ವರನು ಹೇಳಿದನು: ಎಲೈ ಶಕ್ತಿಯೇ, ಆನಂದ ಬಾಷ್ಪವನ್ನು ಸುರಿಸುತ್ತಿರುವ ನಿನ್ನ ಮಗನಾದ ಪರಾಶರನನ್ನೂ ಪತ್ನಿಯಾದ ಅದೃಶ್ಯಂತಿಯನ್ನೂ ಮತ್ತು, ನಿನ್ನ

ಅರುಂಧತೀಂ ಮಹಾಭಾಗಾಂ ಕಲ್ಯಾಣೀಂ ದೇವತೋಪಮಾಂ ।
ಮಾತರಂ ಪಿತರಂ ಚೋಭೌ ನಮಸ್ಕುರು ಮಹಾಮತೇ ॥೯೬॥

ತದಾ ಹರಂ ಪ್ರಣಮ್ಯಾಶು ದೇವದೇವ ಮುಮಾಂ ತಥಾ ।
ವಸಿಷ್ಠಂ ಚ ತದಾ ಶ್ರೇಷ್ಠಂ ಶಕ್ತಿರ್ವೈ ಶಂಕರಾಜ್ಞಯಾ ॥೯೭॥

ಮಾತರಂ ಚ ಮಹಾಭಾಗಾಂ ಕಲ್ಯಾಣೀಂ ಪತಿದೇವತಾಂ ।
ಅರುಂಧತೀಂ ಜಗನ್ನಾಥ ನಿಯೋಗಾತ್ ಪ್ರಾಹ ಶಕ್ತಿಮಾನ್ ॥೯೮॥

॥ ವಾಸಿಷ್ಠ ಉವಾಚ ॥

ಭೋ ವತ್ಸ ವತ್ಸ ವಿಪ್ರೇಂದ್ರ ಪರಾಶರ ಮಹಾದ್ಯುತೇ ।
ರಕ್ಷಿತೋಽಹಂ ತ್ವಯಾ ತಾತ ಗರ್ಭಸ್ಥೇನ ಮಹಾತ್ಮನಾ ॥೯೯॥

ಅಣಿಮಾದಿ ಗುಣೈಶ್ವರ್ಯಂ ಮಯಾ ವತ್ಸ ಪರಾಶರ ।
ಲಬ್ಧ ಮುದ್ಯಾನನಂ ದೃಷ್ಟಂ ತವ ಬಾಲ ಮಮಾಜ್ಞಯಾ ॥೧೦೦॥

---

ತಂದೆಯಾದ ವಸಿಷ್ಠನನ್ನೂ, ಸಾಕ್ಷಾದ್ದೇವತೆಗೆ ಸಮಳಾದ ಮಹಾಭಾಗ್ಯ ಶಾಲಿನಿಯಾದ ಅರುಂಧತೀದೇವಿಯನ್ನೂ, ನೋಡು. ಎಲೈ ಬಹು ಬುದ್ಧಿ ಶಾಲಿಯಾದ ಶಕ್ತಿಯೇ, ನಿಮ್ಮ ತಾಯಿತಂದೆಗಳಿಬ್ಬರನ್ನೂ ನಮಸ್ಕರಿಸು.

೯೭–೯೮. ಆಗ ಶಕ್ತಿಯು ಪರಮೇಶ್ವರನನ್ನೂ, ಪಾರ್ವತಿಯನ್ನೂ, ಶ್ರೇಷ್ಠನಾದ ವಸಿಷ್ಠನನ್ನೂ, ಮಂಗಳಕರಳೂ, ಮಹಾಪತಿವ್ರತೆಯೂ ಆದ ತಾಯಿಯನ್ನೂ ನಮಸ್ಕರಿಸಿ, ತನ್ನ ಮಗನಾದ ಪರಾಶರನನ್ನು ಕುರಿತು ಹೀಗೆಂದನು.

೯೯. ಎಲೈ ಬ್ರಾಹ್ಮಣ ಶ್ರೇಷ್ಠನಾದ ಮತ್ತು ಮಹಾತೇಜಸ್ವಿಯಾದ, ಮಗುವಾದ ಪರಾಶರನೇ, ಮಹಾತ್ಮನಾದ ನೀನು ಗರ್ಭದಲ್ಲಿರುವಾಗಲೇ ನಾನು ರಕ್ಷಿಸಲ್ಪಟ್ಟೆನು.

೧೦೦–೧೦೨. ಶಕ್ತಿಯು, ಮಗನೇ, ಈಶ್ವರಾಜ್ಞೆಯಿಂದ ಅಣಿಮಾದಿ ಮಹಾ ಪ್ರಭಾವಶಾಲಿಯಾದ ಗುಣಗಳಿಂದ ಕೂಡಿದ ನಿನ್ನನ್ನು ನಾನು ನೋಡಿದ ಹಾಗಾಯಿತು. ಎಲೈ ಬುದ್ಧಿಶಾಲಿಯಾದ ಪರಾಶರನೇ, ನನ್ನ ತಾಯಿ

ಅದೃಶ್ಯಂತೀಂ ಮಹಾಭಾಗಾಂ ರಕ್ಷ ವತ್ಸ ಮಹಾಮತೇ ।
ಅರುಂಧತೀಂ ಚ ಪಿತರಂ ವಸಿಷ್ಠಂ ಮಮ ಸರ್ವದಾ ॥೧೦೧॥

ಅನ್ವಯಃ ಸಕಲೋ ವತ್ಸ ಮಮ ಸಂತಾರಿತ ಸ್ತ್ವಯಾ ।
ಪುತ್ರೇಣ ಲೋಕಾನ್ ಜಯತೀ ತ್ಯುಕ್ತಂ ಸದ್ಭಿಃ ಸದೈವಹಿ ॥೧೦೨॥

ಈಪ್ಸಿತಂ ವರ ಯೇಶಾನಂ ಜಗತಾಂ ಪ್ರಭವಂ ಪ್ರಭುಂ ।
ಗಮಿಷ್ಯಾ ಮ್ಯಭಿವಂದ್ಯೇಶಂ ಭ್ರಾತೃಭಿಃ ಸಹ ಶಂಕರಂ ॥೧೦೩॥

ಏವಂ ಪುತ್ರ ಮುಪಾಮಂತ್ರ್ಯ ಪ್ರಣಮ್ಯ ಚ ಮಹೇಶ್ವರಂ ।
ನಿರೀಕ್ಷ್ಯ ಭಾರ್ಯಾಂ ಸದಸಿ ಜಗಾಮ ಪಿತರಂ ವಶೀ ॥೧೦೪॥

ಗತಂ ದೃಷ್ಟ್ವಾಽಥ ಪಿತರಂ ತದಾಽಭ್ಯರ್ಚ್ಯೈವ ಶಂಕರಂ ।
ತುಷ್ಟಾವ ವಾಗ್ಭಿರಿಷ್ಟಾಭಿಃ ಶಾಕ್ತೇಯಃ ಶಶಿ ಭೂಷಣಂ ॥೧೦೫॥

---

ತಂದೆಗಳಾದ ವಸಿಷ್ಠ ಅರುಂಧತಿಯರನ್ನೂ, ನನ್ನ ಪತ್ನಿಯಾದ ಅದೃಶ್ಯಂತಿಯನ್ನೂ ನೀನು ಹೀಗೆಯೇ ರಕ್ಷಿಸಬೇಕು. ನನ್ನ ವಂಶೋದ್ಧಾರವೇ ನಿನ್ನಿಂದಾಯಿತು. ಪುತ್ರರಿಂದಲೇ ತಂದೆಯು ಪ್ರಪಂಚದಲ್ಲಿ ಸರ್ವಶ್ರೇಷ್ಠನಾಗುವನು. ಎಂಬ ಸತ್ಪುರುಷರ ಮಾತು ಈಗ ನಿಜವಾಯಿತು. ಎಂದು ಶಕ್ತಿಯು ಹೇಳಿದನು.

೧೦೩–೧೦೪. ಜಗತ್ತಿಗೆ ಸ್ವಾಮಿಯಾದ ಈಶ್ವರನನ್ನು ಕುರಿತು ಬೇಕಾದ ವರವನ್ನು ಬೇಡು. ನಾನಿನ್ನು ಪರಮೇಶ್ವರನನ್ನು ವಂದಿಸಿ ತೆರಳುವೆನು, ಎಂದು ಮಗನಿಗೆ ಹೇಳಿ ಶಕ್ತಿಯು ಪರಮೇಶ್ವರನಿಗೆ ನಮಸ್ಕರಿಸಿದನು. ಅಲ್ಲದೆ ಜಿತೇಂದ್ರಿಯನಾದ ಅವನು ಆ ಸಭೆಯಲ್ಲಿ ತನ್ನ ಹೆಂಡತಿಯನ್ನೂ ನೋಡಿ ಹೊರಟು ಹೋದನು.

೧೦೫. ಶಕ್ತಿ ಪುತ್ರನಾದ ಪರಾಶರನು ತಂದೆಯು ಪ್ರಯಾಣ ಮಾಡಿದ ಬಳಿಕ ಶಂಕರನನ್ನು ಪೂಜಿಸಿ ಚಂದ್ರಶೇಖರನಾದ ಪರಮೇಶ್ವರನನ್ನು ಅವನನ್ನು ಮೆಚ್ಚಿಸುವ ಮಾತುಗಳಿಂದ ಸ್ತೋತ್ರಮಾಡಿದನು.

ತತಸ್ತುಷ್ಟೋ ಮಹಾದೇವೋ ಮನ್ಮಥಾಂಧಕ ಮರ್ದನಃ ।
ಅನುಗೃಹ್ಯಾಥ ಶಾಕ್ತೇಯಂ ತತ್ರೈವಾಂತರ ಧೀಯತ ॥೧೦೬॥

ಗತೇ ಮಹೇಶ್ವರೇ ಸಾಂಬೇ ಪ್ರಣಮ್ಯ ಚ ಮಹೇಶ್ವರಂ ।
ದದಾಹ ರಾಕ್ಷಸಾನಾಂ ತು ಕುಲಂ ಮಂತ್ರೇಣ ಮಂತ್ರವಿತ್ ॥

ತದಾಹ ಪೌತ್ರಂ ಧರ್ಮಜ್ಞೋ ವಸಿಷ್ಠೋ ಮುನಿಭಿರ್ವೃತಃ ।
ಅಲಮತ್ಯಂತ ಕೋಪೇನ ತಾತ ಮನ್ಯು ಮಿಮಂ ಜಹಿ ॥೧೦೮॥

ರಾಕ್ಷಸಾ ನಾಪರಾಧ್ಯಂತಿ ಪಿತುಸ್ತೇ ವಿಹಿತಂ ತಥಾ ।
ಮೂಢಾನಾಮೇವ ಭವತಿ ಕ್ರೋಧೋ ಬುದ್ಧಿಮತಾಂ ನಹಿ ॥

ಹನ್ಯತೇ ತಾತ ಕಃ ಕೇನ ಯತಃ ಸ್ವಕೃತ ಭುಕ್ಪುಮಾನ್ ।
ಸಂಚಿತಸ್ಯಾಪಿ ಮಹತಾ ವತ್ಸ ಕ್ಲೇಶೇನ ಮಾನವೈಃ ॥೧೧೦॥

---

೧೦೬. ಅನಂತರ ಮನ್ಮಥ ಮತ್ತು ಅಂಧಕಾಸುರನನ್ನು ಸಂಹಾರ ಮಾಡಿದ ಪರಮೇಶ್ವರನು ಪ್ರೀತನಾಗಿ ಪರಾಶರನಿಗೆ ಅನುಗ್ರಹಿಸಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.

೧೦೭. ಪಾರ್ವತೀ ಸಮೇತನಾದ ಪರಮೇಶ್ವರನು ತೆರಳಲು, ಮಂತ್ರಜ್ಞನಾದ ಪರಾಶರನು ಮಂತ್ರೋಚ್ಚಾರಣೆ ಮಾಡಿ ಪರಮೇಶ್ವರನನ್ನು ನಮಸ್ಕರಿಸಿ, ರಾಕ್ಷಸರ ಕುಲವನ್ನೆಲ್ಲವನ್ನೂ ನಿಮಿಷಮಾತ್ರದಲ್ಲಿಯೇ ಸುಟ್ಟು ಹಾಕಿದನು.

೧೦೮–೧೧೦. ಋಷಿಗಳಿಂದ ಕೂಡಿದ ಧರ್ಮವನ್ನರಿತಿರುವ ವಸಿಷ್ಠ ಮಹರ್ಷಿಯು ಪರಾಶರನಿಗೆ, ಎಲೈ ಬಾಲಕನೇ, ಕೋಪವು ಸಾಕು; ಕೋಪವನ್ನು ಬಿಟ್ಟುಬಿಡು, ನಿಮ್ಮ ತಂದೆಗೆ ರಾಕ್ಷಸರು ತಪ್ಪನ್ನು ಮಾಡಿದರು. ಆ ರೀತಿಯಲ್ಲಿ ಅವನ ಹಣೆಯಲ್ಲಿ ಬರೆದಿತ್ತು. ಬುದ್ಧಿವಂತರು ಕೋಪಿಸುವುದಿಲ್ಲ. ಕೇವಲ ಮೂಢರೇ ಕೋಪಿಸಿಕೊಳ್ಳುವವರು. ಎಲೈ ಮಗುವೇ, ಈ ಲೋಕದಲ್ಲಿ ಯಾರು ಯಾರನ್ನು ಕೊಲ್ಲುವರು? ಮನುಷ್ಯರು ತಮ್ಮ ಪೂರ್ವಾರ್ಜಿತವಾದ ಕರ್ಮಸಮೂಹದ ಫಲವನ್ನು ಒಂದಲ್ಲೊಂದು ರೀತಿಯಲ್ಲಿ ಅನುಭವಿಸಲೇಬೇಕು. ಎಂದು ಹೇಳಿ ಸಮಾಧಾನಪಡಿಸಿದನು.

ಯಶಸ ಸ್ತಪಸ ಶ್ಚೈವ ಕ್ರೋಧೋ ನಾಶಕರಃ ಸ್ಮೃತಃ ।
ಅಲಂ ಹಿ ರಾಕ್ಷಸೈರ್ದಗ್ಧೈಃ ದೀನೈರನಪರಾಧಿಭಿಃ ॥೧೧೧॥

ಸತ್ರಂ ತೇ ವಿರಮತ್ವೇತತ್ ಕ್ಷಮಾ ಸಾರಾ ಹಿ ಸಾಧವಃ ।
ಏವಂ ವಸಿಷ್ಠವಾಕ್ಯೇನ ಶಾಕ್ತೇಯೋ ಮುನಿಪುಂಗವಃ ॥೧೧೨॥

ಉಪಸಂಹೃತ ವಾನ್ಸತ್ರಂ ಸದ್ಯ ಸ್ತದ್ವಾಕ್ಯ ಗೌರವಾತ್ ।
ತತಃ ಪ್ರೀತಶ್ಚ ಭಗವಾನ್ವಸಿಷ್ಠೋ ಮುನಿಸತ್ತಮಃ ॥೧೧೩॥

ಸಂಪ್ರಾಪ್ತಶ್ಚ ತದಾ ಸತ್ರಂ ಪುಲಸ್ತ್ಯೋ ಬ್ರಹ್ಮಣಃ ಸುತಃ ।
ವಸಿಷ್ಠೇನ ತು ದತ್ತಾರ್ಘ್ಯಃ ಕೃತಾಸನ ಪರಿಗ್ರಹಃ ॥೧೧೪॥

ಪರಾಶರ ಮುವಾಚೇದಂ ಪ್ರಣಿಪತ್ಯ ಸ್ಥಿತಂ ಮುನಿಃ ।
ವೈರೇ ಮಹತಿ ಯದ್ವಾಕ್ಯಾ ದ್ಗುರೋರದ್ಯಾ ಶ್ರಿತಾ ಕ್ಷಮಾ ॥೧೧೫॥

ತ್ವಯಾ ತಸ್ಮಾತ್ಸಮಸ್ತಾನಿ ಭವಾನ್ ಶಾಸ್ತ್ರಾಣಿ ವೇತ್ಸ್ಯಸಿ ।
ಸಂತತೇರ್ಮಮ ಸ ಚ್ಛೇದಃ ಕ್ರುದ್ಧೇನಾಪಿ ಯತಃ ಕೃತಃ ॥೧೧೬॥

---

೧೧೧–೧೧೩. ಎಲೈ ಮಗುವೇ, ಕೋಪವು ಕೀರ್ತಿಯನ್ನೂ, ತಪಸ್ಸನ್ನೂ ಹಾಳುಮಾಡುತ್ತದೆ. ಆದ್ದರಿಂದ ತಪ್ಪಿತಸ್ಥರಲ್ಲದ ರಾಕ್ಷಸರನ್ನೂ ನಾಶಮಾಡುವುದನ್ನು ನಿಲ್ಲಿಸು. ಈ ರಾಕ್ಷಸ ನಾಶರೂಪವಾದ ಯಾಗವನ್ನು ಕೊನೆಗಾಣಿಸು. ಏಕೆಂದರೆ ಸತ್ಪುರುಷರು ಯಾವಾಗಲೂ ಶಾಂತಿಗುಣವುಳ್ಳವರು. ಎಂದು ವಸಿಷ್ಠನು ಹೇಳಲು ಮುನಿಶ್ರೇಷ್ಠನಾದ ಪರಾಶರನು ವಸಿಷ್ಠರ ಮಾತನ್ನು ಗೌರವಿಸಿ, ರಾಕ್ಷಸರ ನಾಶಕಾರಣವಾದಯಾಗವನ್ನು ಕೊನೆಗಾಣಿಸಿದನು. ಋಷಿಶ್ರೇಷ್ಠನಾದ ವಸಿಷ್ಠನೂ ಇದರಿಂದ ಸಂತೋಷಪಟ್ಟನು.

೧೧೪–೧೧೬. ಆಗ ಬ್ರಹ್ಮನ ಮಗನಾದ ಪುಲಸ್ತ್ಯನು ಆ ಯಾಗಶಾಲೆಗೆ ಬಂದನು. ವಸಿಷ್ಠನು ಅರ್ಘ್ಯ ಮತ್ತು ಆಸನಗಳನ್ನು ಕೊಟ್ಟು ಸತ್ಕರಿಸಿದನು. ಆಗ ಪುಲಸ್ತ್ಯನು, ಪರಾಶರಮುನಿಯು ನಮಸ್ಕರಿಸಿ ನಿಂತಿರಲು. ಹೀಗೆಂದನು: ರಾಕ್ಷಸರಲ್ಲಿ ಬಹಳ ದ್ವೇಷವಿದ್ದರೂ, ಗುರುಗಳಾದ ವಸಿಷ್ಠರ ಅಪ್ಪಣೆಯನ್ನು ನೀನು ಮೀರಲಿಲ್ಲ. ಆದ್ದರಿಂದ ನೀನು ಸಕಲ ಶಾಸ್ತ್ರಪಾರಂಗತನಾಗುವೆ. ಬಹಳ ಕೋಪವಿದ್ದರೂ ನನ್ನ ವಂಶವನ್ನು

ತ್ವಯಾ ತಸ್ಮಾನ್ಮಹಾಭಾಗ ದದಾಮ್ಯನ್ಯಂ ಮಹಾವರಂ ।
ಪುರಾಣ ಸಂಹಿತಾ ಕರ್ತಾ ಭರ್ವಾ ವತ್ಸ ಭವಿಷ್ಯತಿ ॥೧೧೭॥

ದೇವತಾ ಪರಮಾರ್ಥಂ ಚ ಯಥಾ ವದ್ವೇತ್ಸ್ಯತೇ ಭವಾನ್ ।
ಪ್ರವೃತ್ತೌ ತು ನಾ ನಿವೃತ್ತೌ ತು ನಾ ಕರ್ಮಣಸ್ತೇಽ ಮಲಾ ಮತಿಃ ॥೧೧೮॥

ಮತ್ಪ್ರಸಾದಾ ದಸಂದಿಗ್ಧಾ ತವ ವತ್ಸ ಭವಿಷ್ಯತಿ ।
ತತಶ್ಚ ಪ್ರಾಹ ಭಗವಾ ನ್ವಸಿಷ್ಠೋ ವದತಾಂ ವರಃ ॥೧೧೯॥

ಪುಲಸ್ತ್ಯೇನ ಯದುಕ್ತಂ ತೇ ಸರ್ವಮೇತದ್ಭವಿಷ್ಯತಿ ।
ಅಥ ತಸ್ಯ ಪುಲಸ್ತ್ಯಸ್ಯ ವಸಿಷ್ಠಸ್ಯ ಚ ಧೀಮತಃ ॥೧೨೦॥

ಪ್ರಸಾದಾ ದ್ವೈಷ್ಣವಂ ಚಕ್ರೇ ಪುರಾಣಂ ವೈ ಪರಾಶರಃ ।
ಷಟ್ಪ್ರಕಾರಂ ಸಮಸ್ತಾರ್ಥ ಸಾಧಕಂ ಜ್ಞಾನ ಸಂಚಯಂ ॥೧೨೧॥

---

ನಾಶಮಾಡದೆ ಇರುವುದರಿಂದ ಈ ಮಹಾಫಲವು ನಿನಗೆ ಪ್ರಾಪ್ತವಾಗುವುದು. ಎಂದು ಪರಾಶರನಿಗೆ ಅನುಗ್ರಹಿಸಿದನು.

೧೧೭–೧೧೯. ಎಲೈ ಪುಣ್ಯಶಾಲಿಯೇ, ಆದ್ದರಿಂದ ನಿನಗೆ ಇನ್ನೊಂದು ವರವನ್ನು ಕೊಡುವೆನು. ಏನೆಂದರೆ ಪುರಾಣಗಳೆಂಬ ಶ್ರೇಷ್ಠವಾದ ಗ್ರಂಥಗಳನ್ನು ಬರೆಯುವ ಭಾಗ್ಯವೂ ನಿನಗೆ ಲಭಿಸುವುದು. ನಿನಗೆ ದೇವತೆಗಳ ರಹಸ್ಯವೆಲ್ಲವೂ ತಿಳಿಯುವುದು. ಒಳ್ಳೆಯ ಕರ್ಮಗಳನ್ನು ಮಾಡುವ ವಿಷಯದಲ್ಲೂ ಮತ್ತು ಅಶುದ್ಧವಾದ ಕರ್ಮಗಳನ್ನು ಬಿಡುವ ವಿಷಯದಲ್ಲಿಯೂ, ನಿನಗೆ ನಿಷ್ಕೃಷ್ಟವಾದ ಜ್ಞಾನವು ನನ್ನ ಅನುಗ್ರಹದಿಂದ ತಪ್ಪದೆ ಉಂಟಾಗುವುದು. ಅನಂತರ ವಸಿಷ್ಠನು ಮಾತನಾಡಲಾರಂಭಿಸಿದನು.

೧೨೦–೧೨೧. ವಸಿಷ್ಠಮಹರ್ಷಿಗಳೂ ಸಹ ಪುಲಸ್ತ್ಯರು ಹೇಳಿದ ಹಾಗೆಯೇ ನಿನಗೆ ಎಲ್ಲವೂ ಆಗುವುದು. ಎಂದು ಪರಾಶರನಿಗೆ ಅನುಗ್ರಹಿಸಿದರು. ಅನಂತರ ಪುಲಸ್ತ್ಯನ ಮತ್ತು ವಸಿಷ್ಠರ ಅನುಗ್ರಹದಿಂದ ಪರಾಶರನು ವಿಷ್ಣುಸಂಬಂಧವಾದ ಪುರಾಣಗಳನ್ನು ರಚನೆ ಮಾಡಿದನು. ಆರುವಿಧವಾದ ಪುರಾಣಗಳು ಸರ್ವಸಿದ್ಧಿಯನ್ನುಂಟು ಮಾಡುವವುಗಳಾಗಿಯೂ, ಜ್ಞಾನರಾಶಿಯಿಂದಲೂ ಪ್ರಕಾಶಿಸುತ್ತವೆ.

ಷಟ್ಸಹಸ್ರ ಮಿತಂ ಸರ್ವಂ ವೇದಾರ್ಥೇನ ಚ ಸಂಯುತಂ ।
ಚತುರ್ಥಂ ಹಿ ಪುರಾಣಾನಾಂ ಸಂಹಿತಾಸು ಸುಶೋಭನಂ ॥೧೨೨॥

ಏಷ ವಃ ಕಥಿತಃ ಸರ್ವೋ ವಾಸಿಷ್ಠಾನಾಂ ಸಮಾಸತಃ ।
ಪ್ರಭವಃ ಶಕ್ತಿ ಸೂನೋಶ್ಚ ಪ್ರಭಾವೋ ಮುನಿಪುಂಗವಾಃ ॥೧೨೩॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ವಸಿಷ್ಠ ವಂಶ ವಿಚಾರ ವರ್ಣನಂ ನಾಮ ಚತುಷ್ಷಷ್ಟಿತಮೋಽಧ್ಯಾಯಃ

---

೧೨೨–೧೨೩. ಪುರಾಣಗಳಲ್ಲಿ ನಾಲ್ಕನೆಯ ಭಾಗವೂ, ವೇದಾರ್ಥಗಳನ್ನೊಳಗೊಂಡದ್ದೂ, ಆರು ಸಹಸ್ರ ಶ್ಲೋಕವುಳ್ಳದ್ದೂ, ಆದ ಪುರಾಣ ಭಾಗವನ್ನು ಪರಾಶರನು ರಚಿಸಿದನು. ಎಲೈ ಋಷಿಶ್ರೇಷ್ಠರೇ, ವಸಿಷ್ಠ ಕುಲೋತ್ಪನ್ನರಾದವರ ಮಹಿಮೆಯು, ಇಂಥಾದ್ದು ಎಂದು ಎಲ್ಲವನ್ನೂ ಶಕ್ತಿಪುತ್ರನಾದ ಪರಾಶರ ಮಹಿಮೆಯನ್ನೂ ವಿವರಿಸಿದ್ದೇನೆ.

ಇಲ್ಲಿಗೆ ಶ್ರೀಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ವಸಿಷ್ಠರ ವಂಶ ವಿಚಾರ ಎಂಬ ಅರವತ್ತುನಾಲ್ಕನೆಯ ಅಧ್ಯಾಯವು ಮುಗಿದುದು.



## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಪಂಚಷಷ್ಟಿತಮೋಽಧ್ಯಾಯಃ

॥ ಋಷಯ ಊಚುಃ ॥

ಆದಿತ್ಯವಂಶಂ ಸೋಮಸ್ಯ ವಂಶಂ ವಂಶ ವಿದಾಂ ವರ ।
ವಕ್ತುಮರ್ಹಸಿ ಚಾಸ್ಮಾಕಂ ಸಂಕ್ಷೇಪಾ ದ್ರೋಮ ಹರ್ಷಣಂ॥ ೧ ॥

॥ ಸೂತ ಉವಾಚ ॥

ಅದಿತಿಃ ಸುಷುವೇ ಪುತ್ರ ಮಾದಿತ್ಯಂ ಕಶ್ಯಪಾತ್ ದ್ವಿಜಾಃ ।
ತಸ್ಯಾದಿತ್ಯಸ್ಯ ಚೈವಾಸೀದ್ಭಾರ್ಯಾ ತ್ರಯ ಮಥಾಪರಂ ॥ ೨ ॥
ಸಂಜ್ಞಾ ರಾಜ್ಞೀ ಪ್ರಭಾ ಛಾಯಾ ಪುತ್ರಾ ಸ್ತಾಸಾಂ ವದಾಮಿ ವಃ ।
ಸಂಜ್ಞಾ ತ್ವಾಷ್ಟ್ರೀ ಚ ಸುಷುವೇ ಸೂರ್ಯಾನ್ಮನು ಮನುತ್ತಮಂ॥ ೩ ॥

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಅರವತ್ತೈದನೆಯ ಅಧ್ಯಾಯವು

೧. ಋಷಿಗಳು ಹೇಳಿದರು: ವಂಶಗಳನ್ನು ತಿಳಿದಿರುವವರಲ್ಲಿ ಶ್ರೇಷ್ಠನಾದ ಸೂತಮಹರ್ಷಿಯೇ, ರೋಮಾಂಚವನ್ನುಂಟುಮಾಡುವ ಸೂರ್ಯನ ವಂಶವನ್ನೂ, ಚಂದ್ರನ ವಂಶವನ್ನೂ ತಾವು ದಯವಿಟ್ಟು ನಮಗೆ ಸಂಕ್ಷೇಪವಾಗಿ ತಿಳಿಸಬೇಕು.

೨–೪. ಸೂತನು ಹೇಳಿದನು: ಎಲೈ ಬ್ರಾಹ್ಮಣರೇ, ಅದಿತಿಯು ಆದಿತ್ಯನೆಂಬ ಮಗನನ್ನು ಪಡೆದಳು. ಆ ಆದಿತ್ಯನಿಗೆ 'ಸಂಜ್ಞಾ' ಎಂಬ ಮುಖ್ಯಪತ್ನಿಯೂ, ರಾಜ್ಞೀ, ಪ್ರಭೆ, ಛಾಯೆ, ಎಂದು ಮೂರು ಜನ ಬೇರೆ ಹೆಂಡಿತಿಯರೂ ಇದ್ದರು. ಅವರ ಮಕ್ಕಳ ವಿಷಯವನ್ನು ಹೇಳುತ್ತೇನೆ, ಕೇಳಿರಿ. ತ್ವಷ್ಟೃವಿನ ಮಗಳಾದ ಸಂಜ್ಞಾ ಎಂಬುವಳು ಸೂರ್ಯನಿಂದ ಶ್ರೇಷ್ಠನಾದ ಮನುವೆಂಬ ಮಗನನ್ನು ಪಡೆದಳು. ರಾಜ್ಞಿಯು ಯಮ

ಯಮಂ ಚ ಯಮುನಾಂ ಚೈವ ರಾಜ್ಞೀ ರೇವತ ಮೇವಚ ।
ಪ್ರಭಾ ಪ್ರಭಾತ ಮಾದಿತ್ಯಾ ಚ್ಛಾಯಾಂ ಸಂಜ್ಞಾ ಪ್ಯಕಲ್ಪಯತ್॥
ಛಾಯಾ ಚ ತಸ್ಮಾತ್ಸುಷುವೇ ಸಾವರ್ಣೀಂ ಭಾಸ್ಕರಾ ದ್ದ್ವಿಜಾಃ ।
ತತಃ ಶನಿಂ ಚ ತಪತೀಂ ವಿಷ್ಟಿಂ ಚೈವ ಯಥಾ ಕ್ರಮಂ ॥ ೫ ॥
ಛಾಯಾ ಸ್ವಪುತ್ರ(ಭ್ಯ) ದಧಿಕಂ ಸ್ನೇಹಂ ಚಕ್ರೇ ಮ ನೌ ತದಾ ।
ಪೂರ್ವೋ ಮನು ರ್ನ ಚಕ್ಷಾಮ ಯಮುಸ್ತು ಕ್ರೋಧ ಮೂರ್ಛಿತಃ॥
ಸಂತಾಡಯಾಮಾಸ ರುಷಾ ಪಾದ ಮುದ್ಯಮ್ಯ ದಕ್ಷಿಣಂ ।
ಯಮೇನ ತಾಡಿತಾ ಸಾ ತು ಛಾಯಾ ವೈ ದುಃಖಿತಾ ಭವತ್॥ ೭ ॥
ಛಾಯಾ ಶಾಪಾ ತ್ಪದಂ ಚೈಕಂ ಯಮಸ್ಯ ಕ್ಲಿನ್ನ ಮುತ್ತಮಂ ।
ಪೂಯಶೋಣಿತ ಸಂಪೂರ್ಣಂ ಕ್ರಿಮೀಣಾಂ ನಿಚಯಾನ್ವಿತಂ ॥ ೮ ॥

---

ನನ್ನೂ, ಯಮುನೆಯನ್ನೂ ಪಡೆದಳು. ಪ್ರಭೆಯು ರೈವತನನ್ನು ಪಡೆದಳು. ಛಾಯೆಯು ಪ್ರಭಾತನನ್ನು ಪಡೆದಳು.

೫–೭. ಎಲೈ ಬ್ರಾಹ್ಮಣರೇ, ಸೂರ್ಯನಿಂದ ಸಂಜ್ಞೆಯು ಛಾಯಾ, ಎಂಬುವಳನ್ನೂ, ಮತ್ತು ಸಾವರ್ಣೀ, ಎಂಬುವಳನ್ನೂ ಪಡೆದಳು. ಅನಂತರದಲ್ಲಿ ಅವಳು ಶನಿಯನ್ನೂ, ತಪತಿಯನ್ನೂ, ವಿಷ್ಟಿ, ಎಂಬುವಳನ್ನೂ, ಕ್ರಮವಾಗಿ ಪಡೆದಳು. ಛಾಯೆಯು ತನ್ನ ಮಗನಿಗಿಂತಲೂ ಮನುವಿನಲ್ಲಿ ವಿಶೇಷವಾದ ಪ್ರೀತಿಯನ್ನು ತೋರಿಸಿದಳು. ಮೊದಲನೆಯ ಮನುವು ಇದನ್ನು ಕಂಡು ಸಹಿಸಲಿಲ್ಲ. ಯಮನು ಕೋಪದಿಂದ ಕಿಡಿಕಿಡಿಯಾದನು. ಅವನು ತನ್ನ ಬಲಗಾಲಿನಿಂದ ಅವಳನ್ನು ಹೊಡೆದನು. ಯಮನಿಂದ ಹೊಡೆಯಲ್ಪಟ್ಟ ಛಾಯೆಯು ಬಹಳ ಸಂಕಟಪಟ್ಟಳು.

೮–೧೦. ಛಾಯೆಯ ಶಾಪದಿಂದ ಯಮನ ಒಂದು ಉತ್ತಮವಾದ ಕಾಲು ಯಾವಾಗಲೂ ಜಿನಗತಕ್ಕದ್ದಾಗಿಯೂ, ಕೊಳತು ಕೆಟ್ಟ ರಕ್ತದಿಂದ ಪೂರ್ಣವಾಗಿಯೂ, ಕ್ರಿಮಿಗಳಿಗೆ ಯಾವಾಗಲೂ ವಾಸ

ಸೋಽಪಿ ಗೋಕರ್ಣಮಾಶ್ರಿತ್ಯ ಫಲ ಕೇನಾನಿಲಾಶನಃ ।
ಆರಾಧಯನ್ಮಹಾದೇವಂ ಯಾವದ್ವರ್ಷಾಯುತಾ ಯುತಂ ॥ ೯ ॥

ಭವ ಪ್ರಸಾದಾ ದಾಗತ್ಯ ಲೋಕಪಾಲತ್ವ ಮುತ್ತಮಂ ।
ಪಿತೃಣಾ ಮಾಧಿಪತ್ಯಂ ತು ಶಾಪಮೋಕ್ಷಂ ತಥೈವ ಚ ॥೧೦॥

ಲಬ್ಧವಾನ್ದೇವ ದೇವಸ್ಯ ಪ್ರಭಾವಾ ಚ್ಛೂಲ ಪಾಣಿನಃ ।
ಅಸಂಹತೀ ಪುರಾ ಭಾನೋ ಸ್ತೇಜೋಮಯ ಮನಿಂದಿತಾ ॥೧೧॥

ರೂಪಂ ತ್ವಾಷ್ಟ್ರೀ ಸ್ವದೇಹಾತ್ತು ಛಾಯಾಖ್ಯಾಂ ಸಾ ತ್ವಕಲ್ಪಯತ್ ।
ವಡವಾ ರೂಪ ಮಾಸ್ಥಾಯ ತಪಸ್ತೇಪೇ ತು ಸುವ್ರತ ॥೧೨॥

ಕಾಲಾತ್ಪ್ರಯತ್ನತೋ ಜ್ಞಾತ್ವಾ ಛಾಯಾಂ ಛಾಯಾಪತಿಃ ಪ್ರಭುಃ ।
ವಡವಾ ಮಗ ಮತ್ಸಂಜ್ಞಾ ಮಶ್ವರೂಪೇಣ ಭಾಸ್ಕರಃ ॥೧೩ ॥

---

ಮಾಡುವ ಹಾಗೂ ಆಯಿತು. ಆದ್ದರಿಂದ ಯಮನು ಗೋಕರ್ಣಕ್ಕೆ ಬಂದು ಇನ್ನೂರು ವರ್ಷಗಳ ಕಾಲ ಫಲದಿಂದ ಗಾಳಿಯನ್ನು ಮಾತ್ರ ಸೇವಿಸುತ್ತಾ ಮಹಾದೇವನನ್ನು ಆರಾಧಿಸಿದನು. ಈಶ್ವರನ ಅನುಗ್ರಹದಿಂದ ಇವನು ಉತ್ತಮನಾದ ಲೋಕಪಾಲನಾದನು. ಇವನು ಪಿತೃದೇವತೆಗಳಿಗೆ ಅಧಿಪತಿಯೂ ಆದನು. ಮತ್ತು ಛಾಯಾಶಾಪದಿಂದ ಬಿಡುಗಡೆಯನ್ನೂ ಹೊಂದಿದನು.

೧೧–೧೩. ಪರಮೇಶ್ವರನಾದ ಶಿವನ ಪ್ರಸಾದದಿಂದ ತ್ವಾಷ್ಟ್ರಿಯು ತೇಜಸ್ವಿಯಾದ ಸೂರ್ಯಪ್ರಭೆಯನ್ನು ಸಹಿಸಲಾರದೆ ತನ್ನ ದೇಹದಿಂದ ಛಾಯಾ, ಎಂಬುವಳನ್ನು ಸೃಜಿಸಿದಳು. ಆಗ ಅವಳು ಬಡಬಾಗ್ನಿಯ ರೂಪವನ್ನು ತಾಳಿ ತಪಸ್ಸನ್ನು ಆಚರಿಸಿದಳು. ಛಾಯಾಪತಿಯಾದ ಸೂರ್ಯನು, ಕೆಲವು ಕಾಲದ ಮೇಲೆ ಛಾಯೆಯು ತಪಸ್ಸನ್ನು ಮಾಡುತ್ತಿರುವುದನ್ನು ತಿಳಿದು ಕುದುರೆಯ ರೂಪದಿಂದ ಬಡಬಾಗ್ನಿಯೊಡನೆ ಪ್ರವೇಶಿಸಿದನು.

ವಡವಾಚ ತದಾ ತ್ವಾಷ್ಟ್ರೀ ಸಂಜ್ಞಾ ತಸ್ಮಾದ್ದಿವಾಕರಂ ।
ಸುಷುವೇ ಚಾಶ್ವಿನೌ ದೇವೌ ದೇವಾನಾಂ ತು ಭಿಷಗ್ವರೌ ॥೧೪॥

ಲಿಖಿತೋ ಭಾಸ್ಕರಃ ಪಶ್ಚಾತ್ಸಂಜ್ಞಾ ಪಿತ್ರಾ ಮಹಾತ್ಮನಾ ।
ವಿಷ್ಣೋಶ್ಚಕ್ರಂ ತು ಯದ್ಘೋರಂ ಮಂಡಲಾದ್ಭಾಸ್ಕರಸ್ಯ ತು॥೧೫॥

ನಿರ್ಮಿತೋ ಭಗವಾಂ ಸ್ತ್ವಷ್ಟ್ರಾ ಪ್ರಧಾನಂ ದಿವ್ಯಮಾಯುಧಂ ।
ರುದ್ರಪ್ರಸಾದಾಚ್ಚ ಶುಭಂ ಸುದರ್ಶನ ಮಿತಿ ಸ್ಮೃತಂ ॥೧೬॥

ಲಬ್ಧವಾನ್ಭಗವಾನ್ ಚಕ್ರಂ ಕೃಷ್ಣಃ ಕಾಲಾಗ್ನಿ ಸನ್ನಿಭಂ ।
ಮನೋಸ್ತು ಪ್ರಥಮಸ್ಯಾಸ ನ್ನವ ಪುತ್ರಾಸ್ತು ತತ್ಸಮಾಃ ॥೧೭॥

ಇಕ್ಷ್ವಾಕುರ್ನಭಗಶ್ಚೈವ ಧೃಷ್ಣುಃ ಶರ್ಯಾತಿ ರೇವಚ ।
ನರಿಷ್ಯಂತ ಶ್ಚ ವೈ ಧೀಮಾನ್ ನಾಭಾಗೋಽರಿಷ್ಟ ಏವಚ ॥೧೮॥

ಕರೂಷಶ್ಚ ಪೃಷಧ್ರಶ್ಚ ನವೈತೇ ಮಾನವಾಃ ಸ್ಮೃತಾಃ ।
ಇಲಾ ಜ್ಯೇಷ್ಠಾ ವರಿಷ್ಠಾ ಚ ಪುಂಸ್ತ್ವಂ ಪ್ರಾಪ ಚ ಯಾ ಪುರಾ ॥

---

೧೪–೧೬. ಆಗ ತ್ವಷ್ಟ್ರುವಿನ ಮಗಳಾದ ಬಡವಾ ರೂಪದಿಂದಿದ್ದ ಸಂಜ್ಞೆಯು ಸೂರ್ಯನಿಂದ ವೈದ್ಯಶ್ರೇಷ್ಠರಾದ ಅಶ್ವಿನೀ ಕುಮಾರರನ್ನೂ, ಪಡೆದಳು. ಆಗ ಸಂಜ್ಞೆಯ ತಂದೆಯೂ, ಮಹಾತ್ಮನೂ, ಆದ ತ್ವಷ್ಟ್ರುವು ಸೂರ್ಯಮಂಡಲವನ್ನು ರಾಟೆಯುಲ್ಲಿಟ್ಟು ತಿರುಗಿಸಿ ತೇಜಸ್ಸನ್ನು ಕಡಿಮೆ ಮಾಡಿ ಚಕ್ರವನ್ನೂ, ನಿರ್ಮಾಣ ಮಾಡಿದನು. ರುದ್ರನ ಅನುಗ್ರಹದಿಂದ ಈ ಮಂಗಳಕರವಾದ ವಿಷ್ಣುಚಕ್ರವು ಸೃಷ್ಟಿಯಾದ್ದರಿಂದ ಇದಕ್ಕೆ "ಸುದರ್ಶನ" ಎಂದು ಹೆಸರು ಬಂದಿತು. ಈ ಕಥೆಯನ್ನು ಮಾರ್ಕಂಡೇಯ ಪುರಾಣದಲ್ಲಿ ವಿವರಿಸಿದೆ.

೧೭–೧೯. ಕಾಲಾಗ್ನಿಗೆ ಸಮಾನವಾದ ಸುದರ್ಶನ ಚಕ್ರವನ್ನು ಪೂಜ್ಯನಾದ ಶ್ರೀ ಕೃಷ್ಣನು ಹೊಂದಿದನು. ಮೊದಲನೆಯ ಮನುವಿಗೆ, ತಂದೆಗೆ ಸಮಾನರಾದ ಒಂಬತ್ತು ಮಕ್ಕಳಾದರು. ಇಕ್ಷ್ವಾಕು, ನಭಗ, ಧೃಷ್ಣು, ಶರ್ಯಾತಿ, ನರಿಷ್ಯಂತ, ನಾಭಾಗ, ಅರಿಷ್ಟ, ಕರೂಷ, ಪೃಷಧ್ರ, ಎಂಬುವರೇ ಮನುವಿನ ಆ ಒಂಬತ್ತು ಮಕ್ಕಳು. ಹಿರಿಯಳೂ, ಶ್ರೇಷ್ಠಳೂ ಆಗಿದ್ದ ಇಲಾ, ಎಂಬುವಳು ವಸಿಷ್ಠನ ಪ್ರಸಾದದಿಂದ ಪುರುಷ ಭಾವವನ್ನು ಹೊಂದಿದಳು.

ಸದ್ಯುಮ್ನ ಇತಿ ವಿಖ್ಯಾತಾ ಪುಂಸ್ತ್ವಂ ಪ್ರಾಪ್ತಾ ತ್ವಿಲಾ ಪುರಾ ।
ಮಿತ್ರಾ ವರುಣಯೋ ಸ್ತತ್ರ ಪ್ರಸಾದಾ ನ್ಮುನಿ ಪುಂಗವಾಃ ॥೨೦॥

ಪುನಃ ಶರವಣಂ ಪ್ರಾಪ್ಯ ಸ್ತ್ರೀತ್ವಂ ಪ್ರಾಪ್ತೋ ಭವಾಜ್ಞಯಾ ।
ಸುದ್ಯುಮ್ನೋ ಮಾನವಃ ಶ್ರೀಮಾ ನ್ಸೋಮ ವಂಶ ಪ್ರವೃದ್ಧಯೇ ॥

ಇಕ್ಷ್ವಾಕೋರಶ್ವ ಮೇಧೇನ ಇಲಾ ಕಿಂಪುರುಷೋಽಭವತ್ ।
ಇಲಾ ಕಿಂಪುರುಷತ್ವೇಚ ಸುದ್ಯುಮ್ನ ಇತಿ ಚೋಚ್ಯತೇ ॥೨೨॥

ಮಾಸಮೇಕಂ ಪುಮಾನ್ವೀರಃ ಸ್ತ್ರೀತ್ವಂ ಮಾಸ ಮಭೂತ್ಪುನಃ ।
ಇಲಾ ಬುಧಸ್ಯ ಭವನಂ ಸೋಮಪುತ್ರಸ್ಯ ಚಾಶ್ರಿತಾ ॥೨೩॥

ಬುಧೇನಾಂತರ ಮಾಸಾದ್ಯ ಮೈಥುನಾಯ ಪ್ರವರ್ತಿತಾ ।
ಸೋಮ ಪುತ್ರಾದ್ಬುಧಾ ಚ್ಚಾಪಿ ಐಲೋ ಜಜ್ಞೇ ಪುರೂರವಾಃ ॥

---

೨೦. ಎಲೈ ಋಷಿಶ್ರೇಷ್ಠರೇ, ಇಲೆಯು ವಸಿಷ್ಠನ ಅನುಗ್ರಹದಿಂದ ಪುರುಷ ಭಾವವನ್ನು ಹೊಂದಿ ಸುದ್ಯುಮ್ನ ಎಂದು ಪ್ರಸಿದ್ಧಿಪಡೆದು ಮಿತ್ರಾ ವರುಣರ ಅನುಗ್ರಹದಿಂದ ಮಕ್ಕಳನ್ನು ಪಡೆದುದಾಯಿತು.

೨೧. ಈಶ್ವರನ ಆಜ್ಞೆಯಿಂದ ಸುದ್ಯುಮ್ನನು ಶರವಣ ಎಂಬ ಕಾಡನ್ನು ಪ್ರವೇಶಿಸಿ ಸ್ತ್ರೀಭಾವವನ್ನು ವಂಶಾಭಿವೃದ್ಧಿಗಾಗಿ ಹೊಂದಿದನು. ಈ ಕಥೆಯನ್ನು ಭಾಗವತದಲ್ಲಿ ವಿವರಿಸಲಾಗಿದೆ.

೨೨. ಇಕ್ಷ್ವಾಕುವು ಅಶ್ವಮೇಧಯಾಗವನ್ನು ಮಾಡಿದ್ದರಿಂದ ಇಲೆಯು ಕಿಂಪುರುಷ ಎಂಬ ದೇವತೆಯಾದನು. ಇಲೆಯು ಕಿಂಪುರುಷ ನಾಗಿರುವಾಗ ಸುದ್ಯುಮ್ನ ಎನ್ನಿಸಿಕೊಳ್ಳುತ್ತಾನೆ.

೨೩–೨೪. ಒಂದು ತಿಂಗಳು ಗಂಡಸೂ ಶೂರನೂ ಆಗಿ ಈ ಸುದ್ಯುಮ್ನನು • ಒಂದು ತಿಂಗಳು ಹೆಂಗಸಾಗುತ್ತಾ ಇದ್ದನು. ಈ ಇಲೆಯು ಚಂದ್ರನ ಮಗನಾದ ಬುಧನ ಮನೆಯನ್ನು ಹೊಕ್ಕಳು. ಅಲ್ಲಿ ಇವಳು ಅವನ ಸಂಬಂಧ ಮಾಡಿದಳು. ಈ ಬುಧ ಮತ್ತು ಇಲಾ ಇವರ ಸಂಬಂಧದಿಂದ ಪುರೂರವಸ್ಸು ಹುಟ್ಟಿದನು.

ಸೋಮ ವಂಶಾಗ್ರಜೋ ಧೀಮಾನ್ ಭವಭಕ್ತಃ ಪ್ರತಾಪವಾನ್ ।
ಇಕ್ಷ್ವಾಕೋರ್ವಂಶ ವಿಸ್ತಾರಂ ಪಶ್ಚಾದ್ವಕ್ಷ್ಯೇ ತಪೋಧನಾಃ ॥೨೫॥

ಪುತ್ರತ್ರಯ ಮಭೂತ್ತಸ್ಯ ಸುದ್ಯುಮ್ನಸ್ಯ ದ್ವಿಜೋತ್ತಮಾಃ ।
ಉತ್ಕಲಶ್ಚ ಗಯಶ್ಚೈವ ವಿನತಾಶ್ವ ಸ್ತಥೈವಚ ॥೨೬॥

ಉತ್ಕಲ ಸ್ಯೋತ್ಕಲಂ ರಾಷ್ಟ್ರಂ ವಿನತಾಶ್ವಸ್ಯ ಪಶ್ಚಿಮಂ ।
ಗಯಾ ಗಯಸ್ಯ ಚಾಖ್ಯಾತಾ ಪುರೀ ಪರಮ ಶೋಭನಾ ॥೨೭॥

ಸುರಾಣಾಂ ಸಂಸ್ಥಿತಿರ್ಯಸ್ಯಾಂ ಪಿತೃಣಾಂ ಚ ಸದಾ ಸ್ಥಿತಿಃ ।
ಇಕ್ಷ್ವಾಕು ಜ್ಯೇಷ್ಠ ದಾಯಾದೋ ಮಧ್ಯದೇಶ ಮವಾಪ್ತವಾನ್ ॥

ಕನ್ಯಾಭಾವಾಚ್ಚ ಸುದ್ಯುಮ್ನೋ ನೈವ ಭಾಗ ಮ ವಾಪ್ತವಾನ್ ।
ವಸಿಷ್ಠ ವಚನಾತ್ತ್ವಾಸೀತ್ ಪ್ರತಿಷ್ಠಾನೇ ಮಹಾದ್ಯುತಿಃ ॥೨೯॥

---

೨೫. ಪುರೂರವಸ್ಸು ಸೋಮವಂಶದಲ್ಲಿ ಹುಟ್ಟಿದವರಲ್ಲಿ ಶ್ರೇಷ್ಠ ನೂ, ಮಹಾಮೇಧಾವಿಯೂ, ಈಶ್ವರಾರಾಧಕನೂ, ಶೂರನೂ ಆಗಿದ್ದನು. ಎಲೈ ತಪಸ್ವಿಗಳೇ, ಇಕ್ಷ್ವಾಕು ವಂಶ ಬೆಳೆದುದನ್ನು ಮುಂದೆ ವಿವರಿಸು ವೆನು.

೨೬-೨೮. ಎಲೈ ಬ್ರಾಹ್ಮಣ ಶ್ರೇಷ್ಠರೇ, ಸುದ್ಯುಮ್ನನಿಗೆ ಮೂರು ಜನ ಮಕ್ಕಳಿದ್ದರು. ಉತ್ಕಲ, ಗಯ, ವಿನತ, ಎಂಬುವರೇ ಆ ಮಕ್ಕಳು. ಉತ್ಕಲನು ಉತ್ಕಲದೇಶಕ್ಕೆ ಅಧಿಪತಿಯಾಗಿಯೂ, ವಿನತಾಶ್ವನು ಪಶ್ಚಿಮ ದೇಶಕ್ಕೆ ಅಧಿಪತಿಯಾಗಿಯೂ, ಗಯನು ಗಯಾ ಎಂಬ ದೇಶಕ್ಕೆ ಅಧಿ ಪತಿಯಾಗಿಯೂ, ಇದ್ದರು. ಇಕ್ಷ್ವಾಕು ವಂಶದ ಜ್ಯೇಷ್ಠಪುತ್ರನು ಮಧ್ಯ ದೇಶಕ್ಕೆ ಅಧಿಪತಿಯಾಗಿದ್ದನು. ಇಲ್ಲಿ ದೇವತೆಗಳೂ, ಪಿತೃದೇವತೆಗಳೂ, ಯಾವಾಗಲೂ ನೆಲೆಸಿ ಇರುತ್ತಿದ್ದರು.

೨೯-೩೦. ಸುದ್ಯುಮ್ನನು ಸ್ತ್ರೀಭಾವವನ್ನು ಹೊಂದಿದ್ದುದರಿಂದ ಅವ ನಿಗೆ ರಾಜ್ಯಭಾಗವಿರಲಿಲ್ಲ. ಆದರೆ ವಸಿಷ್ಠನ ಮಾತಿನ ಮೇಲೆ ತೇಜಸ್ವಿಯಾದ

ಪ್ರತಿಷ್ಠಾ ಧರ್ಮರಾಜಸ್ಯ ಸುದ್ಯುಮ್ನಸ್ಯ ಮಹಾತ್ಮನಃ ।
ತತ್ಪುರೂರವಸೇ ಪ್ರಾದಾ ದ್ರಾಜ್ಯಂ ಪ್ರಾಪ್ಯ ಮಹಾಯಶಾಃ ॥೩೦॥

ಮಾನವೇಯೋ ಮಹಾಭಾಗಃ ಸ್ತ್ರೀಪುಂಸೋ ರ್ಲಕ್ಷಣಾನ್ವಿತಃ ।
ಇಕ್ಷ್ವಾಕೋರಭವ ದ್ವೀರೋ ವಿಕುಕ್ಷಿರ್ಧರ್ಮ ವಿತ್ತಮಃ ॥೩೧॥

ಜ್ಯೇಷ್ಠಃ ಪುತ್ರ ಶತಸ್ಯಾಸೀದ್ದಶ ಪಂಚ ಚ ತತ್ಸುತಾಃ ।
ಆಭೂ ಜ್ಜ್ಯೇಷ್ಠಃ ಕಕುತ್ಸ್ಥಶ್ಚ ಕಕುತ್ಸ್ಥಾತ್ತು ಸುಯೋಧನಃ ॥೩೨॥

ತತಃ ಪೃಥುರ್ಮುನಿ ಶ್ರೇಷ್ಠಾ ವಿಶ್ವಕಃ ಪಾರ್ಥಿವ ಸ್ತಥಾ ।
ವಿಶ್ವಕಸ್ಯಾರ್ದ್ರಕೋ ಧೀಮಾ ನ್ಯುವನಾಶ್ವಸ್ತು ತತ್ಸುತಃ ॥೩೩॥

ಶಾಬಸ್ತಿಶ್ಚ ಮಹಾತೇಜಾ ವಂಶಕಸ್ತು ತತೋಽಭವತ್ ।
ನಿರ್ಮಿತಾ ಯೇನ ಶಾಬಸ್ತೀ ಗೌಡದೇಶೇ ದ್ವಿಜೋತ್ತಮಾಃ ॥೩೪॥

---

ಸುದ್ಯುಮ್ನನು ಪ್ರತಿಷ್ಠಾನ ಪುರದಲ್ಲಿದ್ದನು. ಮಹಾತ್ಮನೂ, ಮತ್ತು ಧಾರ್ಮಿಕನೂ ಆದ ಸುದ್ಯುಮ್ನನು ತಾನು ವಾಸವಾಗಿದ್ದ ಪ್ರತಿಷ್ಠಾನ ರಾಜ್ಯವನ್ನು ಪುರೂರವಸ್ಸಿಗೆ ಕೊಟ್ಟನು.

೩೧. ಸ್ತ್ರೀಪುರುಷ ಇಬ್ಬರ ಲಕ್ಷಣಗಳಿಂದಲೂ ಕೂಡಿದ, ಮನುವಂಶ ಶ್ರೇಷ್ಠನೂ, ಮಹಾಪುಣ್ಯಶಾಲಿಯೂ, ಧಾರ್ಮಿಕನೂ ಆದ "ವಿಕುಕ್ಷಿ" ಎಂಬ ಇಕ್ಷ್ವಾಕುವಿನ ಮಗನು ಶೂರನಾಗಿದ್ದನು.

೩೨. ವಿಕುಕ್ಷಿಯು ನೂರು ಮಕ್ಕಳುಳ್ಳ ಅವನ ತಂದೆಗೆ ಹಿರಿಯ ಮಗನಾಗಿದ್ದನು. ಈ ವಿಕುಕ್ಷಿಗೆ ಹದಿನೈದು ಜನ ಮಕ್ಕಳಿದ್ದರು. ಎಲ್ಲರಿಗೂ ಹಿರಿಯವನು ಕಕುತ್ಸ್ಥನೆಂಬುವನು. ಆತನಿಂದ ಸುಯೋಧನನು, ಹುಟ್ಟಿದನು. ಎಂದು ತಿಳಿಯಬೇಕು.

೩೩–೩೪. ಎಲೈ ಋಷಿಶ್ರೇಷ್ಠರೇ, ವಿಕುಕ್ಷಿಯಿಂದ ಪೃಥುವೂ, ಅವನಿಂದ ವಿಶ್ವಕನೆಂಬ ಪೃಥುಪುತ್ರನೂ ಹುಟ್ಟಿದರೆಂದು ತಿಳಿಯಿರಿ. ವಿಶ್ವಕನಿಗೆ ಆರ್ದ್ರಕನೆಂಬ ಮಗನೂ, ಆರ್ದ್ರಕನಿಗೆ ಯುವನಾಶ್ವನೆಂಬ ಮಗನೂ, ಇದ್ದರು. ಅಲ್ಲದೇ ಅವನಿಂದ ಮಹಾತೇಜಸ್ವಿಯಾದ ಶಾಬಸ್ತಿಯೂ, ಅವನಿಂದ ವಂಶಕನೂ ಹುಟ್ಟಿದರು. ಎಲೈ

ವಂಶಾಚ್ಚ ಬೃಹದಶ್ವೋಽಭೂತ್ ಕುವಲಾಶ್ವಸ್ತು ತತ್ಸುತಃ ।
ಧುಂಧು ಮಾರತ್ವ ಮಾಪನ್ನೋ ಧುಂಧುಂಹತ್ವಾ ಮಹಾಬಲಂ॥ ೩೫॥

ಧುಂಧು ಮಾರಸ್ಯ ತನಯಾ ಸ್ತ್ರಯ ಸ್ತ್ರೈಲೋಕ್ಯ ವಿಶ್ರುತಾಃ ।
ದೃಢಾಶ್ವ ಶ್ಚೈವ ಚಂಡಾಶ್ವಃ ಕಪಿಲಾಶ್ವಶ್ಚ ತೇ ಸ್ಮೃತಾಃ ॥೩೬॥

ದೃಢಾಶ್ವಸ್ಯ ಪ್ರಮೋದಸ್ತು ಹರ್ಯಶ್ವಸ್ತಸ್ಯ ವೈ ಸ್ಮೃತಃ ।
ಹರ್ಯಶ್ವಸ್ಯ ನಿಕುಂಭಸ್ತು ಸಂಹತಾಶ್ವಸ್ತು ತತ್ಸುತಃ ॥೩೭॥

ಕೃಶಾಶ್ವೋಽಥ ರಣಾಶ್ವಶ್ಚ ಸಂಹತಾಶ್ವಾತ್ಮಜಾ ವುಭೌ ।
ಯುವನಾಶ್ವೋ ರಣಾಶ್ವಸ್ಯ ಮಾಂಧಾತಾ ತಸ್ಯ ವೈ ಸುತಃ ॥೩೮॥

ಮಾಂಧಾತುಃ ಪುರು ಕುತ್ಸೋಽಭೂ ದಂಬರೀಷಶ್ಚ ವೀರ್ಯವಾನ್ ।
ಮುಚುಕುಂದಶ್ಚ ಪುಣ್ಯಾತ್ಮಾ ತ್ರಯಸ್ತ್ರೈಲೋಕ್ಯ ವಿಶ್ರುತಾಃ ॥

---

ಬ್ರಾಹ್ಮಣ ಶ್ರೇಷ್ಠರೇ, ಶಾಬಸ್ತಿಯು ಗೌಡದೇಶದಲ್ಲಿ ಶಾಬಸ್ತಿ, ಎಂಬ ನಗರವನ್ನು ಕಟ್ಟಿದನು. ವಂಶಕನಿಗೆ ಬೃಹದಶ್ವನೆಂಬ ಮಗನಿದ್ದನು. ಬೃಹದಶ್ವನಿಗೆ ಕುವಲಾಶ್ವನು ಮಗನು. ಕುವಲಾಶ್ವನು ಧುಂಧು ಎಂಬ ಬಲಿಷ್ಠನಾದ ಶತ್ರುವನ್ನು ಸಂಹಾರಮಾಡಿ, ಧುಂಧುಮಾರ, ಎಂದು ಪ್ರಸಿದ್ಧನಾದನು.

೩೬. ಧುಂಧುಮಾರನಿಗೆ ಮೂರುಲೋಕದಲ್ಲಿಯೂ ಪ್ರಸಿದ್ಧರಾದ ಮೂರು ಜನ ಮಕ್ಕಳಿದ್ದರು. ದೃಢಾಶ್ವ, ಚಂಡಾಶ್ವ, ಮತ್ತು ಕಪಿಲಾಶ್ವ, ಎಂಬುವರೇ ಆ ಮೂರುಮಕ್ಕಳು.

೩೭. ದೃಢಾಶ್ವನಿಗೆ ಪ್ರಮೋದನೆಂಬ ಮಗನೂ, ಪ್ರಮೋದನಿಗೆ ಹರ್ಯಶ್ವನೂ, ಹರ್ಯಶ್ವನಿಗೆ ನಿಕುಂಭನೂ, ನಿಕುಂಭನಿಗೆ ಸಂಹತಾಶ್ವನೂ, ಮಕ್ಕಳಾಗಿದ್ದರು.

೩೮–೩೯. ಸಂಹತಾಶ್ವನಿಗೆ ಕೃಶಾಶ್ವ, ಮತ್ತು ರಣಾಶ್ವ, ಎಂಬಿಬ್ಬರು ಮಕ್ಕಳಿದ್ದರು. ರಣಾಶ್ವನಿಗೆ ಯುವನಾಶ್ವನೂ, ಯುವನಾಶ್ವನಿಗೆ ಮಾಂಧಾತೃವೂ, ಮಕ್ಕಳಾಗಿದ್ದರು. ಮಾಂಧಾತೃವಿಗೆ ಪುರುಕುತ್ಸನೂ, ಶೂರನಾದ ಅಂಬರೀಷನೂ, ಮತ್ತು ಪುಣ್ಯಶಾಲಿಯಾದ ಮುಚುಕುಂದನೂ, ಮೂವರು ಮಕ್ಕಳಾಗಿ, ಮೂರು ಲೋಕದಲ್ಲಿಯೂ ಪ್ರಸಿದ್ಧರಾಗಿದ್ದರು.

ಅಂಬರೀಷಸ್ಯ ದಾಯಾದೋ ಯುವನಾಶ್ವೋಽಪರಃ ಸ್ಮೃತಃ ।
ಹರಿತೋ ಯುವನಾಶ್ವಸ್ಯ ಹರಿತಾಸ್ತು ಯತಃ ಸ್ಮೃತಾಃ ॥೪೦॥

ಏತೇ ಹ್ಯಂಗಿರಸಃ ಪಕ್ಷೇ ಕ್ಷತ್ರೋಪೇತಾ ದ್ವಿಜಾತಯಃ ।
ಪುರುಕುತ್ಸಸ್ಯ ದಾಯಾದಃ ತ್ರಸದ್ದಸ್ಯುರ್ಮಹಾಯಶಾಃ ॥೪೧॥

ನರ್ಮದಾಯಾಂ ಸಮುತ್ಪನ್ನಃ ಸಂಭೂತಿಸ್ತಸ್ಯ ಚಾತ್ಮಜಃ ।
ವಿಷ್ಣುವೃದ್ಧಸ್ಸುತಸ್ತಸ್ಯ ವಿಷ್ಣುವೃದ್ಧಾಯತಃ ಸ್ಮೃತಾಃ ॥೪೨॥

ಏತೇ ಹ್ಯಂಗಿರಸಃ ಪಕ್ಷೇ ಕ್ಷತ್ರೋ ಪೇತಾಃ ಸಮಾಶ್ರಿತಾಃ ।
ಸಂಭೂತಿರಪರಂ ಪುತ್ರ ಮನರಣ್ಯ ಮಜೀಜನತ್ ॥೪೩॥

ರಾವಣೇನ ಹತೋ ಯೋಽಸೌ ತ್ರೈಲೋಕ್ಯ ವಿಜಯೇ ದ್ವಿಜಾಃ ।
ಬೃಹದಶ್ವೋಽನರಣ್ಯಸ್ಯ ಹರ್ಯಶ್ವಸ್ತಸ್ಯ ಚಾತ್ಮಜಃ ॥೪೪॥

---

೪೦. ಇನ್ನೊಬ್ಬ ಯುವನಾಶ್ವನೆಂಬ ಅಂಬರೀಷನ ಜ್ಞಾತಿ ಇದ್ದನು. ಯುವನಾಶ್ವನಿಗೆ ಹರಿತನೆಂಬ ಮಗನೂ, ಇವನ ವಂಶದವರಿಗೆ ಹಾರೀತ ಕರೆಂದೂ, ಹೆಸರು ಬಂದಿದೆ.

೪೧. ಇವರು ಅಂಗಿರಸ ಋಷಿಯ ಗೋತ್ರದ ಮತ್ತು ಕ್ಷತ್ರಿಯ ವಂಶದಿಂದ ಬಂದ ದ್ವಿಜರು. ಇವರಲ್ಲಿ ಕಳ್ಳರಿಗೆ ಭಯಂಕರನಾದ್ದರಿಂದ ತ್ರಸದ್ದಸ್ಯು, ಎಂಬುವನು ಬಹಳ ಕೀರ್ತಿವಂತನಾಗಿಯೂ, ಪುರುಕುತ್ಸನ ದಾಯಾದಿಯಾಗಿಯೂ ಇದ್ದನು.

೪೨. ತ್ರಸದ್ದಸ್ಯುವಿಗೆ ನರ್ಮದೆ ಎಂಬುವಳಲ್ಲಿ ಸಂಭೂತಿ ಎಂಬ ಮಗನು ಹುಟ್ಟಿದನು. ಸಂಭೂತಿಗೆ ವಿಷ್ಣುವೃದ್ಧನೆಂಬುವನು ಮಗನು. ಇವನ ವಂಶಸ್ಥರು ವಿಷ್ಣುವೃದ್ಧರೆಂದು ಕರೆಯಲ್ಪಡುತ್ತಾರೆ.

೪೩. ಇವರೂ ಕ್ಷತ್ರಿಯ ವಂಶದಿಂದ ಬಂದವರೂ, ಅಂಗಿರಸ ಗೋತ್ರದ ಬ್ರಾಹ್ಮಣರೂ ಆಗಿದ್ದರು. ಸಂಭೂತಿಯು ಅನರಣ್ಯನೆಂಬ ಮತ್ತೊಬ್ಬ ಮಗನನ್ನೂ ಪಡೆದನು.

೪೪. ಎಲೈ ಬ್ರಾಹ್ಮಣರೇ, ರಾವಣನು ಮೂರು ಲೋಕವನ್ನೂ ಜಯಿಸುವ ಕಾಲದಲ್ಲಿ ಈ ಅನರಣ್ಯನು ಅವನಿಂದ ನಾಶಮಾಡಲ್ಪಟ್ಟನು. ಅನರಣ್ಯನಿಗೆ ಬೃಹದಶ್ವನೆಂಬ ಮಗನೂ, ಬೃಹದಶ್ವನಿಗೆ ಹರ್ಯಶ್ವನೆಂಬ ಮಗನೂ ಇದ್ದರು.

ಹರ್ಯಶ್ವಾತ್ತು ದೃಷದ್ವತ್ಯಾಂ ಜಜ್ಞೇ ವಸುಮನಾ ನೃಪಃ ।
ತಸ್ಯ ಪುತ್ರೋಽಭವದ್ರಾಜಾ ತ್ರಿ ಧನ್ವಾ ಭವ ಭಾವಿತಃ ॥೪೫॥

ಪ್ರಸಾದಾದ್ಬ್ರಹ್ಮ ಸೂನೋರ್ವೈ ದಂಡಿನಃ ಪ್ರಾಪ್ಯ ಶಿಷ್ಯತಾಂ ।
ಅಶ್ವಮೇಧ ಸಹಸ್ರಸ್ಯ ಫಲಂ ಪ್ರಾಪ್ಯ ತದಾಜ್ಞಯಾ ॥೪೬॥

ಗಣೈಶ್ವರ್ಯ ಮನುಪ್ರಾಪ್ತೋ ಭವಭಕ್ತಃ ಪ್ರತಾಪವಾನ್ ।
ಕಥಂ ಚೈವಾಶ್ವಮೇಧಂ ವೈ ಕರೋಮೀತಿ ವಿಚಿಂತಯನ್ ॥೪೭॥

ಧನಹೀನಶ್ಚ ಧರ್ಮಾತ್ಮಾ ದೃಷ್ಟವಾನ್ ಬ್ರಹ್ಮಣಃ ಸುತಂ ।
ದಂಡಿ ಸಂಜ್ಞಂ ದ್ವಿಜಂ ತಸ್ಮಾಲ್ಲಬ್ಧವಾನ್ದ್ವಿಜ ಸತ್ತಮಾಃ ॥೪೮॥

ನಾಮ್ನಾಂ ಸಹಸ್ರಂ ರುದ್ರಸ್ಯ ಬ್ರಹ್ಮಣಾ ಕಥಿತಂ ಪುರಾ ।
ತೇನ ನಾಮ್ನಾಂ ಸಹಸ್ರೇಣ ಸ್ತುತ್ವಾದಂಡಿ ರ್ಮಹೇಶ್ವರಂ ॥೪೯॥

---

೪೫. ಹರ್ಯಶ್ವನಿಗೆ ದೃಷದ್ವತೀ ಎಂಬುವಳಲ್ಲಿ ವಸುಮನಾ ಎಂಬ ರಾಜಕುಮಾರನು ಹುಟ್ಟಿದನು. ವಸುಮನನ ಕುಮಾರನಾದ ತ್ರಿಧನ್ವ ನೆಂಬುವನು ಜಗತ್ತಿನಲ್ಲಿ ಶಿವಭಕ್ತನೆಂದು ಪ್ರಸಿದ್ಧನಾಗಿದ್ದನು.

೪೬–೪೮. ತ್ರಿಧನ್ವನು ಬ್ರಹ್ಮನ ಮಗನಾದ ದಂಡಿಯ ಶಿಷ್ಯನಾಗಿ ಇವನ ಅನುಗ್ರಹದಿಂದ ಮತ್ತು ಅಪ್ಪಣೆಯಂತೆ ಸಾವಿರ ಅಶ್ವಮೇಧ ಯಾಗಮಾಡಿ ಫಲವನ್ನು ಹೊಂದಿದನು. ಈಶ್ವರ ಭಕ್ತನೂ, ಮತ್ತು ತೇಜಸ್ವಿಯೂ ಆದ ತ್ರಿಧನ್ವನು ಹೆಚ್ಚಾದ ಐಶ್ವರ್ಯವನ್ನು ಗಳಿಸಿ ಅದರ ಮೂಲಕ ಅಶ್ವಮೇಧಯಾಗ ಮಾಡಲು ಇಚ್ಛೆಯುಳ್ಳವನಾಗಿದ್ದನು. ಎಲೈ ಬ್ರಾಹ್ಮಣರೇ, ಆದರೆ ಅವನ ಹತ್ತಿರ ಅದಕ್ಕೆ ಬೇಕಾಗುವಷ್ಟು ಹಣ ವಿರಲಿಲ್ಲ. ಆಗ ಧರ್ಮಾತ್ಮನಾದ ಇವನು ಸ್ವಕಾರ್ಯ ಸಿದ್ಧಿಗಾಗಿ ದಂಡಿ ಯೆಂಬ ಬ್ರಾಹ್ಮಣನನ್ನು ಆಶ್ರಯಿಸಿದನು.

೪೯–೫೧. ಬ್ರಾಹ್ಮಣ ಶ್ರೇಷ್ಠನಾದ ದಂಡಿಯು ಹಿಂದೆ ತನಗೆ ಬ್ರಹ್ಮನಿಂದ ಹೇಳಲ್ಪಟ್ಟಿದ್ದ ರುದ್ರನ ಸಾವಿರ ನಾಮಗಳನ್ನು ಜ್ಞಾಪಿಸಿ ಕೊಂಡು ಆ ನಾಮಸಹಸ್ರ ಪಾರಾಯಣದಿಂದ ಶಿವನನ್ನು ಸ್ತೋತ್ರ ಮಾಡಿ ಶಿವನ ಗಣಗಳಿಗೆ ಪತಿಯಾದನು. ಹಿಂದೆ ದಂಡಿಯು ಹೇಳಿದ್ದ ಅದೇ ಸಾವಿರ ನಾಮಗಳನ್ನು ಜಪಿಸಿ ತ್ರಿಧನ್ವನೂ, ಶಿವಗಣಗಳಿಗೆ ಪತಿ

ಲಬ್ಧವಾನ್ಗಾಣ ಪತ್ಯಂ ಚ ಬ್ರಹ್ಮಯೋನಿ ರ್ದ್ವಿಜೋತ್ತಮಃ ।
ತತಸ್ತಸ್ಮಾನ್ನೃಪೋಲಬ್ಧ್ವಾ ದಂಡಿನಾ ಕಥಿತಂ ಪುರಾ ॥೫೦॥
ನಾಮ್ನಾಂ ಸಹಸ್ರಂ ಜಪ್ತ್ವಾ ವೈ ಗಾಣಪತ್ಯ ಮವಾಪ್ತವಾನ್ ।

॥ ಋಷಯ ಊಚುಃ ॥

ನಾಮ್ನಾಂ ಸಹಸ್ರಂ ರುದ್ರಸ್ಯ ದಂಡಿನಾ ಬ್ರಹ್ಮಯೋನಿನಾ ॥೫೧॥
ಕಥಿತಂ ಸರ್ವವೇದಾರ್ಥ ಸಂಚಯಂ ಸೂತ ಸುವ್ರತ ।
ನಾಮ್ನಾಂ ಸಹಸ್ರಂ ವಿಪ್ರಾಣಾಂ ವಕ್ತು ಮರ್ಹಸಿ ಶೋಭನಂ॥೫೨॥

॥ ಸೂತ ಉವಾಚ ॥

ಸರ್ವಭೂತಾತ್ಮ ಭೂತಸ್ಯ ಹರಸ್ಯಾಮಿತತೇಜಸಃ ।
ಅಷ್ಟೋತ್ತರ ಸಹಸ್ರಂ ತು ನಾಮ್ನಾಂ ಶೃಣುತ ಸುವ್ರತಾಃ ॥೫೩॥

---

ಯಾಗುವ ಯೋಗವನ್ನು ಸಂಪಾದಿಸಿದನು. ಋಷಿಗಳು ಹೇಳಿದರು: ಆ ದಂಡಿ ಮಹಾಬ್ರಾಹ್ಮಣನಿಂದ ಹೇಳಲ್ಪಟ್ಟ ರುದ್ರಸಹಸ್ರನಾಮವು ಯಾವುದು ?

೫೨. ಓ ಸೂತಮಹರ್ಷಿಯೇ, ಸರ್ವವೇದದ ಸಾರ ಭೂತವಾದ ಮಂಗಳಕರವಾದ ರುದ್ರನಾಮ ಸಹಸ್ರವನ್ನು ನನಗೆ ದಯವಿಟ್ಟು ಹೇಳಬೇಕು.

೫೩–೫೪. ಸೂತನು ಹೇಳಿದನು: ಎಲೈ ಶ್ರೇಷ್ಠರಾದ ಬ್ರಾಹ್ಮಣರೇ, ಎಲ್ಲಾ ಪ್ರಪಂಚಕ್ಕೂ ಆತ್ಮಸ್ವರೂಪನಾದ ಬಹಳ ಪ್ರಕಾಶಮಾನನಾದ, ಪರಶಿವನ ಅಷ್ಟೋತ್ತರ ಸಹಸ್ರನಾಮವನ್ನು ಕೇಳಿರಿ. ಇದನ್ನು ಜಪಿಸಿಯೇ ತ್ರಿಧನ್ವನು ಶಿವಗಣಗಳಿಗೆ ಒಡೆಯನಾದುದು. ಭಗವಂತನಾದ ಪರಮೇಶ್ವರನು ಓಂಕಾರ ಸ್ವರೂಪನೂ, ಜಗತ್ತಿಗೆ ಆಧಾರ ಸ್ತಂಭನೂ, ಆಗಿದ್ದಾನೆ. ಅವನು ಲೋಕಕ್ಕೆ ಸ್ವಾಮಿಯೂ, ಬೆಳಕನ್ನು ಕೊಡುವ ಸೂರ್ಯನೂ, ಎಲ್ಲವನ್ನೂ ಸೃಷ್ಟಿಮಾಡುವವನೂ, ಮಂಗಳಕರನೂ ಆಗಿರುತ್ತಾನೆ. ಇವನು ಜಟಾಧಾರಿಯೂ, ದಂಡಧಾರಿಯೂ,

ಯುಜ್ಞಸ್ತ್ವಾ ತು ಮುನಿಶ್ರೇಷ್ಠಾ ಗಾಣಪತ್ಯ ಮವಾಪ್ತವಾನ್ ।
ಓಂ ಸ್ಥಿರಃ ಸ್ಥಾಣುಃ ಪ್ರಭುರ್ಭಾನುಃ ಪ್ರವರೋವರದೋ ವರಃ ॥

ಸರ್ವಾತ್ಮಾ ಸರ್ವವಿಖ್ಯಾತಃ ಸರ್ವಃ ಸರ್ವಕರೋ ಭವಃ ।
ಜಟೀ ದಂಡೀ ಶಿಖಂಡೀ ಚ ಸರ್ವಗಃ ಸರ್ವಭಾವನಃ ॥೫೫॥

ಹರಿಶ್ಚ ಹರಿಣಾಕ್ಷಶ್ಚ ಸರ್ವಭೂತ ಹರಃ ಸ್ಮೃತಃ ।
ಪ್ರವೃತ್ತಿಶ್ಚ ನಿವೃತ್ತಿಶ್ಚ ಶಾಂತಾತ್ಮಾ ಶಾಶ್ವತೋಧ್ರುವಃ ॥೫೬॥

ಸ್ಮಶಾನವಾಸೀ ಭಗವಾನ್ ಖಚರೋ ಗೋಚರೋಽರ್ದನಃ ।
ಅಭಿವಾದ್ಯೋ ಮಹಾಕರ್ಮಾ ತಪಸ್ವೀ ಭೂತ ಧಾರಣಃ ॥೫೭॥

ಉನ್ಮತ್ತವೇಷಃ ಪ್ರಚ್ಛನ್ನಃ ಸರ್ವಲೋಕಃ ಪ್ರಜಾಪತಿಃ ।
ಮಹಾರೂಪೋ ಮಹಾಕಾಯಃ ಸರ್ವರೂಪೋ ಮಹಾಯಶಾಃ ॥

---

ಸುಂದರ ಕೇಶಪಾಶದಮೇಲೆ ಶಿಖಂಡವುಳ್ಳವನೂ, ಧರ್ಮಾರ್ಥಕಾಮ ಮೋಕ್ಷಗಳನ್ನು ಕೊಡುವವನೂ, ಎಲ್ಲರಿಗೂ ಹಿತಕಾರಿಯೂ, ಎಲ್ಲಾ ಕಡೆಯಲ್ಲಿಯೂ ಪ್ರಸಿದ್ಧನೂ, ಸರ್ವ ಸ್ವರೂಪನೂ ಆಗಿದ್ದಾನೆ.

೫೬–೫೮. ಪರಮೇಶ್ವರನೇ, ಹರಿಯೂ, ಜಿಂಕೆಯಂತೆ ಕಣ್ಣುಳ್ಳವನೂ, ಎಲ್ಲಾ ಲೋಕದ ಪಾಪವನ್ನು ಹಾಳುಮಾಡುವವನೂ, ಆಗಿದ್ದಾನೆ. ಇವನು ಪ್ರಪಂಚವನ್ನು ನೆಡೆಸುವವನೂ, ಅದನ್ನು ಹಿಂತಿರುಗಿಸುವವನೂ, ಮತ್ತು ಶಾಂತಸ್ವರೂಪನೂ, ಆಗಿರುತ್ತಾನೆ. ಇವನು ಸ್ಮಶಾನದಲ್ಲಿ ವಾಸಮಾಡುವವನೂ, ಪೂಜ್ಯನೂ, ಆಕಾಶದಲ್ಲಿ ಸಂಚರಿಸುವವನೂ, ತಪಸ್ವಿಗಳಿಗೆ ಕಾಣತಕ್ಕವನೂ, ಮತ್ತು ದುಷ್ಟರನ್ನು ನಿಗ್ರಹ ಮಾಡುವವನೂ, ಆಗಿರುತ್ತಾನೆ. ಎಲ್ಲರೂ ನಮಸ್ಕರಿಸಲು ಯೋಗ್ಯನೂ, ಉತ್ತಮ ಕೆಲಸಮಾಡುವವನೂ, ಲೋಕ ಸಂಗ್ರಹಕ್ಕಾಗಿ ತಪಸ್ವಿಯೂ, ಮತ್ತು ಪ್ರಪಂಚ ಧರಿಸುವವನೂ, ಪರಶಿವನೆಂದು ಹುಚ್ಚನಂತೆ ವೇಷಧಾರಿಯೂ, ಕೆಲವುವೇಳೆ ಮರೆಯಾಗಿರುವವನೂ, ಎಲ್ಲಾ ಲೋಕಕ್ಕೂ ಮೂಲಕಾರಣನಾದವನೂ, ಮತ್ತು ಲೋಕಕ್ಕೆ ಅಧಿಪತಿಯೂ ಈಶ್ವರನೆಂದು ನಂಬಬೇಕು. ಇವನ ರೂಪವು ಅತ್ಯುತ್ಕೃಷ್ಟವಾದದ್ದು. ಇವನ ದಿವ್ಯವಾದ ಶರೀರವು ಬಹಳ ವಿಸ್ತಾರವಾದದ್ದು. ಇವನು ಬಹಳ ಕೀರ್ತಿವಂತನು.

ಮಹಾತ್ಮಾ ಸರ್ವಭೂತಶ್ಚ ವಿರೂಪೋ ವಾಮನೋ ನರಃ ।
ಲೋಕಪಾಲೋಽಂತರ್ಹಿತಾತ್ಮಾ ಪ್ರಸಾದೋಽಭಯದೋ ವಿಭುಃ ॥

ಪವಿತ್ರಶ್ಚ ಮಹಾಂಶ್ಚೈವ ನಿಯತೋ ನಿಯತಾಶ್ರಯಃ ।
ಸ್ವಯಂಭೂಃ ಸರ್ವ ಕರ್ಮಾ ಚ ಆದಿರಾದಿ ಕರೋ ನಿಧಿಃ ॥೬೦॥

ಸಹಸ್ರಾಕ್ಷೋ ವಿಶಾಲಾಕ್ಷಃ ಸೋಮೋ ನಕ್ಷತ್ರ ಸಾಧಕಃ ।
ಚಂದ್ರಃ ಸೂರ್ಯಃ ಶನಿಃ ಕೇತುಃ ಗ್ರಹೋ ಗ್ರಹ ಪತಿರ್ಮತಃ ॥೬೧॥

ರಾಜಾ ರಾಜ್ಯೋದಯಃ ಕರ್ತಾ ಮೃಗಬಾಣಾ ರ್ಪಣೋ ಘನಃ ।
ಮಹಾತಪಾ ಧೀರ್ಘತಪಾ ಅದೃಶ್ಯೋ ಧನ ಸಾಧಕಃ ॥೬೨॥

---

೫೯. ಪರಮೇಶ್ವರನು ಮಹಾತ್ಮನು. ಎಲ್ಲರಿಗೂ ಕ್ಷೇಮವನ್ನುಂಟು ಮಾಡುತ್ತಾನೆ: ಇವನು ನಾನಾರೂಪಿಯಾದ್ದರಿಂದ ಕೆಲವು ಸಮಯಗಳಲ್ಲಿ ಕುರೂಪಿಯಾಗಿಯೂ ಮತ್ತು ಕುಳ್ಳನಾದ ಮನುಷ್ಯನಾಗಿಯೂ, ಕಾಣುತ್ತಾನೆ. ಆದರೆ ಇವನೇ ಲೋಕೇಶನು. ಎಲ್ಲರಲ್ಲಿಯೂ ಅಡಗಿರುವವನೂ, ಅನುಗ್ರಹ, ಅಭಯಗಳನ್ನು ಕೊಡುವವನೂ, ಎಲ್ಲಾ ಕಡೆಯಲ್ಲಿ ವ್ಯಾಪಿಸಿರುವವನೂ ಆಗಿದ್ದಾನೆ.

೬೦–೬೨. ಶಿವನು ಪವಿತ್ರನೂ, ಮಹಾತ್ಮನೂ, ಯಾವಾಗಲೂ ಇರುವವನೂ, ಯಾವಾಗಲೂ ರಕ್ಷಕನೂ, ತನ್ನಲ್ಲಿ ತಾನೇ ಹುಟ್ಟಿದವನೂ, ಎಲ್ಲಾ ಕೆಲಸಗಳಿಗೂ ಪ್ರೇರಕನೂ. ಎಲ್ಲದಕ್ಕೂ ಆದಿಯೂ, ಮತ್ತು ಎಲ್ಲವನ್ನೂ ಪ್ರಾರಂಭಿಸುವವನೂ, ಜ್ಞಾನಕ್ಕೆ ಭಂಡಾರವೂ ಆಗಿದ್ದಾನೆ. ಸಾವಿರ ಕಣ್ಣುಳ್ಳವನೂ, ವಿಶಾಲವಾದ ಕಣ್ಣುಳ್ಳವನೂ, ಚಂದ್ರನೂ, ನಕ್ಷತ್ರಗಳನ್ನು ಚಲಿಸುವವನೂ, ಚಂದ್ರನೂ, ಸೂರ್ಯನೂ, ಶನಿಯೂ, ಕೇತುವೂ, ಗ್ರಹವೂ, ಗ್ರಹಪತಿಯೂ, ರಾಜನೂ, ರಾಜ್ಯವನ್ನು ಕಟ್ಟುವವನೂ, ಜಿಂಕೆಯಮೇಲೆ ಬಾಣ ಎಸೆದವನೂ, ಶ್ರೇಷ್ಠನೂ, ಮಹಾತಪಸ್ವಿಯೂ, ಕಣ್ಣಿಗೆ ಕಾಣಿಸದವನೂ, ಐಶ್ವರ್ಯವನ್ನು ಕೊಡುವವನೂ, ಇವೆಲ್ಲವೂ ಶಿವನೇ ಆಗಿದ್ದಾನೆ.

ಸಂವತ್ಸರಃ ಕೃತೋ ಮಂತ್ರಃ ಪ್ರಾಣಾಯಾಮಃ ಪರಂತಪಃ ।
ಯೋಗೀ ಯೋಗೋ ಮಹಾಬೀಜೋ ಮಹಾರೇತಾ ಮಹಾಬಲಃ

ಸುವರ್ಣರೇತಾಃ ಸರ್ವಜ್ಞಃ ಸುಬೀಜೋ ವೃಷವಾಹನಃ ।
ದಶಬಾಹು ಸ್ತ್ವನಿಮಿಷೋ ನೀಲಕಂಠ ಉಮಾಪತಿಃ ॥೬೪॥

ವಿಶ್ವರೂಪಃ ಸ್ವಯಂ ಶ್ರೇಷ್ಠೋ ಬಲವೀರೋ ಬಲಾಗ್ರಣೀಃ ।
ಗಣಕರ್ತಾ ಗಣಪತಿರ್ದಿಗ್ವಾಸಾಃ ಕಾಮ್ಯ ಏವಚ ॥೬೫॥

ಮಂತ್ರವಿತ್ಪರಮೋ ಮಂತ್ರಃ ಸರ್ವಭಾವಕರೋ ಹರಃ ।
ಕಮಂಡಲು ಧರೋ ಧನ್ವೀ ಬಾಣಹಸ್ತಃ ಕಪಾಲವಾನ್ ॥೬೬॥

ಶರೀ ಶತಘ್ನೀ ಖಡ್ಗೀಚ ಪಟ್ಟಿಶೀ ಚಾಯುಧೀ ಮಹಾನ್ ।
ಅಜಶ್ಚ ಮೃಗರೂಪಶ್ಚ ತೇಜಸ್ತೇಜ ಸ್ಕರೋ ವಿಧಿಃ ॥೬೭॥

---

೬೩. ಸಂವತ್ಸರಗಳನ್ನು ಮಾಡಿದವನೂ, ಮಂತ್ರಸ್ವರೂಪನೂ, ಪ್ರಾಣಾಯಾಮ ಸ್ವರೂಪನೂ, ಶತ್ರುಗಳನ್ನು ನಾಶಮಾಡುವವನೂ, ಯೋಗಿಯೂ, ಯೋಗ ಮತ್ತು ಮಹಾಬೀಜಮಂತ್ರ ಸ್ವರೂಪನೂ, ಮಹಾವೀರ್ಯನೂ ಮಹಾಶೂರನೂ ಎಲ್ಲವೂ, ಶಿವನೇ ಆಗಿರುತ್ತಾನೆ.

೬೪–೬೫. ಇವನು ಸುವರ್ಣವೇ ವೀರ್ಯವಾಗಿವುಳ್ಳವನೂ, ಸರ್ವವನ್ನೂ ತಿಳಿದವನೂ, ಜಗತ್ತಿಗೆ ಆದಿಕಾರಣನೂ, ಧರ್ಮವೇ ವಾಹನವಾಗಿವುಳ್ಳವನೂ, ಹತ್ತು ತೋಳುಳ್ಳವನೂ, ರೆಪ್ಪೆಮುಚ್ಚದವನೂ, ಕಪ್ಪಾದ ಕತ್ತುಳ್ಳವನೂ, ಪಾರ್ವತೀಪತಿಯೂ, ಆಗಿರುತ್ತಾನೆ. ಪ್ರಪಂಚದ ರೂಪದಲ್ಲಿ ಕಾಣುವವನೂ, ಅತಿ ಶ್ರೇಷ್ಠನೂ, ಮಹಾಬಲಿಷ್ಠನೂ, ಗಣಾಧಿಪತಿಯೂ, ಗಣಗಳನ್ನು ಸೃಷ್ಟಿಸಿದವನೂ, ಬಲಿಷ್ಠರಿಗೆ ಮುಂದಾಳಾದವನೂ, ದಿಗಂಬರನೂ, ಎಲ್ಲರೂ ಅಪೇಕ್ಷಿಸಲು ಯೋಗ್ಯನೂ, ಇವೆಲ್ಲವೂ, ಈ ಸ್ವಾಮಿಯೇ ಆಗಿದ್ದಾನೆ.

೬೬–೬೮. ಮಂತ್ರವನ್ನು ತಿಳಿದವನೂ, ಶ್ರೇಷ್ಠವಾದ ಮಂತ್ರಸ್ವರೂಪನೂ, ಎಲ್ಲಾ ಭಾವವನ್ನುಂಟುಮಾಡುವವನೂ, ಹರನೂ, ಕಮಂಡಲುವನ್ನು ಕೈಯಲ್ಲಿ ಹಿಡಿದಿರುವವನೂ, ಒಳ್ಳೆಯ ಧನುರ್ಧಾರಿಯೂ, ಬಾಣವನ್ನೇ ಕೈಯಲ್ಲಿ ಹಿಡಿದಿರುವವನೂ, ಕಪಾಲವನ್ನು ಹಿಡಿದಿರುವವನೂ. ಈಶ್ವರನೇ ಎಂದು ತಿಳಿಯಬೇಕು. ಅಲ್ಲದೇ ಶ್ರೇಷ್ಠವಾದ ಬಾಣಧಾರಿಯೂ, ಕೊಡಲಿಯನ್ನು ಹಿಡಿದಿರುವವನೂ, ಕತ್ತಿ ಮತ್ತು ತೆಳ್ಳಗಿರುವ ಕತ್ತಿಯನ್ನು

ಉಷ್ಣೀಷೀ ಚ ಸುವಕ್ತ್ರಶ್ಚ ಉದಗ್ರೋ ವಿನತ ಸ್ತಥಾ ।
ದೀರ್ಘ ಶ್ಚ ಹರಿಕೇಶ ಶ್ಚ ಸುತೀರ್ಥಃ ಕೃಷ್ಣ ಏವಚ ॥೬೮॥
ಶೃಗಾಲರೂಪಃ ಸರ್ವಾರ್ಥೋ ಮುಂಡಃ ಸರ್ವಶುಭಂ ಕರಃ ।
ಸಿಂಹ ಶಾರ್ದೂಲ ರೂಪಶ್ಚ ಗಂಧಕಾರೀ ಕಪರ್ದ್ಯಪಿ ॥೬೯॥
ಊರ್ಧ್ವರೇತೋಽರ್ಧ್ವ ಲಿಂಗೀ ಚ ಊರ್ಧ್ವಶಾಯೀ ನಭಸ್ತಲಃ ।
ತ್ರಿ ಜಟೀ ಚೀರವಾಸಾಶ್ಚ ರುದ್ರಃ ಸೇನಾಪತಿ ರ್ವಿಭುಃ ॥೭೦॥

---

ಹಿಡಿದಿರುವವನೂ, ಪ್ರಶಸ್ತವಾದ ಆಯುಧವುಳ್ಳವವನೂ, ದೊಡ್ಡವನೂ, ಹುಟ್ಟುವಿಕೆಯಿಲ್ಲದವನೂ, ಜಿಂಕೆಯ ರೂಪವನ್ನು ತಾಳಿದವನೂ, ತೇಜಸ್ವಿಯೂ, ಬೆಳಕನ್ನುಂಟುಮಾಡುವವನೂ, ಈ ಸ್ವಾಮಿಯೇ ಆಗಿದ್ದಾನೆ. ಪುಣ್ಯ, ಪಾಪ ಫಲಪ್ರದನೂ, ಶ್ರೇಷ್ಠವಾದ ಶಿರೋವಸ್ತ್ರವನ್ನು ಧರಿಸಿರುವವನೂ, ಸುಂದರನೂ, ಉನ್ನತನೂ, ವಿನಯವುಳ್ಳವನೂ, ಉದ್ದವಾಗಿರುವವನೂ, ವಿಷ್ಣು ಮತ್ತು ಬ್ರಹ್ಮರಿಗೆ ಅಧಿಪತಿಯೂ, ಒಳ್ಳೆಯ ಗಂಗಾದಿ ನದಿಗಳಿಗೆ ಮೂಲಕಾರಣನೂ, ಶ್ಯಾಮಲವರ್ಣದವನೂ, ಈ ಪರಮಾತ್ಮನೇ ಎಂದು ತಿಳಿಯಬೇಕು.

೬೯–೭೧. ನರಿಯ ರೂಪವನ್ನು ಧರಿಸಿದವನೂ, ಎಲ್ಲಾ ಲಾಭವನ್ನೂ ಕೊಡುವವನೂ, ಸಂನ್ಯಾಸಿಯೂ, ಎಲ್ಲಾ ಮಂಗಳವನ್ನುಂಟು ಮಾಡುವವನೂ, ಸಿಂಹ, ಹುಲಿ, ಇವುಗಳ ಆಕಾರವನ್ನು ಧರಿಸಿದವನೂ, ಸುಗಂಧವನ್ನು ಬೀರುವವನೂ, ಜಟಾಧಾರಿಯೂ, ಬ್ರಹ್ಮಚಾರಿಯೂ, ಉತ್ತಮನಾದ ಲಿಂಗಧಾರಿಯೂ, ಆಕಾಶದಲ್ಲಿ ಮಲಗುವವನೂ, ಸತ್ವರಜಸ್ತಮೋಗುಣಗಳಿಗೆ ಕಾರಣಭೂತನೂ, ನಾರುಮಡಿಯನ್ನು ಧಾರಣ ಮಾಡಿರುವವನೂ, ಈ ಪರಮಾತ್ಮನೇ. ಅಲ್ಲದೇ ದುಃಖ ನಿವಾರಣೆ ಮಾಡುವ ರುದ್ರನೂ, ಸೇನಾಪತಿಯೂ, ಉತ್ತಮವಾದ ಉತ್ಪತ್ತಿಯುಳ್ಳವನೂ, ಹಗಲು ರಾತ್ರಿಗಳನ್ನುಂಟುಮಾಡುವವನೂ, ತೀಕ್ಷ್ಣವಾದ ಕೋಪವುಳ್ಳವನೂ, ಬಹಳ ವರ್ಚಸ್ವಿಯೂ, ಗಜಾಸುರನನ್ನು ಕೊಂದವನೂ, ದೈತ್ಯರನ್ನು ನಾಶಮಾಡುವವನೂ, ಕಾಲಸ್ವರೂಪನೂ, ಪದಿ

ಅಹೋರಾತ್ರಂಚ ನಕ್ತಂಚ ತಿಗ್ಮಮನ್ಯುಃ ಸುವರ್ಚಸಃ ।
ಗಜಹಾ ದೈತ್ಯಹಾ ಕಾಲೋ ಲೋಕಧಾತಾ ಗುಣಾಕರಃ ॥೭೦॥

ಸಿಂಹ ಶಾರ್ದೂಲ ರೂಪಾಣಾಮಾರ್ದ್ರ ಚರ್ಮಾಂಬರಂ ಧರಃ ।
ಕಾಲಯೋಗೀ ಮಹಾನಾದಃ ಸರ್ವಾವಾಸ ಶ್ಚತುಷ್ಪಥಃ ॥೭೧॥

ನಿಶಾಚರಃ ಪ್ರೇತಚಾರೀ ಸರ್ವದರ್ಶೀ ಮಹೇಶ್ವರಃ ।
ಬಹುಭೂತೋ ಬಹುಧನಃ ಸರ್ವಸಾರೋಽಮೃತೇಶ್ವರಃ ॥೭೩॥

ನೃತ್ಯಪ್ರಿಯೋ ನಿತ್ಯನೃತ್ಯೋ ನರ್ತನಃ ಸರ್ವಸಾಧಕಃ ।
ಸಕಾರ್ಮುಕೋ ಮಹಾಬಾಹು ರ್ಮಹಾಘೋರೋ ಮಹಾತಪಾಃ

ಮಹಾಶರೋ ಮಹಾಪಾಶೋ ನಿತ್ಯೋ ಗಿರಿಚರೋ ಮತಃ ।
ಸಹಸ್ರ ಹಸ್ತೋ ವಿಜಯೋ ವ್ಯವಸಾಯೋ ಹ್ಯ ನಿಂದಿತಃ ॥೭೫॥

---

ನಾಲ್ಕು ಲೋಕಗಳಿಗೆ ಅಧಾರಭೂತನೂ, ಯೋಗವೇ ಮುಂತಾದ ಗುಣ ಗಳಿಂದ ಕೂಡಿದವನೂ, ಪ್ರಭುವಾದ ಪರಶಿವನೇ ಆಗಿದ್ದಾನೆ.

೭೨–೭೪. ಪರಶಿವನು ಸಿಂಹ, ಹುಲಿಗಳ ಒದ್ದೆಯಾದ ಚರ್ಮ ವನ್ನು ಧರಿಸಿದ್ದಾನೆ. ಸರ್ವಕಾಲದಲ್ಲಿಯೂ ಯೋಗಾಭ್ಯಾಸ ಮಾಡು ವವನೂ, ದೊಡ್ಡದಾಗಿ ಧ್ವನಿಮಾಡುವವನೂ, ಎಲ್ಲಾ ಪ್ರಪಂಚಕ್ಕೂ ವಾಸಸ್ಥಾನವೂ, ಧರ್ಮಾದಿ ನಾಲ್ಕು ಪುರುಷಾರ್ಥಗಳಿಗೂ ಮಾರ್ಗ ದರ್ಶಿಯೂ, ರಾತ್ರಿಯಲ್ಲಿ ಸಂಚರಿಸುವ ರಾಕ್ಷಸ ಸ್ವರೂಪನೂ, ಪ್ರೇತಗ ಳೊಡನೆ ಸಂಚರಿಸುವವನೂ, ಸರ್ವಜ್ಞನೂ, ಮಹೇಶ್ವರನೂ, ನಾಟ್ಯಾಭಿ ಲಾಷೆಯುಳ್ಳವನೂ, ಯಾವಾಗಲೂ ನಾಟ್ಯ ಮಾಡುವವನೂ, ನರ್ತಕನೂ ಎಲ್ಲವನ್ನೂ ಕೊಡುವವನೂ, ಬಿಲ್ಲನ್ನು ಹಿಡಿದಿರುವವನೂ, ದೊಡ್ಡ ತೋಳುಳ್ಳವನೂ, ಬಹಳ ಭಯಂಕರನೂ, ಮಹಾತಪಸ್ವಿಯೂ, ಈ ಪರ ಶಿವನೇ ಆಗಿದ್ದಾನೆ.

೭೫–೭೭. ಪರಶಿವನು ದೊಡ್ಡಬಾಣಧಾರಿಯೂ, ದೊಡ್ಡ ಪಾಶ ವೆಂಬ ಅಸ್ತ್ರವುಳ್ಳವನೂ, ನಿತ್ಯನೂ, ಪರ್ವತಗಳಲ್ಲಿ ಸಂಚರಿಸುವವನೂ, ಆಗಿದ್ದಾನೆ. ಅಲ್ಲದೆ ಶಿವನು ಸಾವಿರ ಕೈಯುಳ್ಳವನೂ, ಜಯಶಾಲಿಯೂ, ಮನೋನಿಶ್ಚಯವುಳ್ಳವನೂ, ದೋಷರಹಿತನೂ, ಕೋಪವಿಲ್ಲದವನೂ, ಕೋಪವುಳ್ಳವನೂ, ದಕ್ಷಯಾಗವನ್ನು ನಾಶಮಾಡಿದವನೂ, ಮನ್ಮಥ

ಅಮರ್ಷಣೋ ಮರ್ಷಣಾತ್ಮಾ ಯಜ್ಞಹಾ ಕಾಮನಾಶನಃ ।
ದಕ್ಷಹಾ ಪರಿಚಾರೀಚ ಪ್ರಹಸೋ ಮಧ್ಯಮ ಸ್ತಥಾ ॥೭೬॥
ತೇಜೋಽಪಹಾರೀ ಬಲವಾನ್ವಿದಿತೋಽಭ್ಯುದಿತೋಽಬಹುಃ ।
ಗಂಭೀರ ರೋಷೋ ಯೋಗಾತ್ಮಾ ಯಜ್ಞಹಾ ಕಾಮನಾಶನಃ ॥
ಗಂಭೀರ ಘೋಷೋ ಗಂಭೀರೋ ಗಂಭೀರ ಬಲ ವಾಹನಃ ।
ನ್ಯಗ್ರೋಧ ರೂಪೋ ನ್ಯಗ್ರೋಧೋ ವಿಶ್ವಕರ್ಮಾಚ ವಿಶ್ವಭುಕ್ ॥
ತೀಕ್ಷ್ಣೋಪಾಯುಶ್ಚ ಹರ್ಯಶ್ವಃ ಸಹಾಯಃ ಕರ್ಮಕಾಲವಿತ್ ।
ವಿಷ್ಣುಃ ಪ್ರಸಾದಿತೋ ಯಜ್ಞಃ ಸಮುದ್ರೋಬಡವಾ ಮುಖಃ ॥

---

ನನ್ನು ನಾಶಮಾಡಿದವನೂ, ದಕ್ಷನನ್ನು ನಾಶಮಾಡಿದವನೂ, ಎಲ್ಲಾ ಕಡೆಯಲ್ಲೂ ಸಂಚರಿಸುವವನೂ, ಚೆನ್ನಾಗಿ ನಗುವವನೂ, ಮಧ್ಯ ಶರೀರ ದಲ್ಲಿ ವುಂಟಾದವನೂ, ಹೃದಯದಲ್ಲಿ ತೋರುವವನೂ, ಅಗ್ನಿ ಸ್ವರೂಪನೂ, ಸಕಲ ಪ್ರಪಂಚವನ್ನೂ ನಾಶ ಮಾಡುವವನೂ, ವೇದಗಳಿಂದ ವೇದ್ಯನೂ, ಮತ್ತು ಒಬ್ಬನೇ ಆದವನೂ ಆಗಿದ್ದಾನೆ. ಅಲ್ಲದೇ ಗಂಭೀರ ಧ್ವನಿಯುಳ್ಳ ವನೂ, ಯೋಗ ಸ್ವರೂಪನೂ ಯಜ್ಞವನ್ನು ನಾಶಮಾಡಿದವನೂ, ಕಾಮ ನನ್ನು ನಾಶ ಮಾಡಿದವನೂ, ಆಗಿದ್ದಾನೆ.

೭೮. ಪರಶಿವನು ಗಂಭೀರವಾದ ಕೋಪ ಸ್ವರೂಪವುಳ್ಳವನೂ, ಭಾವ ದಲ್ಲೂ ಗಂಭೀರವಾಗಿರುವವನೂ, ದೊಡ್ಡ ಸೈನ್ಯ ಸಮೇತನೂ, ಸಂಸಾರ ವೆಂಬ ಆಲದಮರವನ್ನು ಸೃಷ್ಟಿಸಿದವನೂ, ಆಲದ ಮರದ ಸ್ವರೂಪನೂ, ವಿಶ್ವವನ್ನು ಸೃಜಿಸಿದವನೂ, ಮತ್ತು ವಿಶ್ವವನ್ನು ನಾಶಮಾಡುವವನೂ ಆಗಿರುತ್ತಾನೆ.

೭೯–೮೧. ಪರಶಿವನು ತೀಕ್ಷ್ಣನೂ, ಶತ್ರುಗಳಿಗೆ ತೊಂದರೆ ಯುಂಟುಮಾಡುವವನೂ, ಶಾಂತ ಸ್ವರೂಪನೂ, ಅಗ್ನಿ ಸ್ವರೂಪನೂ, ವ್ಯಾಪಕನೂ, ದೇವತೆಗಳಿಂದ ಸ್ತೋತ್ರಮಾಡಲ್ಪಡುವವನೂ, ಯಾಗ ಸ್ವರೂಪನೂ, ಸಮುದ್ರ ಸ್ವರೂಪನೂ, ಬಡವಾಗ್ನಿ ಸ್ವರೂಪನೂ ಆಗಿ ದ್ದಾನೆ. ಇವನು ಅಗ್ನಿಯನ್ನು ತನ್ನ ಕೆಲಸಗಳಿಗೆ ಉಪಯೋಗಿಸು ವವನೂ, ಹಸರು ಬಣ್ಣದ ಕುದರೆಯಮೇಲೆ ಸವಾರಿ ಮಾಡುವವನೂ

ಹುತಾಶನ ಸಹಾಯುಶ್ಚ ಪ್ರಶಾಂತಾತ್ಮಾ ಹುತಾಶನಃ ।
ಉಗ್ರ ತೇಜಾ ಮಹಾತೇಜಾ ಜಯೋ ವಿಜಯು ಕಾಲವಿತ್ ॥೮೦॥
ಜ್ಯೋತಿಷಾ ಮಯುನಂ ಸಿದ್ಧಿಃ ಸಂಧಿರ್ವಿಗ್ರಹ ಏವಚ ।
ಖಡ್ಗೀ ಶಂಖೀ ಜಟೀ ಜ್ವಾಲೀ ಖಚರೋ ದ್ಯುಚರೋ ಬಲೀ ॥೮೧॥
ವೈಣವೀ ಪಣವೀ ಕಾಲಃ ಕಾಲಕಂಠಃ ಕಟಂ ಕಟಃ ।
ನಕ್ಷತ್ರ ವಿಗ್ರಹೋ ಭಾವೋ ನಿಭಾವಃ ಸರ್ವತೋ ಮುಖಃ ॥೮೨॥
ವಿಮೋಚನಶ್ಚ (ಸ್ತು) ಶರಣೋ ಹಿರಣ್ಯ ಕವಚೋದ್ಭವಃ ।
ಮೇಖಲಾ ಕೃತಿರೂಪಶ್ಚ ಜಲಾಚಾರಃ ಸ್ತುತ ಸ್ತಥಾ ॥೮೩॥

---

ಪ್ರಾಣಿಗಳ ಪುಣ್ಯ ಪಾಪಗಳ ಫಲಕಾಲವನ್ನು ಅರಿತವನೂ, ಆಗಿರುತ್ತಾನೆ. ಇವನು ಬಹಳ ತೇಜಸ್ವಿಯೂ, ಬೆಳಕಿನ ಸ್ವರೂಪನೂ, ವಿಜಯಶಾಲಿಯೂ, ವಿಜಯಕಾಲವನ್ನರಿತವನೂ, ನಕ್ಷತ್ರಗಳಿಂದ ಹೊಂದಲ್ಪಡಬೇಕಾದವನೂ, ಕಾರ್ಯ ಸಿದ್ಧಿಯನ್ನುಂಟು ಮಾಡುವವನೂ, ಶಾಂತಿಸ್ವರೂಪನೂ, ಯುದ್ಧ ಸ್ವರೂಪನೂ ಆಗಿರುತ್ತಾನೆ. ಖಡ್ಗಧಾರಿಯೂ, ಶಂಖಧಾರಿಯೂ, ಜಟಾಧಾರಿಯೂ, ಜ್ವಲಿಸುವ ಸ್ವಭಾವವುಳ್ಳವನೂ, ಆಕಾಶದಲ್ಲಿ ಮತ್ತು ಸ್ವರ್ಗದಲ್ಲಿ ಸಂಚರಿಸುವವನೂ, ಶೂರನೂ, ಈ ಪರಮೇಶ್ವರನೇ ಎಂದು ತಿಳಿಯಬೇಕು.

೮೨–೮೪. ಶ್ರೀ ಪರಮೇಶ್ವರನು ವೀಣೆಯನ್ನೂ ಕೊಳಲನ್ನೂ ಧರಿಸುವವನೂ, ಪಣವ ಎಂಬ ವಾದ್ಯವನ್ನು ಬಾರಿಸುವವನೂ, ಮೃತ್ಯುಸ್ವರೂಪನೂ, ಕಪ್ಪಾದ ಕತ್ತುಳ್ಳವನೂ, ಗಣಪತಿಯ ತಲೆಯನ್ನು ಪ್ರೀತಿಯಿಂದ ಸವರುವವನೂ, ನಕ್ಷತ್ರಗಳ ಸ್ವರೂಪವನ್ನು ಪಡೆಯುವವನೂ, ನಂಬಿಕೆಯ ಸ್ವರೂಪನೂ, ಜಗತ್ತಿನ ಸತ್ತಾ ಸ್ವರೂಪನೂ, ಎಲ್ಲಾ ಕಡೆಯಲ್ಲಿಯೂ ಸೂಕ್ಷ್ಮವಾಗಿ ನೋಡಬಲ್ಲವನೂ, ಸಂಸಾರ ಸಾಗರದಿಂದ ಉದ್ಧಾರ ಮಾಡುವವನೂ, ಭಕ್ತ ರಕ್ಷಕನೂ, ಹಿರಣ್ಯಗರ್ಭನೆಂಬ ಬ್ರಹ್ಮನನ್ನು ಸೃಜಿಸಿದವನೂ, ಆಗಿರುತ್ತಾನೆ. ಶಿವನು ಪಟ್ಟಿಯಂತೆ ಗುಂಡಗಿರುವ ಆಕಾರವುಳ್ಳವನೂ, ಗಂಗಾದಿ ನದಿಗಳು ಪ್ರವಹಿಸುವಂತೆ ಮಾಡಿ

ವೀಣೀ ಚ ಪಣವೀ ತಾಲೀ ನಾಲೀ ಕಲಿಕಟು ಸ್ತಥಾ ।
ಸರ್ವತೂರ್ಯನಿನಾದೀ ಚ ಸರ್ವವ್ಯಾಪ್ಯ ಪರಿಗ್ರಹಃ ॥೮೪॥

ವ್ಯಾಲರೂಪೀ ಬಿಲಾವಾಸೀ ಗುಹಾವಾಸೀ ತರಂಗವಿತ್ ।
ವೃಕ್ಷಃ ಶ್ರೀಮಾಲ ಕರ್ಮಾ ಚ ಸರ್ವಬಂಧ ವಿಮೋಚನಃ ॥೮೫॥

ಬಂಧನಸ್ತು ಸುರೇಂದ್ರಾಣಾಂ ಯುಧಿ ಶತ್ರು ವಿನಾಶನಃ ।
ಸಖಾ ಪ್ರವಾಸೋ ದುರ್ವಾಪಃ ಸರ್ವಸಾಧು ನಿಷೇವಿತಃ ॥೮೬॥

---

ದವನೂ, ಭಗೀರಥಾದಿಗಳಿಂದ ಸ್ತೋತ್ರ ಮಾಡಲ್ಪಟ್ಟವನೂ, ಸೊಗಸಾದ ವೀಣೆಯನ್ನು ಹಿಡಿದಿರುವವನೂ, ಪ್ರಶಸ್ತವಾದ ಪಣವ, ಎಂಬ ವಾದ್ಯವನ್ನು ಹಿಡಿದಿರುವವನೂ, ತಾಳವನ್ನು ಬಾರಿಸುವವನೂ, ಕಮಲದ ನಾಳವನ್ನು ಹೊಂದಿರುವವನೂ, ಕಲಿಯುಗದ ದುಷ್ಟರನ್ನು ವಿನಾಶ ಮಾಡುವವನೂ, ಸಕಲ ತೂರ್ಯಾದಿವಾದ್ಯಗಳನ್ನು ಭಾರಿಸುವವನೂ, ಕಮಲದ ನಾಳವನ್ನು ಹೊಂದಿರುವವನೂ, ಸರ್ವ ಸೂಕ್ಷ್ಮ ವಸ್ತುಗಳನ್ನು ಸ್ವೀಕಾರ ಮಾಡಿರುವವನೂ ಆಗಿರುತ್ತಾನೆ.

೮೫–೮೭. ಈಶ್ವರನು ವಾಸುಕಿ ಸ್ವರೂಪನೂ. ಪಾತಾಲದಲ್ಲಿ ವಾಸ ಮಾಡುವವನೂ, ಗುಹೆಗಳಲ್ಲಿ ವಾಸಮಾಡುವವನೂ, ಸಮುದ್ರದ ಅಲೆಗಳ ವಿಷಯವನ್ನು ಅರಿತವನೂ, ವೃಕ್ಷ ಸ್ವರೂಪನೂ, ಲಕ್ಷ್ಮೀ ಕ್ಷೇತ್ರದಲ್ಲಿ ಪೂಜಾದಿಗಳನ್ನು ಪಡೆಯುವವನೂ, ಎಲ್ಲಾ ಪ್ರಪಂಚದ ಬಂಧನವನ್ನು ನಿವಾರಣೆ ಮಾಡುವವನೂ ಆಗಿದ್ದಾನೆ. ಶತ್ರುಗಳನ್ನು ಬಂಧಿಸುವವನೂ, ದೇವತೆಗಳ ಶತ್ರುಗಳಾದ ಅಸುರರನ್ನು ಸಂಹಾರ ಮಾಡುವವನೂ, ಜೀವನಿಗೆ ಮಿತ್ರನಾಗಿಯೂ, ಎಲ್ಲರಿಗೂ ಆಶ್ರಯನಾಗಿಯೂ, ದುಃಖದಿಂದ ಹೊಂದಲು ಯೋಗ್ಯನೂ, ಎಲ್ಲಾ ಸತ್ಪುರಷರಿಂದಲೂ ಸೇವಿಸಲ್ಪಡುವವನೂ, ಈ ಸ್ವಾಮಿಯೇ ಆಗಿರುತ್ತಾನೆ. ಪರಮೇಶ್ವರನು ಬ್ರಹ್ಮಾದಿಗಳನ್ನು ಅವರ ಸ್ಥಾನಗಳಿಂದ ತೆಗೆದು ಹಾಕಲು ಶಕ್ತನೂ, ಬಹಳ ಐಶ್ವರ್ಯಶಾಲಿಯೂ, ನಿಷ್ಪಕ್ಷಪಾತ ಸ್ವಭಾವದವನೂ, ಅಗ್ನಿಷ್ಟೋಮಾದಿ ಸಕಲಯಾಗ ಸ್ವರೂಪವನ್ನೂ ಚೆನ್ನಾಗಿ ಬಲ್ಲವನೂ,

ಪ್ರಸ್ಕಂದೋಽಪ್ಯ ವಿಭಾವಶ್ಚ ತುಲ್ಯೋ ಯಜ್ಞವಿಭಾಗವಿತ್ ।
ಸರ್ವವಾಸಃ ಸರ್ವಚಾರೀ ದುರ್ವಾಸಾ ವಾಸವೋ ಮತಃ ॥೮೭॥
ಹೈಮೋ ಹೇಮಕರೋ ಯಜ್ಞಃ ಸರ್ವಧಾರೀ ಧರೋತ್ತಮಃ ।
ಆಕಾಶೋ ನಿರ್ವಿರೂಪಶ್ಚ ವಿವಾಸಾ ಉರಗಃ ಖಗಃ ॥೮೮॥
ಭಿಕ್ಷುಶ್ಚ ಭಿಕ್ಷುರೂಪಶ್ಚ ರೌದ್ರರೂಪಃ ಸುರೂಪವಾನ್ ।
ವಸುರೇತಾಃಸುವರ್ಚಸ್ವೀ ವಸುವೇಗೋ ಮಹಾಬಲಃ ॥೮೯॥
ಮನೋ ವೇಗೋ ನಿಶಾಚಾರಃ ಸರ್ವಲೋಕ ಶುಭಪ್ರದಃ ।
ಸರ್ವಾವಾಸೀ ತ್ರಯೀವಾಸೀ ಉಪದೇಶಕರೋ ಧರಃ ॥೯೦॥

---

ಎಲ್ಲರಿಗೂ ಆವಾಸಸ್ಥಾನವೂ, ಎಲ್ಲಾಕಡೆಯಲ್ಲಿಯೂ ವ್ಯಾಪಿಸಿರುವವನೂ, ದುರ್ವಾಸ ಮಹರ್ಷಿಯ ಸ್ವರೂಪನೂ, ಇಂದ್ರಸ್ವರೂಪನೂ ಆಗಿರುತ್ತಾನೆ.

೮೮. ಪರಮೇಶ್ವರನು ಚಿನ್ನದ ಸ್ವರೂಪನೂ, ಚಿನ್ನವನ್ನುಂಟು ಮಾಡುವವನೂ, ಯಾಗ ಸ್ವರೂಪನೂ, ಎಲ್ಲದಕ್ಕೂ ಆಧಾರವೂ, ಧಾರಣಮಾಡಿರುವ ಶೇಷಾದಿ ಸರ್ಪಗಳಲ್ಲಿಯೂ ಶ್ರೇಷ್ಠನಾದವನೂ, ಆಕಾಶ ರೂಪನೂ, ಸುಂದರನೂ, ದಿಗಂಬರನೂ, ಸರ್ಪವೂ, ಪಕ್ಷಿಯೂ, ಆಗಿದ್ದಾನೆ.

೮೯–೯೧. ಶಿವನು ಸನ್ಯಾಸಿಯೂ, ಸನ್ಯಾಸಿಯನ್ನು ಹೊಗಳುವವನೂ, ಭಯಂಕರ ಸ್ವರೂಪನೂ, ಸುಂದರನೂ, ಚಿನ್ನವೇ ವೀರ್ಯವಾಗುಳ್ಳವನೂ, ಬಹಳ ತೇಜಸ್ವಿಯೂ, ಐಶ್ವರ್ಯದಿಂದ ಜನಗಳನ್ನು ಬಹಳ ಚುರುಕಾಗಿ ಕೆಲಸ ಮಾಡುವ ಹಾಗೆ ಪ್ರೇರಿಸುವವನೂ, ಬಹಳ ಶೂರನೂ ಆಗಿರುತ್ತಾನೆ. ಅಲ್ಲದೇ ಶಿವನು ಮನಸ್ಸಿನಂತೆ ವೇಗವಾಗಿರುವವನೂ, ರಾತ್ರಿಯಲ್ಲಿ ಸಂಚರಿಸುವವನೂ, ಎಲ್ಲಾ ಲೋಕಕ್ಕೂ ಕ್ಷೇಮವನ್ನುಂಟು ಮಾಡುವವನೂ, ಎಲ್ಲರಿಗೂ ಆಶ್ರಯನೂ, ಮೂರು ಲೋಕದಲ್ಲಿಯೂ, ವಾಸಮಾಡುವವನೂ, ಒಳ್ಳೆಯ ಉಪದೇಶಮಾಡುವವನೂ, ಪ್ರಪಂಚವನ್ನು ಧಾರಣಮಾಡಿರುವವನೂ, ಋಷಿಯೂ, ಆತ್ಮ ಸ್ವರೂಪನೂ,

ಮುನಿರಾತ್ಮಾ ಮುನಿರ್ಲೋಕಃ ಸಭಾಗ್ಯಶ್ಚ ಸಹಸ್ರ ಭುಕ್ ।
ಪಕ್ಷೀ ಚ ಪಕ್ಷರೂಪಶ್ಚ ಅತಿದೀಪ್ತೋ ನಿಶಾಕರಃ ॥೯೧॥

ಸಮೀರೋ ದಮನಾಕಾರೋ ಹ್ಯರ್ಥೋ ಹ್ಯರ್ಥಕರೋ ವಶಃ ।
ವಾಸುದೇವಶ್ಚ ದೇವಶ್ಚ ವಾಮದೇವಶ್ಚ ವಾಮನಃ ॥೯೨॥

ಸಿದ್ಧಿಯೋಗಾಪಹಾರೀ ಚ ಸಿದ್ಧಃ ಸರ್ವಾರ್ಥಸಾಧಕಃ ।
ಅಕ್ಷುಣ್ಣಃ ಕ್ಷುಣ್ಣರೂಪಶ್ಚ ವೃಷಣೋ ಮೃದುರವ್ಯಯಃ ॥೯೩॥

ಮಹಾಸೇನೋ ವಿಶಾಖಶ್ಚ ಷಷ್ಟಿಭಾಗೋ ಗವಾಂ ಪತಿಃ ।
ಚಕ್ರಹಸ್ತಸ್ತು ವಿಷ್ಟಂಭೀ ಮೂಲಸ್ತಂಭನ ಏವಚ ॥೯೪॥

---

ಋಷಿಗಳಿಗೆ ಆಶ್ರಯನೂ, ಭಾಗ್ಯವಂತನೂ, ಸಕಲ ಲೋಕ ಸಂರಕ್ಷಕನೂ, ಪಕ್ಷಿಯೂ, ಶುಕ್ಲ, ಕೃಷ್ಣಪಕ್ಷ ಸ್ವರೂಪನೂ, ಬಹಳ ಪ್ರಕಾಶವುಳ್ಳವನೂ,

೯೨–೯೩. ಶ್ರೀ ಶಿವನು ಇಂದ್ರಿಯ ನಿಗ್ರಹವುಳ್ಳವನೂ, ಪುರುಷಾರ್ಥ ಸ್ವರೂಪನೂ, ಸಕಲ ಇಷ್ಟಾರ್ಥಗಳನ್ನೂ ಕೊಡುವವನೂ, ಭಕ್ತ ಪರಾಧೀನನೂ, ವಾಸುದೇವ ಸ್ವರೂಪನೂ, ದೇವರೂ, ವಾಮದೇವ ಸ್ವರೂಪನೂ, ವಾಮನನೂ, ಅಣಿಮಾದ್ಯಷ್ಟ ಸಿದ್ಧಿಗಳನ್ನು ಸ್ವಾಧೀನದಲ್ಲಿಟ್ಟುಕೊಂಡವನೂ, ಸಿದ್ಧಿಯನ್ನು ಪಡೆದವನೂ, ಎಲ್ಲಾ ಇಷ್ಟಗಳನ್ನೂ ಕೊಡುವವನೂ, ಪ್ರಲಯ ಕಾಲದಲ್ಲಿಯೂ ನಾಶವಿಲ್ಲದಿರುವವನೂ, ರೂಪವಿಲ್ಲದವನೂ, ಅಂಡಕೋಶ ಸ್ವರೂಪನೂ, ಮೃದು ಸ್ವರೂಪನೂ, ನಾಶರಹಿತನೂ ಆಗಿರುತ್ತಾನೆ.

೯೪. ಆ ಶಿವನು ಷಣ್ಮುಖ ಸ್ವಾಮಿಯ ಸ್ವರೂಪನೂ, ವಿಶಾಖನೆಂಬ ಮತ್ತೊಂದು ಸ್ವರೂಪವುಳ್ಳವನೂ, ಅರವತ್ತು ತತ್ತ್ವಗಳ ಸ್ವರೂಪನೂ, ವೇದಗಳೆಂಬ ಹಸುಗಳಿಗೆ ಒಡೆಯನೂ, ಸುದರ್ಶನ ಚಕ್ರವನ್ನು ಧರಿಸಿದವನೂ, ಎಲ್ಲಾ ದೇವತೆಗಳನ್ನೂ ಸ್ವಾಧೀನದಲ್ಲಿಟ್ಟುಕೊಂಡವನೂ, ಜಗತ್ತಿಗೆ ಕಾರಣವಾದ ಮೂಲಪ್ರಕೃತಿಯನ್ನು ಸ್ವಾಧೀನಪಡಿಸಿಕೊಂಡಿರುವವನೂ ಆಗಿದ್ದಾನೆ.

ಋತುಃಋತು ಕರಸ್ತಾಲೋ ಮಧುರ್ಮಧುಕರೋ ವರಃ ।
ವಾನಸ್ಪತ್ಯೋ ವಾಜಸನೋ ನಿತ್ಯಮಾಶ್ರಮ ಪೂಜಿತಃ ॥೯೫॥

ಬ್ರಹ್ಮಚಾರೀ ಲೋಕಚಾರೀ ಸರ್ವಚಾರೀ ಸುಚಾರ ವಿತ್ ।
ಈಶಾನ ಈಶ್ವರಃ ಕಾಲೋ ನಿಶಾಚಾರೀ ಹ್ಯನೇಕ ದೃಕ್ ॥೯೬॥

ನಿಮಿತ್ತಸ್ಥೋ ನಿಮಿತ್ತಂ ಚ ನಂದಿರ್ನಂದಿ ಕರೋ ಹರಃ ।
ನಂದೀಶ್ವರಃ ಸುನಂದೀ ಚ ನಂದನೋ ವಿಷಮರ್ದನಃ ॥೯೭॥

ಭಗಹಾರೀ ನಿಯಂತಾ ಚ ಕಾಲೋ ಲೋಕ ಪಿತಾಮಹಃ ।
ಚತುರ್ಮುಖೋ ಮಹಾಲಿಂಗಶ್ಚಾರು ಲಿಂಗಸ್ತಥೈವ ಚ ॥೯೮॥

---

೯೫–೯೭. ಈಶ್ವರನು ಋತು ಸ್ವರೂಪನೂ, ಋತುಗಳನ್ನು ಮಾಡುವವನೂ, ಕಾಲಸ್ವರೂಪನೂ, ಮಧು (ವಸಂತ) ಸ್ವರೂಪನೂ. ಮಧುವನ್ನುಂಟುಮಾಡುವವನೂ, ಶ್ರೇಷ್ಠನೂ, ಗಿಡಮೂಲಿಕೆಗಳೂ, ವಾಜಸನ ಎಂದು ಸೂರ್ಯನಿಂದ ಪ್ರವೃತ್ತವಾದ ವೇದ ಶಾಖೆಯ ಸ್ವರೂಪನೂ, ಯಾವಾಗಲೂ ಬ್ರಹ್ಮಚಾರಿ ಮೊದಲಾದವರಿಂದ ಪೂಜಿಸಲ್ಪಡುವವನೂ, ಆಗಿರುತ್ತಾನೆ. ಶಿವನು ಬ್ರಹ್ಮಚಾರಿಯೂ, ಲೋಕಸಂಚಾರಿಯೂ, ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವವನೂ, ಮಹಾಜ್ಞಾನಿಯೂ, ಸರ್ವ ವಿದ್ಯೆಗಳಿಗೂ ಅಧಿಪತಿಯಾಗಿಯೂ, ಲೋಕೇಶನಾಗಿಯೂ, ಕಾಲಸ್ವರೂಪನಾಗಿಯೂ, ರಾತ್ರಿಯಲ್ಲಿ ಸಂಚರಿಸುವವನೂ, ಅನೇಕ ಕಣ್ಣುಳ್ಳವನೂ, ನಿಮಿತ್ತಕಾರಣನೂ, ಎಲ್ಲದಕ್ಕೂ ಮೂಲಕಾರಣನೂ, ನಂದಿಯಾಗಿಯೂ, ಸಂತೋಷವನ್ನುಂಟುಮಾಡುವವನಾಗಿಯೂ, ಸಂತೋಷಪಡುವವನಾಗಿಯೂ, ವಿಷಾಪಹಾರಿಯಾಗಿಯೂ, ಇರುತ್ತಾನೆ.

೯೮. ಈಶ್ವರನು ಇಂದ್ರಾದಿಗಳ ಐಶ್ವರ್ಯವನ್ನು ವಶಪಡಿಸಿಕೊಂಡಿರುವವನೂ, ನಿಯಾಮಕನೂ, ಯಮಸ್ವರೂಪನೂ, ಲೋಕಕ್ಕೆ ತಾತನೂ, ನಾಲ್ಕು ಮುಖವುಳ್ಳವನೂ, ಮಹಾಲಿಂಗಸ್ವರೂಪನೂ, ಸುಂದರಲಿಂಗ ಸ್ವರೂಪನೂ ಆಗಿರುತ್ತಾನೆ.

ಲಿಂಗಾಧ್ಯಕ್ಷಃ ಸುರಾಧ್ಯಕ್ಷಃ ಕಾಲಾಧ್ಯಕ್ಷೋ ಯುಗಾವಹಃ ॥
ಬೀಜಾಧ್ಯಕ್ಷೋ ಬೀಜಕರ್ತಾ ಅಧ್ಯಾತ್ಮಾನು ಗತೋ ಬಲಃ ॥೯೯॥
ಇತಿಹಾಸಶ್ಚ ಕಲ್ಪಶ್ಚ ದಮನೋ ಜಗದೀಶ್ವರಃ ।
ದಂಭೋ ದಂಭಕರೋ ದಾತಾ ವಂಶೋ ವಂಶಕರಃ ಕಲಿಃ ॥೧೦೦॥
ಲೋಕ ಕರ್ತಾ ಪಶುಪತಿ ರ್ಮಹಾಕರ್ತಾ ಹ್ಯಧೋಕ್ಷಜಃ ।
ಅಕ್ಷರಂ ಪರಮಂ ಬ್ರಹ್ಮ ಬಲವಾನ್ ಶುಕ್ರ ಏವಚ ॥೧೦೧॥
ನಿತ್ಯೋ ಹ್ಯನೀಶಃ ಶುದ್ಧಾತ್ಮಾ ಶುದ್ಧೋ ಮಾನೋ ಗತಿರ್ಹವಿಃ ।
ಪ್ರಾಸಾದಸ್ತು ಬಲೋ ದರ್ಪೋ ದರ್ಪಣೋ ಹವ್ಯ ಮಿಂದ್ರಜಿತ್ ॥

---

೯೯–೧೦೦. ಶಿವನು ಅವ್ಯಕ್ತಪ್ರಕೃತಿಗೆ ಸ್ವಾಮಿಯೂ, ದೇವತೆಗಳಿಗೆ ಒಡೆಯನೂ, ಕಾಲಕ್ಕೆ ಸ್ವಾಮಿಯೂ, ಯುಗಗಳನ್ನುಂಟುಮಾಡುವವನೂ, ಧರ್ಮಾಧರ್ಮಗಳನ್ನು ಮಾಡುವವನೂ, ಧರ್ಮಾಧರ್ಮಗಳಿಗೆ ಸ್ವಾಮಿಯೂ, ತನ್ನಲ್ಲೇ ತಾನಿರುವವನೂ, ಮೋಕ್ಷದಲ್ಲಿ ಆಸೆಪಡುವವರಿಂದ ಹೊಂದಲ್ಪಡಬೇಕಾದವನು ಎಂಬ ಹೆಸರುಳ್ಳವನೂ ಆಗಿದ್ದಾನೆ. ಶಿವನು ಭಾರತಾದಿ ಇತಿಹಾಸ ಸ್ವರೂಪನೂ, ರುದ್ರಾದಿಕಲ್ಪರೂಪನೂ, ಭೂತಗಳನ್ನು ನಾಶಮಾಡುವವನೂ, ಬ್ರಹ್ಮಾಂಡಕ್ಕೆ ಸ್ವಾಮಿಯೂ, ಅಸುರನಾಶಕನೂ, ದುಷ್ಟರನ್ನು ನಾಶಮಾಡುವವನೂ, ಧಾತೃವೂ, ಸೂರ್ಯವಂಶಸ್ವರೂಪನೂ, ಸೂರ್ಯವಂಶವನ್ನು ಸೃಜಿಸಿದವನೂ, ಕಲಿಯುಗಸ್ವರೂಪನೂ, ಆಗಿರುತ್ತಾನೆ.

೧೦೧–೧೦೨. ಶಿವನು ಲೋಕಕರ್ತೃವಾಗಿಯೂ, ಪಶುಗಳಿಗೆ ಪತಿಯಾಗಿಯೂ, ಬ್ರಹಾಂಡವನ್ನು ಸೃಷ್ಟಿಮಾಡಿದವನಾಗಿಯೂ, ಇಂದ್ರಿಯಕ್ಕೆ ಅಗೋಚರನಾಗಿಯೂ, ನಾಶಶೂನ್ಯವಾದ ಮೋಕ್ಷಸ್ವರೂಪನಾಗಿಯೂ, ಪರಬ್ರಹ್ಮನಾಗಿಯೂ, ಶೂರನಾಗಿಯೂ, ಶುಭ್ರನಾಗಿಯೂ, ಇರುತ್ತಾನೆ. ಪರಮಶಿವನು ನಿತ್ಯನಾಗಿಯೂ, ಸ್ವಾಮಿಯಾಗಿಯೂ, ಶುದ್ಧಸ್ವರೂಪನಾಗಿಯೂ, ಶುದ್ಧನಾಗಿಯೂ, ಮನೋವೇಗವುಳ್ಳವನಾಗಿಯೂ, ಹವಿಸ್ಸಿನಸ್ವರೂಪನೂ, ದೇವಾಲಯಸ್ವರೂಪನಾಗಿಯೂ, ಕೈಲಾಸವಾಸಿಯಾ

ವೇದಕಾರಃ ಸೂತ್ರಕಾರೋ ವಿದ್ವಾಂ ಶ್ಚ ಪರಮರ್ದನಃ ।
ಮಹಾ ಮೇಘ ನಿವಾಸೀ ಚ ಮಹಾಘೋರೋ ವಶೀಕರಃ ॥೧೦೩॥

ಅಗ್ನಿಜ್ವಾಲೋ ಮಹಾಜ್ವಾಲಃ ಪರಿಧೂಮ್ರಾ ವೃತೋ ರವಿಃ ।
ಧಿಷಣಃ ಶಂಕರೋ ನಿತ್ಯೋ ವರ್ಚಸ್ವೀ ಧೂಮ್ರ ಲೋಚನಃ ॥೧೦೪॥

ನೀಲಸ್ತಥಾಂಗಲುಪ್ತಶ್ಚ ಶೋಭನೋ ನರ ವಿಗ್ರಹಃ ।
ಸ್ವಸ್ತಿ ಸ್ವಸ್ತಿ ಸ್ವಭಾವಶ್ಚ ಭೋಗೀ ಭೋಗ ಕರೋ ಲಘುಃ ॥೧೦೫॥

ಉತ್ಸಂಗಶ್ಚ ಮಹಾಂಗಶ್ಚ ಮಹಾಗರ್ಭಃ ಪ್ರತಾಪವಾನ್ ।
ಕೃಷ್ಣವರ್ಣಃ ಸುವರ್ಣಶ್ಚ ಇಂದ್ರಿಯಃ ಸರ್ವವರ್ಣಿಕಃ ॥೧೦೬॥

---

ಗಿಯೂ. ಅಸುರಮೋಹಕನಾಗಿಯೂ, ಜಗತ್ತಿಗೆ ಕನ್ನಡಿಯಾಗಿಯೂ, ಆರಾಧನೆಗೆ ಯೋಗ್ಯನಾಗಿಯೂ, ಇಂದ್ರನನ್ನು ಜಯಿಸಿದವನಾಗಿಯೂ, ಇರುತ್ತಾನೆ. ಪರಮೇಶ್ವರನೇ ವೇದವನ್ನು ಸೃಷ್ಟಿಮಾಡಿದವನೂ, ಸೂತ್ರವನ್ನು ರಚಿಸಿದವನೂ, ವಿದ್ವಾಂಸನೂ, ಶತ್ರುನಾಶಕನೂ, ದೊಡ್ಡ ಮೇಘದಮೇಲೆ ಕುಳಿತವನೂ, ಬಹಳ ಭಯಂಕರನೂ, ಜಿತೇಂದ್ರಿಯನೂ, ಜಗತ್ತಿನ ನಾಶಕನೂ, ಆಗಿರುತ್ತಾನೆ.

೧೦೪–೧೦೬. ಈಶ್ವರನು ಬೆಂಕಿಯಂತೆ ಜ್ವಲಿಸುವವನೂ, ಬಹಳ ಪ್ರಕಾಶಮಾನನೂ, ತನ್ನ ಸುತ್ತಲೂ, ಬೂದುಬಣ್ಣದ ''ಅವಿದ್ಯೆ'' ಎಂಬುವುದರಿಂದ ಕಣ್ಣಿಗೆ ಕಾಣಸದವನೂ, ಸೂರ್ಯಸ್ವರೂಪನೂ, ಪ್ರಶಸ್ತವಾದ ಬುದ್ಧಿಯುಳ್ಳವನೂ, ಲೋಕಕ್ಕೆ ಕ್ಷೇಮವನ್ನುಂಟುಮಾಡುವವನೂ, ನಿತ್ಯನೂ, ತೇಜಸ್ವಿಯೂ, ಅಗ್ನಿರೂಪವಾದ ಕಣ್ಣಿನಲ್ಲಿ ಬೂದುಬಣ್ಣವುಳ್ಳವನೂ, ನೀಲಿಬಣ್ಣವುಳ್ಳವನೂ, ಅರ್ಧಭಾಗದ ಶರೀರವನ್ನು ಪಾರ್ವತಿಗೆ ಕೊಟ್ಟಿರುವವನೂ, ಮಂಗಳಕರನೂ, ಸುಂದರವಾದ ಮನುಷ್ಯಾಕೃತಿಯುಳ್ಳವನೂ, ಮಂಗಳಸ್ವರೂಪನೂ, ಭೋಗಪ್ರಿಯನೂ, ಭೋಗವನ್ನುಂಟುಮಾಡುವವನೂ, ಮನೋಹರನೂ, ಸಂಗರಹಿತನೂ, ವಿರಾಡ್ರೂಪವಾದ ಶರೀರವುಳ್ಳವನೂ, ಶ್ರೇಷ್ಠವಾದ ಅಗ್ನಿರೂಪವಾದ ಗರ್ಭದಿಂದ ಬಂದವನೂ, ತೇಜಸ್ವಿಯೂ, ಕಪ್ಪುಬಣ್ಣದವನೂ, ಸುಂದರನೂ, ಇಂದ್ರನಿಂದ ಸೇವಿಸಲ್ಪಟ್ಟವನೂ, ಎಲ್ಲಾ ಬಣ್ಣದವನೂ ಆಗಿರುತ್ತಾನೆ.

ಮಹಾಪಾದೋ ಮಹಾಹಸ್ತೋ ಮಹಾಕಾಯೋ ಮಹಾಯಶಾಃ ।
ಮಹಾಮೂರ್ಧಾ ಮಹಾಮಾತ್ರೋ ಮಹಾನೇತ್ರೋ ನಗಾಲಯಃ
ಮಹಾಸ್ಕಂಧೋ ಮಹಾಕರ್ಣೋ ಮಹೋಷ್ಠಶ್ಚ ಮಹಾಹನುಃ ।
ಮಹಾನಾಸೋ ಮಹಾಕಂಠೋ ಮಹಾಗ್ರೀವಃ ಸ್ಮಶಾನ ವಾನ್ ॥
ಮಹಾಬಲೋ ಮಹಾತೇಜೋ ಹ್ಯಂತರಾತ್ಮಾ ಮೃಗಾಲಯಃ ।
ಲಂಬಿತೋಷ್ಠಶ್ಚ ನಿಷ್ಠಶ್ಚ ಮಹಾಮಾಯಃ ಪಯೋನಿಧಿಃ ॥೧೦೯॥
ಮಹಾದಂತೋ ಮಹಾದಂಷ್ಟ್ರೋ ಮಹಾಜಿಹ್ವೋ ಮಹಾಮುಖಃ।
ಮಹಾನಖೋ ಮಹಾರೋಮಾ ಮಹಾಕೇಶೋ ಮಹಾಜಟಃ ॥

---

೧೦೭–೧೦೯. ಶಿವನು ಮಹಾಪಾದವುಳ್ಳವನೂ, ದೊಡ್ಡ ಕೈಗಳುಳ್ಳವನೂ, ದೊಡ್ಡ ಶರೀರವುಳ್ಳವನೂ, ಬಹಳ ಕೀರ್ತಿವಂತನೂ, ದೊಡ್ಡ ತಲೆಯುಳ್ಳವನೂ, ಬಹಳ ವಿಸ್ತಾರವುಳ್ಳವನೂ, ದೊಡ್ಡ ನೇತ್ರವುಳ್ಳವನೂ, ಕೈಲಾಸಾದಿ ಪರ್ವತಗಳಲ್ಲಿ ವಾಸಮಾಡುವವನೂ, ಆಗಿರುತ್ತಾನೆ. ಶಿವನು ದೊಡ್ಡ ಭುಜಗಳುಳ್ಳವನೂ, ಬಹಳ ತೇಜಸ್ವಿಯೂ, ಅಂತರಾತ್ಮನೂ, ಯೋಗದ ಬೆಂಕಿಗೆ ಆಶ್ರಯನೂ, ದೊಡ್ಡ ಕಿವಿಯುಳ್ಳವನೂ, ದೊಡ್ಡ ತುಟಿಗಳುಳ್ಳವನೂ, ದೊಡ್ಡ ಕಪೋಲ ಪ್ರದೇಶವುಳ್ಳವನೂ, ದೀರ್ಘವಾದ ಮೂಗುಳ್ಳವನೂ, ದೊಡ್ಡ ಕತ್ತುಳ್ಳವನೂ, ಸ್ಮಶಾನ ವಾಸಿಯೂ ಆಗಿದ್ದಾನೆ. ದೀರ್ಘವಾದ ತುಟಿಗಳುಳ್ಳವನೂ, ಸತ್ಕಾರ್ಯಗಳನ್ನು ಮಾಡುವವನೂ, ಮಹಾಮಾಯಾವಿಯೂ, ಸಮುದ್ರಸ್ವರೂಪನೂ ಆಗಿರುತ್ತಾನೆ.

೧೧೦. ದೊಡ್ಡ ದಂತಗಳುಳ್ಳವನೂ, ದೊಡ್ಡ ಕೋರೆದಾಡೆಗಳುಳ್ಳವನೂ, ದೊಡ್ಡ ನಾಲಿಗೆಯುಳ್ಳವನೂ, ದೊಡ್ಡ ಮುಖವುಳ್ಳವನೂ, ದೊಡ್ಡ ಉಗುರುಗಳುಳ್ಳವನೂ, ದೀರ್ಘವಾದ ಕೂದಲುಳ್ಳವನೂ, ದೊಡ್ಡ ಜುಟ್ಟಿನ ಕೂದಲುಳ್ಳವನೂ, ದೊಡ್ಡ ಜಟಾಧಾರಿಯೂ, ಶಿವನೇ ಆಗಿದ್ದಾನೆ.

ಅಸಪತ್ನಃ ಪ್ರಸಾದಶ್ಚ ಪ್ರತ್ಯಯೋ ಗೀತ ಸಾಧಕಃ ।
ಪ್ರಸ್ವೇದನೋಽ ಸ್ವಹೇನಶ್ಚ ಆದಿಕಶ್ಚ ಮಹಾಮುನಿಃ ॥೧೧೧॥

ವೃಷಕೋ ವೃಷಕೇತು ಶ್ಚ ಅನಲೋ ವಾಯು ವಾಹನಃ ।
ಮಂಡಲೀ ಮೇರುವಾಸಶ್ಚ ದೇವ ವಾಹನ ಏವಚ ॥೧೧೨॥

ಅಥರ್ವ ಶೀರ್ಷಃ ಸಾಮಾಸ್ಯ ಋುಕ್ಸಹಸ್ರೋರ್ಜಿತೇ ಕ್ಷಣಃ ।
ಯುಜುಃ ಪಾದ ಭುಜೋ ಗುಹ್ಯಃ ಪ್ರಕಾಶಾ ಜಾಸ್ತಥೈವ ಚ ॥೧೧೩॥

ಅಮೋಘಾರ್ಥ ಪ್ರಸಾದಶ್ಚ ಅಂತರ್ಭಾವ್ಯಃ ಸುದರ್ಶನಃ ।
ಉಪಹಾರಃ ಪ್ರಿಯಃ ಸರ್ವಃ ಕನಕಃ ಕಾಂಚನ ಸ್ಥಿತಃ ॥೧೧೪॥

ನಾಭಿರ್ನಂದಿ ಕರೋ ಹರ್ಮ್ಯಃ ಪುಷ್ಕರಃ ಸ್ಥಪತಿಃ ಸ್ಥಿತಃ ।
ಸರ್ವ ಶಾಸ್ತ್ರೋ ಧನಶ್ಚಾದ್ಯೋ ಯಜ್ಞೋ ಯಜ್ವಾ ಸಮಾಹಿತಃ ॥

---

೧೧೧–೧೧೩. ಶಿವನು ಶತ್ರುರಹಿತನೂ, ಪ್ರಸನ್ನನೂ, ವಿಶ್ವಾಸಕ್ಕೆ ಅರ್ಹನೂ, ಗಾನದಿಂದ ಮೆಚ್ಚುವವನೂ, ಬೇಸಿಗೆಕಾಲದಲ್ಲಿ ಶಾಖವನ್ನುಂಟುಮಾಡುವವನೂ, ವಿಷ್ಣುವಿಗೂ ಸ್ವಾಮಿಯೂ, ಆದಿಪುರುಷನೂ, ಮಹರ್ಷಿಯೂ ಆಗಿರುತ್ತಾನೆ. ಇವನು ಧಾರ್ಮಿಕನೂ, ಧರ್ಮವನ್ನೆತ್ತಿ ಹಿಡಿದವನೂ, ವಾಯುವೂ, ವಾಯುವಿನಲ್ಲಿ ಸಂಚರಿಸುವವನೂ, ಸೂರ್ಯ ಚಂದ್ರ ಮಂಡಲಗಳೇ ಕಣ್ಣಾಗುಳ್ಳವನೂ, ಮೇರುಪರ್ವತದಲ್ಲಿ ವಾಸ ಮಾಡುವವನೂ, ದೇವತೆಗಳ ಮೇಲೆ ಕೂಡುವವನೂ, ಆಗಿದ್ದಾನೆ. ಇವನೇ ಅಥರ್ವವೇದಕ್ಕೆ ಶಿರಸ್ಸೂ, ಸಾಮವೇದವೇ ಮುಖವಾಗುಳ್ಳವನು, ಸಾವಿರಾರು ಋುಕ್ಕುಗಳೇ ಕಣ್ಣಾಗುಳ್ಳವನೂ, ಯುಜುರ್ವೇದವೇ ಕಾಲು ಮತ್ತು ಹೆಗಲುಗಳಾಗುಳ್ಳವನೂ, ಬುದ್ಧಿಪ್ರವರ್ತಕನೂ, ಪ್ರಸಿದ್ಧವಾದ ತೇಜಸ್ಸುಳ್ಳವನೂ, ಆಗಿದ್ದಾನೆ.

೧೧೪–೧೧೬. ಈಶ್ವರನು ಸಾರ್ಥಕವಾಗುವಂತೆ ಅನುಗ್ರಹಿಸುವವನೂ, ಮನಸ್ಸಿನಲ್ಲಿ ಧ್ಯಾನಯೋಗ್ಯನೂ, ಮನೋಹರನೂ, ದೇವತೆಗಳಿಂದ ಬಲಿಯನ್ನು ಸ್ವೀಕರಿಸುವವನೂ, ಎಲ್ಲಾ ವಸ್ತುಸ್ವರೂಪನೂ, ಚಿನ್ನದಂತೆ ಕಾಂತಿಯುಳ್ಳವನೂ, ಚಿನ್ನದ ಮೇಲೆ ಕೂಡುವವನೂ, ಆಗಿದ್ದಾನೆ. ಶಿವನು

ನಗೋ ನೀಲೋ ಕವಿಃ ಕಾಲೋ ಮಕರಃ ಕಾಲಪೂಜಿತಃ ।
ಸಗಣೋ ಗಣಕಾರಶ್ಚ ಭೂತ ಭಾವನ ಸಾರಥಿಃ ॥೧೧೬॥

ಭಸ್ಮಶಾಯೀ ಭಸ್ಮಗೋಪ್ತಾ ಭಸ್ಮಭೂತ ತನುರ್ಗಣಃ ।
ಆಗಮಶ್ಚ ವಿಲೋಪಶ್ಚ ಮಹಾತ್ಮಾ ಸರ್ವ ಪೂಜಿತಃ ॥೧೧೭॥

ಶುಕ್ಲ ಸ್ತ್ರೀ ರೂಪ ಸಂಪನ್ನಃ ಶುಚಿರ್ಭೂತ ನಿಷೇವಿತಃ ।
ಆಶ್ರಮಸ್ಥಃ ಕಪೋಲಸ್ಥೋ ವಿಶ್ವಕರ್ಮಾ ಪತಿರ್ವಿರಾಟ್ ॥೧೧೮॥

---

ಭೂಮಿಯ ಮಧ್ಯ ಸ್ವರೂಪನೂ, ಯಜ್ಞಫಲವನ್ನು ಕೊಡುವವನೂ, ಸ್ವಾಮಿಯೂ, ಅಚಲನೂ, ಸರ್ವಶಾಸ್ತ್ರಗಳಿಗೂ ಮೂಲಕಾರಣನೂ, ಧನ ಸ್ವರೂಪನೂ, ಮೊದಲು ಉಂಟಾದವನೂ, ಜೀವೇಶರಿಗೆ ಸಂಬಂಧವನ್ನುಂಟುಮಾಡುವವನೂ, ಯಾಗ ವಿಧಾನಮಾಡವವನೂ, ಆಗಿದ್ದಾನೆ. ಶಿವನು ಶ್ರೀ ಶೈಲಾದಿಸ್ವರೂಪನೂ, ನೀಲಬಣ್ಣದವನೂ, ಕವಿಯೂ, ಯಮಸ್ವರೂಪನೂ, ಮೊಸಳೆಯ ಸ್ವರೂಪನೂ, ಯಮನಿಂದ ಪೂಜಿಸಲ್ಪಟ್ಟವನೂ, ಗಣಗಳಿಂದ ಕೂಡಿದವನೂ, ಗಣಗಳಿಗೆ ಪತಿಯೂ, ಬ್ರಹ್ಮನೇ ಸಾರಥಿಯಾಗುಳ್ಳವನೂ, ಆಗಿರುತ್ತಾನೆ.

೧೧೭–೧೧೯. ಶಿವನು ಬೂದಿಯಲ್ಲಿ ಮಲಗುವವನೂ, ಬೂದಿಯಿಂದ ಜಗತ್ತನ್ನು ಸಂರಕ್ಷಿಸಿಕೊಳ್ಳತಕ್ಕವನೂ, ಬೂದಿಯನ್ನು ಹೊರಹೊಮ್ಮಿಸುವ ಶರೀರವುಳ್ಳವನೂ, ಭೃಂಗೀ ಮೊದಲಾದ ಗಣಸ್ವರೂಪನೂ, ಶಾಸ್ತ್ರ ಸ್ವರೂಪನೂ, ಪರಮ ಭಕ್ತರಿಗೆ ಜಗತ್ತನ್ನು ಕಾಣಿಸದಂತೆ ಮಾಡುವವನೂ, ಮಹಾತ್ಮನೂ, ಎಲ್ಲರಿಂದಲೂ ಪೂಜಿಸಲ್ಪಟ್ಟವನೂ, ಆಗಿರುತ್ತಾನೆ. ಇವನು ಶುಭ್ರನೂ, ಹೆಂಗಸೇ ಅರ್ಧಭಾಗವಾಗಿ ಉಳ್ಳವನೂ, ಶುದ್ಧನೂ, ಹಿಂದಿನ ಆಚಾರ್ಯದಿಂದ ಸೇವಿಸಲ್ಪಟ್ಟವನೂ, ನಾಲ್ಕು ಆಶ್ರಮಗಳಲ್ಲಿಯೂ, ಧರ್ಮ ಸ್ವರೂಪದಿಂದಿರುವವನೂ, ಪಾರಿವಾಳದ ಮೇಲೆ ಇರುವವನೂ, ದೇವ ಶಿಲ್ಪಿಯೂ, ವಿರಾಟ್ ಸ್ವರೂಪನೂ, ಆಗಿದ್ದಾನೆ. ಶಿವನು ವೇದವೃಕ್ಷ ಸ್ವರೂಪನೂ, ಕೆಂಪು ತುಟಿಯುಳ್ಳವನೂ, ಪ್ರವಾಹ ಸ್ವರೂಪನೂ, ಸತ್ಪುರುಷರಿಂದ ನಿಷ್ಕರ್ಷೆಯಾಗಿ ತಿಳಿಯಲ್ಪಟ್ಟವನೂ, ಹೊಂಬಣ್ಣದವನೂ,

ವಿಶಾಲ ಶಾಖ ಸ್ತಾಮ್ರೋಷ್ಠೋ ಹ್ಯಂಬುಜಾಲಃ ಸುನಿಶ್ಚಿತಃ ।
ಕಪಿಲಃ ಕಲಶಃ ಸ್ಥೂಲಃ ಆಯುಧ ಶ್ಚೈವ ರೋಮಶಃ ॥೧೧೯॥

ಗಂಧರ್ವೋ ಹ್ಯದಿತಿಸ್ತಾರ್ಕ್ಷ್ಯೋ ಹ್ಯ ವಿಜ್ಞೇಯಃ ಸು ಶಾರದಃ ।
ಪರಶ್ವಧಾಯುಧೋ ದೇವೋ ಹ್ಯರ್ಥಕಾರೀ ಸುಬಾಂಧವಃ ॥೧೨೦॥

ತುಂಬ ವೀಣೋ ಮಹಾಕೋಪ ಊರ್ಧ್ವರೇತಾ ಜಲೇ ಶಯಃ ।
ಉಗ್ರೋ ವಂಶಕರೋ ವಂಶೋ ವಂಶವಾದೀ ಹ್ಯ ನಿಂದಿತಃ ॥೧೨೧॥

ಸರ್ವಾಂಗರೂಪೀ ಮಾಯಾವೀ ಸುಹೃದೋ ಹ್ಯ ನಿಲೋ ಬಲಃ ।
ಬಂಧನೋ ಬಂಧ ಕರ್ತಾ ಚ ಸುಬಂಧನ ವಿಮೋಚನಃ ॥೧೨೨॥

ರಾಕ್ಷಸಘ್ನೋಽಥ ಕಾಮಾರಿ ರ್ಮಹಾದಂಷ್ಟ್ರೋ ಮಹಾಯುಧಃ ।
ಲಂಬಿತೋ ಲಂಬಿತೋಷ್ಠಶ್ಚ ಲಂಬಹಸ್ತೋ ವರಪ್ರದಃ ॥೧೨೩॥

---

ಕಲಶ ಸ್ವರೂಪನೂ, ಸ್ಥೂಲ ಶರೀರನೂ, ವಜ್ರಾಯುಧ ಸ್ವರೂಪನೂ, ರೋಮಶ ಎಂಬ ಗಣಸ್ವರೂಪನೂ; ಆಗಿರುತ್ತಾನೆ.

೧೨೦–೧೨೨. ಶಿವನು ಚಿತ್ರರಥಾದಿ ಗಂಧರ್ವಸ್ವರೂಪನೂ, ದೇವತೆಗಳ ಮಾತೆಯಾದ ಅದಿತಿಯ ಸ್ವರೂಪನೂ, ಗರುಡ ಸ್ವರೂಪನೂ, ತಿಳಿಯಲು ಅಶಕ್ಯನೂ, ಒಳ್ಳೆಯ ಮಾತುಗಾರನೂ, ಕೊಡಲಿಯೇ ಆಯುಧವಾಗುಳ್ಳವನೂ, ದೇವಸ್ವರೂಪನೂ, ಇಷ್ಟಾರ್ಥಗಳನ್ನು ಕೊಡುವವನೂ, ಒಳ್ಳೆಯ ಬಂಧುವೂ ಆಗಿರುತ್ತಾನೆ. ಶಿವನು ತುಂಬು ಎಂಬ ವೀಣೆಯನ್ನು ಬಾರಿಸುವವನೂ, ಬಹಳ ಕೋಪಿಷ್ಠನೂ, ಬ್ರಹ್ಮಚಾರಿಯೂ, ನೀರಿನಲ್ಲಿ ಮಲಗುವವನೂ, ಭಯಂಕರನೂ, ವಂಶವೃದ್ಧಿಯನ್ನು ಮಾಡುವವನೂ, ವಂಶಸ್ವರೂಪನೂ, ವೇಣುನಾದ ಮಾಡುವವನೂ, ದೂಷಿಸಲ್ಪಡದವನೂ ಆಗಿರುತ್ತಾನೆ. ಶಿವನು ಬಹಳ ರೂಪವಂತನೂ, ದುಷ್ಟರಿಗೆ, ಕಪಟಿಯೂ ಸ್ನೇಹಿತನೂ, ಗಾಳಿಯೂ, ಬಲಿಷ್ಠನೂ, ಜನ್ಮ ಬಂಧವನ್ನುಂಟುಮಾಡುವವನೂ, ಶತ್ರುಗಳನ್ನು ಬಂಧಿಸುವವನೂ, ಬಂಧನವನ್ನು ಬಿಡಿಸುವವನೂ ಆಗಿರುತ್ತಾನೆ.

೧೨೩–೧೨೫. ಶಿವನು ರಾಕ್ಷಸರನ್ನು ಕೊಂದವನೂ, ಕಾಮನಿಗೆ ಶತ್ರುವೂ, ದೊಡ್ಡ ಕೋರೆದಾಡೆಗಳುಳ್ಳವನೂ, ದೊಡ್ಡ ಆಯುಧಗಳುಳ್ಳವನೂ, ದೀರ್ಘವಾಗಿರುವವನೂ, ಉದ್ದವಾದ ತುಟಿಯುಳ್ಳವನೂ, ಉದ್ದ

ಬಾಹುಸ್ತ್ವನಿಂದಿತಃ ಸರ್ವಃ ಶಂಕರೋಽಥಾಪ್ಯಕೋಪನಃ ।
ಅಮರೇಶೋ ಮಹಾಘೋರೋ ವಿಶ್ವೇದೇವಃ ಸುರಾರಿಹಾ ॥೧೨೪॥
ಅಹಿರ್ಬುಧ್ನ್ಯೋ ನಿರ್ಋತಿಶ್ಚ ಚೇಕಿತಾನೋ ಹಲೀ ತಥಾ ।
ಅಜೈಕಪಾಚ್ಚ ಕಾಪಾಲೀ ಶಂ ಕುಮಾರೋ ಮಹಾಗಿರಿಃ ॥೧೨೫॥
ಧನ್ವಂತರಿ ರ್ಧೂಮಕೇತುಃ ಸೂರ್ಯೋ ವೈಶ್ರವಣ ಸ್ತಥಾ ।
ಧಾತಾ ವಿಷ್ಣುಶ್ಚ ಶಕ್ರಶ್ಚ ಮಿತ್ರಸ್ತ್ವಷ್ಟಾ ಧರೋ ಧ್ರುವಃ ॥೧೨೬॥
ಪ್ರಭಾಸಃ ಸರ್ವತೋ ವಾಯು ರರ್ಯಮಾ ಸವಿತಾ ರವಿಃ ।
ಧೃತಿಶ್ಚೈವ ವಿಧಾತಾ ಚ ಮಾಂಧಾತಾ ಭೂತ ಭಾವನಃ ॥೧೨೭॥

---

ವಾದ ಕೈಯುಳ್ಳವನೂ, ವರವನ್ನು ಕೊಡುವವನೂ ಆಗಿರುತ್ತಾನೆ. ಶಿವನು ಎಲ್ಲರ ಕೈಗಳ ಸ್ವರೂಪನೂ, ಪರಮೈಶ್ವರ್ಯವುಳ್ಳವನೂ, ಎಲ್ಲರಸ್ವರೂಪನೂ, ಕ್ಷೇಮವನ್ನುಂಟುಮಾಡುವವನೂ, ಕೋಪವಿಲ್ಲದವನೂ, ದೇವತೆಗಳಿಗೆ ಪತಿಯೂ, ಬಹಳ ಭಯಂಕರನೂ, ವಿಶ್ವದೇವ ಸ್ವರೂಪನೂ, ರಾಕ್ಷಸರಿಗೆ ಶತ್ರುವೂ, ಶೇಷ ಸ್ವರೂಪನೂ, ನಿರ್ಋತಿ ಎಂಬ ದಿಕ್ಪಾಲಕ ಸ್ವರೂಪನೂ, ಏಕ ಕಾಲದಲ್ಲಿ ಸಮಸ್ತ ಜ್ಞಾನವುಳ್ಳವನೂ, ನೇಗಿಲೇ ಆಯುಧವಾಗುಳ್ಳವನೂ, ಅಜೈಕಪಾತ್ ಎಂಬ ರುದ್ರನ ಸ್ವರೂಪನೂ, ಅರ್ಧನಾರೀಶ್ವರ ರೂಪನೂ, ಬ್ರಹ್ಮಾಂಡ ಮೂಲಭೂತನೂ, ಸುಖಸ್ವರೂಪನೂ, ಸನತ್ಕುಮಾರಾದಿ ಋಷಿ ಸ್ವರೂಪನೂ, ಆಗಿರುತ್ತಾನೆ.

೧೨೬–೧೨೮. ಶಿವನು ಧನ್ವಂತರಿ ಸ್ವರೂಪನೂ, ಅಗ್ನಿಯ ಸ್ವರೂಪನೂ, ಸೂರ್ಯನೂ, ಕುಬೇರನ ಸ್ವರೂಪನೂ, ಬ್ರಹ್ಮನೂ, ವಿಷ್ಣುವೂ, ಇಂದ್ರನೂ, ಸೂರ್ಯನೂ, ತ್ವಷ್ಟೃ ಎಂಬ ಹೆಸರುಳ್ಳ ಸೂರ್ಯನ ಸ್ವರೂಪನೂ, ಧರಾ, ಧ್ರುವ, ಎಂಬ ಹೆಸರುಳ್ಳ ವಸುದೇವತೆಗಳ ಸ್ವರೂಪನೂ, ಪ್ರಭಾಸಾ ಎಂಬ ಹೆಸರುಳ್ಳ ವಸುದೇವತೆಯ ಸ್ವರೂಪನೂ, ಪರ್ವತ ಎಂಬ ಹೆಸರುಳ್ಳ ಋಷಿಯ ಸ್ವರೂಪನೂ, ಗಾಳಿಯಸ್ವರೂಪನೂ, ಸೂರ್ಯ ಸ್ವರೂಪನೂ, ಸವಿತೃ ಸ್ವರೂಪನೂ, ಸೂರ್ಯನೂ, ಜಗತ್ತಿಗೆ ಆಧಾರ ಭೂತನೂ, ಕರ್ಮಫಲವನ್ನು ಕೊಡುವವನೂ, ಮಾಂಧಾತೃವೂ, ಜಗತ್ತನ್ನು ಸೃಷ್ಟಿಸಿದವನೂ, ಆಗಿರುತ್ತಾನೆ. ಶಿವನು ನೀರೂ, ಗಂಗಾದಿ

ನೀರಸ್ತೀರ್ಥಶ್ಚ ಭೀಮಶ್ಚ ಸರ್ವಕರ್ಮಾ ಗುಣೋದ್ವಹಃ ।
ಪದ್ಮಗರ್ಭೋ ಮಹಾಗರ್ಭಶ್ಚಂದ್ರವಕ್ತ್ರೋ ನಭೋಽನಘಃ ॥

ಬಲಾವಾಂಶ್ಚೋಪ ಶಾಂತಶ್ಚ ಪುರಾಣಃ ಪುಣ್ಯಕೃತ್ತಮಃ ।
ಕ್ರೂರ ಕರ್ತಾ ಕ್ರೂರವಾಸೀ ತನುರಾತ್ಮಾ ಮಹೌಷಧಃ ॥೧೨೯॥

ಸರ್ವಾಶಯಃ ಸರ್ವಚಾರೀ ಪ್ರಾಣೇಶಃ ಪ್ರಾಣಿನಾಂ ಪತಿಃ ।
ದೇವದೇವಃ ಸುಖೋತ್ಸಿಕ್ತಃ ಸದ ಸತ್ಸರ್ವ ರತ್ನವಿತ್ ॥೧೩೦॥

ಕೈಲಾಸಸ್ಥೋ ಗುಹಾವಾಸೀ ಹಿಮವದ್ಗಿರಿ ಸಂಶ್ರಯಃ ।
ಕುಲಹಾರೀ ಕುಲಾಕರ್ತಾ ಬಹುವಿತ್ತೋ ಬಹುಪ್ರಜಃ ॥೧೩೧॥

---

ನದಿಗಳೂ, ಭಯಂಕರನೂ, ಎಲ್ಲಾ ಕಾರ್ಯಗಳಲ್ಲಿಯೂ ಸಮರ್ಥನೂ, ಗುಣಾಢ್ಯನೂ, ಕಮಲವನ್ನು ಹೊಟ್ಟೆಯಲ್ಲುಳ್ಳವನೂ, ಉತ್ತಮ ಗರ್ಭವುಳ್ಳವನೂ, ಚಂದ್ರನಂತೆ ಮುಖವುಳ್ಳವನೂ, ಆಕಾಶವೂ, ಪವಿತ್ರನೂ, ಆಗಿರುತ್ತಾನೆ.

೧೨೯–೧೩೧. ಶಿವನು ಬಲಿಷ್ಠನೂ, ಶಾಂತಸ್ವರೂಪನೂ, ಹಳಬನೂ, ಪುಣ್ಯಶಾಲಿಗಳಲ್ಲಿ ಶ್ರೇಷ್ಠನೂ, ಕ್ರೂರಕರ್ಮಿಯೂ, ಕ್ರೂರವಾದ ಸ್ಥಳದಲ್ಲಿ ವಾಸಮಾಡುವವನೂ, ಸಣ್ಣ ಶರೀರವುಳ್ಳವನೂ, ಮಹೌಷಧ ಸ್ವರೂಪನೂ, ಆಗಿರುತ್ತಾನೆ. ಶಿವನು ಎಲ್ಲಾ ಕಡೆಯಲ್ಲಿಯೂ ಮಲಗುವವನೂ, ಎಲ್ಲಾ ಕಡೆಯಲ್ಲಿಯೂ ಸಂಚರಿಸುವವನೂ, ವಾಯುವಿಗೆ ಅಧಿಪತಿಯೂ, ಪ್ರಾಣಿಗಳಿಗೆ ಒಡೆಯನೂ, ದೇವರಿಗೆಲ್ಲರಿಗೆ ದೇವನೂ, ಸುಖದಿಂದ ಕಾಲ ಕಳೆಯುವವನೂ, ಒಳ್ಳೆಯದು ಕೆಟ್ಟದ್ದು ಎಂಬುದನ್ನು ಚನ್ನಾಗಿ ಅರಿತಿರುವವನೂ, ಆಗಿರುತ್ತಾನೆ. ಶಿವನು ಕೈಲಾಸವಾಸಿಯೂ, ಗುಹೆಯಲ್ಲಿ ವಾಸಮಾಡುವವನೂ, ಹಿಮವತ್ಪರ್ವತದಲ್ಲಿ ವಾಸಿಸುವವನೂ, ಕೆಟ್ಟ ವಂಶಗಳನ್ನು ಹಾಳು ಮಾಡುವವನೂ, ಒಳ್ಳೆಯ ವಂಶವನ್ನು ಅಭಿವೃದ್ಧಿಪಡಿಸುವವನೂ, ಬಹಳ ಐಶ್ವರ್ಯಶಾಲಿಯೂ, ಬಹಳ ಮಕ್ಕಳುಗಳನ್ನು ಪಡೆದವನೂ ಆಗಿರುತ್ತಾನೆ.

ಪ್ರಾಣೇಶೋ ಬಂಧಕೀ ವೃಕ್ಷೋ ನ ಕುಲಶ್ಚಾದ್ರಿಕ ಸ್ತಥಾ ।
ಹ್ರಸ್ವಗ್ರೀವೋ ಮಹಾಜಾನು ರಲೋಲಶ್ಚ ಮಹೌಷಧಿಃ ॥೧೩೨॥
ಸಿದ್ಧಾಂತಕಾರೀ ಸಿದ್ಧಾರ್ಥ ಶ್ಛಂದೋ ವ್ಯಾಕರಣೋ ದ್ಭವಃ ।
ಸಿಂಹನಾದಃ ಸಿಂಹದಂಷ್ಟ್ರಃ ಸಿಂಹಾಸ್ಯಃ ಸಿಂಹವಾಹನಃ ॥೧೩೩॥
ಪ್ರಭಾವಾತ್ಮಾ ಜಗತ್ಕಾಲಃ ಕಾಲಃ ಕಂಪೀ ತರುಸ್ತನುಃ ।
ಸಾರಂಗೋ ಭೂತಚಕ್ರಾಂಕಃ ಕೇತು ಮಾಲೀ ಸುವೇಧಕಃ ॥೧೩೪
ಭೂತಾಲಯೋ ಭೂತಪತಿ ರಹೋ ರಾತ್ರೋ ಮಲೋಽಮಲಃ ।
ವಸು ಭೃತ್ಸರ್ವ ಭೂತಾತ್ಮಾ ನಿಶ್ಚಲಃ ಸುವಿದುರ್ಬುಧಃ ॥೧೩೫॥
ಅಸು ಹೃತ್ಸರ್ವ ಭೂತಾನಾಂ ನಿಶ್ಚಲಶ್ಚಲವಿ ದ್ಬುಧಃ ।
ಅಮೋಘಃ ಸಂಯಮೋ ಹೃಷ್ಟೋ ಭೋಜನಃ ಪ್ರಾಣಧಾರಣಃ ॥

---

೧೩೨–೧೩೪. ಶಿವನು ಪ್ರಾಣಿಗಳಿಗೆ ಅಧಿಪತಿಯೂ, ವೃಕ್ಷ ಸ್ವರೂಪನೂ, ಕುಲವಿಲ್ಲದವನೂ, ಪರ್ವತ ಸ್ವರೂಪನೂ, ಸಣ್ಣ ಕತ್ತುಳ್ಳವನೂ ದೊಡ್ಡ ತೊಡೆಯುಳ್ಳವನೂ, ಚಂಚಲನಲ್ಲದವನೂ, ಒಳ್ಳೆಯ ಔಷಧಿಗಳನ್ನು ಸೃಷ್ಟಿಮಾಡಿದವನೂ, ಶಾಸ್ತ್ರ ಸಿದ್ಧಾಂತಗಳನ್ನು ಮಾಡುವವನೂ, ಅರ್ಥಸಿದ್ಧಿಯುಳ್ಳವನೂ, ಗಾಯತ್ರ್ಯಾದಿ ವೇದ ಸ್ವರೂಪನೂ, ಛಂದಸ್ಸು ಮತ್ತು ವ್ಯಾಕರಣ ಶಾಸ್ತ್ರಗಳ ಪ್ರವರ್ತಕನೂ, ಸಿಂಹದಂತೆ ಘರ್ಜಿಸುವವನೂ, ಸಿಂಹದಹಾಗೆ ಕೋರೆದಾಡೆಯುಳ್ಳವನೂ, ಸಿಂಹದಂತೆ ಮುಖವುಳ್ಳವನೂ, ಸಿಂಹ ವಾಹನನೂ ಆಗಿರುತ್ತಾನೆ. ಶಿವನು ಮಹಾ ಮಹಿಮನೂ, ಜಗತ್ತಿಗೆ ಕಾರಣನೂ, ಕಾಲ ಸ್ವರೂಪನೂ, ವಾಯು ಸ್ವರೂಪನೂ, ವೃಕ್ಷ ಸ್ವರೂಪನೂ, ಸೂಕ್ಷ್ಮನೂ, ಜಿಂಕೆಯೂ, ಪ್ರಪಂಚ ಚಕ್ರವನ್ನು ನಡೆಸುವವನೂ, ಧರ್ಮವೆಂಬ ಬಾವುಟದಿಂದ ಶೋಭಿಸುವವನೂ, ಅಜ್ಞಾನವೆಂಬ ಗಂಟನ್ನು ಬಿಡಿಸುವವನೂ ಆಗಿರುತ್ತಾನೆ.

೧೩೫–೧೩೭. ಶಿವನು ಭೂತಗಳಿಗೆಲ್ಲಕ್ಕೂ ವಾಸಸ್ಥಾನವೂ, ಭೂತಗಳಿಗೆ ಪತಿಯೂ, ರಾತ್ರಿ ಹಗಲುಗಳ ಸ್ವರೂಪನೂ, ಶುದ್ಧನೂ, ಧನವಂತನೂ, ಎಲ್ಲಾ ಪ್ರಾಣಿಗಳನ್ನೂ ಧಾರಣ ಮಾಡಿರುವವನೂ, ಅಚಲನೂ, ಜ್ಞಾತಿಯೂ, ವಿದ್ವಾಂಸನೂ, ಸರ್ವ ಪ್ರಾಣಿಗಳ ಪ್ರಾಣವನ್ನೂ ಅಪಹಾರ ಮಾಡುವವನೂ, ಚಂಚಲನೂ, ಸಾರ್ಥಕವಾದ ಆಜ್ಞೆಯುಳ್ಳ

ಧೃತಿಮಾನ್ಮತಿಮಾಂ ಸ್ತ್ರ್ಯಕ್ಷಃ ಸುಕೃತಸ್ತು ಯುಧಾಂ ಪತಿಃ ।
ಗೋಪಾಲೋ ಗೋಪತಿ ರ್ಗ್ರಾಮೋ ಗೋಚರ್ಮ ವಸನೋ ಹರಃ

ಹಿರಣ್ಯಬಾಹುಶ್ಚ ತಥಾ ಗುಹಾವಾಸಃ ಪ್ರವೇಶನಃ ।
ಮಹಾಮನಾ ಮಹಾಕಾಮೋ ಚಿತ್ತ ಕಾಮೋ ಜಿತೇಂದ್ರಿಯಃ ॥

ಗಾಂಧಾರಶ್ಚ ಸುರಾಪಶ್ಚ ತಾಪಕರ್ಮ ರತೋ ಹಿತಃ ।
ಮಹಾಭೂತೋ ಭೂತವೃತೋ ಹ್ಯಪ್ಸರೋ ಗಣಸೇವಿತಃ ॥೧೩೯॥

ಮಹಾಕೇತು ರ್ಧರಾಧಾತಾ ನೈಕತಾನ ರತ ಸ್ಸರಃ ।
ಅವೇದನೀಯ ಆವೇದ್ಯಃ ಸರ್ವಗಶ್ಚ ಸುಖಾವಹಃ ॥೧೪೦॥

---

ವನೂ, ಜಿತೇಂದ್ರಿಯನೂ, ಸಂತುಷ್ಟನೂ, ಅನ್ನ ಸ್ವರೂಪನೂ, ಪ್ರಾಣ ಧಾರಿಯೂ, ಧೈರ್ಯಶಾಲಿಯೂ, ಬುದ್ಧಿವಂತನೂ, ಮೂರು ಕಣ್ಣುಳ್ಳವನೂ, ಪುಣ್ಯಶಾಲಿಯೂ, ಸೇನಾಪತಿಯೂ, ಗೋಪಾಲನೂ, ಎತ್ತಿನ ಚರ್ಮವನ್ನು ಹೊದೆದಿರುವವನೂ, ಇವೆಲ್ಲವೂ ಆಗಿದ್ದಾನೆ.

೧೩೮–೧೪೦. ಶಿವನು ಚಿನ್ನದ ತೋಳುಳ್ಳವನೂ, ಗುಹೆ (ಬುದ್ಧಿ)ಯಲ್ಲಿ ವಾಸಮಾಡುವವನೂ, ಯೋಗಿಗಳಿಗೆ ಸುಲಭನೂ, ದೊಡ್ಡ ಮನಸ್ಸುಳ್ಳವನೂ, ಆಶೆಗಳಿಲ್ಲದವನೂ, ಸ್ವೇಚ್ಛೆಯಿಂದ ಕೆಲಸ ಮಾಡುವವನೂ, ಜಿತೇಂದ್ರಿಯನೂ ಆಗಿರುತ್ತಾನೆ. ಶಿವನು ರಾಗಸ್ವರೂಪನೂ, ಸೊಗಸಾದ ದ್ರಾಕ್ಷಾರಸವನ್ನು ಪಾನಮಾಡುವವನೂ, ದುಷ್ಟ ಶಿಕ್ಷಕನೂ, ಶಿಷ್ಟರಿಗೆ ಹಿತನೂ, ದೊಡ್ಡ ವಸ್ತುವೂ, ಭೂತಗಳಿಂದ ಸುತ್ತುವರಿಯಲ್ಪಟ್ಟವನೂ, ಅಪ್ಸರಸ್ಸು ಗಣದೇವತೆಗಳೂ, ಇವರಿಂದ ಸೇವಿಸಲ್ಪಟ್ಟವನೂ, ಆಗಿರುತ್ತಾನೆ. ಧರ್ಮವೇ ಬಾವುಟವಾಗುಳ್ಳವನೂ, ಭೂಮಿಯನ್ನು ಧರಿಸಿರುವವನೂ, ಏಕಾಗ್ರಚಿತ್ತನೂ, ಸರ್ವಸ್ವರೂಪನೂ, ಜನಗಳ ಕಷ್ಟಗಳನ್ನು ಕೇಳತಕ್ಕವನೂ, ಉಪಕಾರ ಸ್ವಭಾವನೂ, ಎಲ್ಲರಲ್ಲಿಯೂ ಇರುವವನೂ, ಸುಖವನ್ನುಂಟು ಮಾಡುವವನೂ, ಶ್ರೀ ಶಿವನೇ ಆಗಿರುತ್ತಾನೆ.

**ತಾರಣಶ್ಚ ರಣೋ ಧಾತಾ ಪರಿಧಾ ಪರಿಪೂಜಿತಃ ।**
**ಸಂಯೋಗೀ ವರ್ಧನೋ ವೃದ್ಧೋ ಗಣಿಕೋಽಥ ಗಣಾಧಿಪಃ ॥**
**ನಿತ್ಯೋ ಧಾತಾ ಸಹಾಯಶ್ಚ ದೇವಾಸುರ ಪತಿಃ ಪತಿಃ ।**
**ಯುಕ್ತಶ್ಚ ಯುಕ್ತಬಾಹುಶ್ಚ ಸುದೇವೋಽಪಿ ಸುಪರ್ವಣಃ ॥೧೪೨॥**
**ಆಷಾಢಶ್ಚ ಸುಷಾಢಶ್ಚ ಸ್ಕಂಧದೋ ಹರಿತೋ ಹರಃ ।**
**ವಪುರಾವರ್ತ ಮಾನೋಽನ್ಯೋ ವಪುಃ ಶ್ರೇಷ್ಠೋ ಮಹಾ ವಪುಃ ॥**
**ಶಿರೋ ವಿಮರ್ಶನಃ ಸರ್ವ ಲಕ್ಷ್ಯ ಲಕ್ಷಣ ಭೂಷಿತಃ ।**
**ಅಕ್ಷಯೋ ರಥಗೀತಶ್ಚ ಸರ್ವಭೋಗೀ ಮಹಾಬಲಃ ॥೧೪೪॥**

---

೧೪೧–೧೪೩. ಶಿವನು ಜಗದ್ರಕ್ಷಕನೂ, ಪೂಜ್ಯನೂ, ಬ್ರಹ್ಮನೂ, ಎಲ್ಲ ಕಡೆಯಲ್ಲೂ ಪೂಜಿಸಲ್ಪಡುವವನೂ, ಪ್ರಕೃತಿ ಸಂಬಂಧವುಳ್ಳವನೂ, ವೃದ್ಧಿಹೊಂದುವವನೂ, ಜ್ಞಾನವೃದ್ಧನೂ, ಗಣಗಳಿಂದ ಕೂಡಿದವನೂ, ಗಣಾಧಿಪತಿಯೂ ಆಗಿರುತ್ತಾನೆ. ಶಿವನು ನಿತ್ಯನೂ, ಬ್ರಹ್ಮನೂ, ಅಸಹಾಯ ಶೂರನೂ, ದೇವಾಸುರರಿಗೆ ಪತಿಯೂ, ಯೋಗಿಯೂ, ಸತ್ಪುರುಷನೂ, ಶ್ರೇಷ್ಠವಾದ ತೋಳುಳ್ಳವನೂ, ದೇವ ಶ್ರೇಷ್ಠನೂ, ಇಂದ್ರನೂ, ಆಗಿರುತ್ತಾನೆ. ಶಿವನು ಆಷಾಢಮಾಸ ಸ್ವರೂಪನೂ, ಒಳ್ಳೆ ಸಹಾಯಕನೂ, ಷಣ್ಮುಖನ ಕೋಪವನ್ನು ಹಾಳು ಮಾಡುವವನೂ, ಹಸುರು ಬಣ್ಣದವನೂ, ಹರನೂ, ಜಗದುತ್ಪಾದಕನೂ, ಸುತ್ತುವ ಸಂವತ್ಸರಾದಿ ಸ್ವರೂಪನೂ, ಶ್ರೇಷ್ಠ ದೇಹಧಾರಿಯೂ, ದೊಡ್ಡ ಶರೀರವುಳ್ಳವನೂ ಆಗಿರುತ್ತಾನೆ.

೧೪೪–೧೪೬. ಶಿವನು ಯಜುರ್ವೇದ ಸ್ವರೂಪನೂ, ವಿಚಾರಪರನೂ ಸರ್ವ ಲಕ್ಷಣಗಳಿಂದ ಅಲಂಕರಿಸಲ್ಪಟ್ಟವನೂ, ನಾಶ ರಹಿತನೂ, ಸಾಮವೇದದಿಂದ ಸ್ತೋತ್ರ ಮಾಡಲ್ಪಟ್ಟವನೂ, ಎಲ್ಲಾ ಭೋಗವುಳ್ಳವನೂ, ಬಹಳ ಕಠಿಣನೂ, ಆಗಿದ್ದಾನೆ. ಶಿವನು ಜಡಸ್ವರೂಪನೂ, ಮತ್ತು ಜ್ಞಾನ ಸ್ವರೂಪನೂ, ಮಂತ್ರ ಸ್ವರೂಪನೂ, ಸುಂದರನೂ, ಕೀರ್ತಿಶಾಲಿಯೂ, ಶ್ರೇಷ್ಠವಾದ ವಸ್ತುವೂ, ರತ್ನಗರ್ಭನೂ, ಸಂಸಾರ ಸಾಗರದ

ಸಾಮ್ನಾಯೋಽಥ ಮಹಾಮ್ನಾಯ ಸ್ತೀರ್ಥದೇವೋ ಮಹಾಯಶಾಃ
ನಿರ್ಜೀವೋ ಜೀವನೋ ಮಂತ್ರಃ ಸುಭಗೋ ಬಹುಕರ್ಕಶಃ ॥

ರತ್ನಭೂತೋಽಥ ರತ್ನಾಂಗಃ ಮಹಾರ್ಣವ ನಿಪಾತ ವಿತ್ ।
ಮೂಲಂ ವಿಶಾಲೋಹ್ಯಮೃತಂ ವ್ಯಕ್ತಾವ್ಯಕ್ತಸ್ತಪೋ ನಿಧಿಃ ॥೧೪೬॥

ಆರೋಹಣಾಧಿರೋಹಶ್ಚ ಶೀಲಧಾರೀ ಮಹಾತಪಾಃ ।
ಮಹಾಕಂಠೋ ಮಹಾಯೋಗೀ ಯುಗೋ ಯುಗಕರೋ ಹರಿಃ ॥

ಯುಗರೂಪೋ ಮಹಾರೂಪೋ ವಹನೋ ಗಹನೋ ನಗಃ ।
ನ್ಯಾಯೋ ನಿರ್ವಾಪಣೋಽಪಾದಃ ಪಂಡಿತೋ ಹ್ಯಚಲೋ ಪಮಃ ॥

ಬಹು ಮಾಲೋ ಮಹಾಮಾಲಃ ಶಿಪಿವಿಷ್ಟಃ ಸುಲೋಚನಃ ।
ವಿಸ್ತಾರೋ ಲವಣಃ ಕೂಪಃ ಕುಸುಮಾಂಗಃ ಫಲೋದಯಃ ॥೧೪೯॥

---

ನಾಶದ ವಿಷಯವನ್ನೂ ತಿಳಿದಿರುವವನೂ, ಎಲ್ಲದಕ್ಕೂ ಮೂಲವೂ, ವಿಶಾಲ ದೇಹವುಳ್ಳವನೂ, ಅಮೃತ ಸ್ವರೂಪನೂ, ವ್ಯಕ್ತನೂ, ಅಸಕ್ತನೂ, ತಪಸ್ವಿಯೂ, ಆಗಿರುತ್ತಾನೆ.

೧೪೭–೧೪೯. ಶಿವನು ಉಚ್ಚಸ್ಥಾನವನ್ನು ಕೊಡುವವನೂ, ಭಕ್ತರಿಗೆ ಹೊಂದಲು ಯೋಗ್ಯನೂ, ಗುಣವಂತನೂ, ತಪಸ್ವಿಯೂ, ದೊಡ್ಡ ಕಂಠವುಳ್ಳವನೂ, ಮಹಾಯೋಗಿಯೂ, ಯುಗಸ್ವರೂಪನೂ, ಯುಗವನ್ನುಂಟುಮಾಡುವವನೂ, ಹರಿಯೂ ಆಗಿದ್ದಾನೆ. ಶಿವನು ಸುಂದರನೂ, ಸೂಕ್ಷ್ಮನೂ, ಅಚಲನೂ, ನ್ಯಾಯಸ್ವರೂಪನೂ, ಪ್ರಪಂಚ ದುಃಖನಾಶಕನೂ, ಪಂಡಿತನೂ, ಪರ್ವತಕ್ಕೆ ಸಮಾನನೂ ಆಗಿರುತ್ತಾನೆ. ಶಿವನು ಅನೇಕ ಪೂಮಾಲೆಗಳನ್ನು ಧರಿಸಿದವನೂ, ವಿಷ್ಣುವೂ, ಸುಂದರ ನೇತ್ರವುಳ್ಳವನೂ, ಉಪ್ಪಿನ ಸಮುದ್ರಸ್ವರೂಪನೂ, ಭಾವಿಯಸ್ವರೂಪನೂ, ಕುಸುಮ ಸಮಾನವಾದ ಕೋಮಲವಾದ ದೇಹವುಳ್ಳವನೂ, ಆಗಿರುತ್ತಾನೆ. ಅಲ್ಲದೆ ಶಿವನು ಒಳ್ಳೆಯ ಫಲಗಳನ್ನು ಕೊಡುವವನಾಗಿರುತ್ತಾನೆ.

ಋಷಭೋ ವೃಷಭೋ ಭಂಗೋ ಮಣಿಬಿಂಬ ಜಟಾಧರಃ ।
ಇಂದುರ್ವಿಸರ್ಗಃ ಸುಮುಖಃ ಶೂರಃ ಸರ್ವಾಯುಧಃ ಸಹಃ॥೧೫೦॥
ನಿವೇದನಃ ಸುಧಾಜಾತಃ ಸ್ವರ್ಗದ್ವಾರೋ ಮಹಾ ಧನುಃ ।
ಗಿರಾವಾಸೋ ವಿಸರ್ಗಶ್ಚ ಸರ್ವಲಕ್ಷಣ ಲಕ್ಷವಿತ್ ॥೧೫೧॥
ಗಂಧಮಾಲೀ ಚ ಭಗವಾನನಂತಃ ಸರ್ವ ಲಕ್ಷಣಃ ।
ಸಂತಾನೋ ಬಹುಲೋ ಬಾಹುಃ ಸಕಲಃ ಸರ್ವಪಾವನಃ ॥೧೫೨॥
ಕರಸ್ಥಾಲೀ ಕಪಾಲೀಚ ಊರ್ಧ್ವಸಂಹನನೋ ಯುವಾ ।
ಯಂತ್ರ ತಂತ್ರ ಸುವಿಖ್ಯಾತೋ ಲೋಕಃ ಸರ್ವಾಶ್ರಯೋ ಮೃದುಃ

---

೧೫೦–೧೫೨. ಶಿವನು ಸರ್ವಶ್ರೇಷ್ಠನೂ, ನಂದಿಕೇಶ್ವರ ಸ್ವರೂಪನೂ, ಅನೇಕ ವಿಧವಾದ ಬುದ್ಧಿಯ ಸ್ವರೂಪನೂ, ಸೊಗಸಾದ ಮಣಿಗಳಂತೆ ಥಳಥಳಿಸುವ ಜಟೆಯನ್ನು ಬಿಟ್ಟಿರುವವನೂ, ಚಂದ್ರ ಸ್ವರೂಪನೂ, ನಾಶವಿಲ್ಲದ ರುದ್ರರನ್ನು ಸೃಷ್ಟಿಸಿದವನೂ, ಸುಂದರನೂ, ಶೂರನೂ, ಎಲ್ಲಾ ಆಯುಧಗಳನ್ನೂ ಪಡೆದಿರುವವನೂ, ಎಂಥಾ ಆಯುಧದ ಏಟಿಗೂ ಜಗ್ಗದವನೂ, ಭಕ್ತರಿಗೆ ತಿಳಿವಳಿಕೆಯುಂಟು ಮಾಡುವವನೂ, ಅಮೃತವನ್ನು ಸೃಷ್ಟಿಮಾಡಿದವನೂ, ಮೋಕ್ಷಕ್ಕೆ ಕಾರಣನೂ, ಮಹಾಧನುರ್ಧಾರಿಯೂ, ಪರ್ವತವಾಸಿಯೂ, ಹುಟ್ಟುವಿಕೆಯಿಲ್ಲದವನೂ, ಎಲ್ಲಾ ಲಕ್ಷಣಗಳಿಂದ ಕೂಡಿರುವವನೂ, ಆಗಿದ್ದಾನೆ. ಸುಗಂಧವಾದ ಮಾಲಿಕೆಯನ್ನು ಧರಿಸಿದವನೂ, ಪೂಜ್ಯನೂ, ನಾಶವಿಲ್ಲದವನೂ, ಸುರೂಪನೂ, ಸೃಷ್ಟಿಕರ್ತನೂ, ಮಹಾಬಾಹುವೂ, ಸರ್ವಸ್ವರೂಪನೂ, ಎಲ್ಲರನ್ನೂ ಪರಿಶುದ್ಧಿಗೊಳಿಸುವವನೂ, ಪರಶಿವನೇ ಆಗಿದ್ದಾನೆ.

೧೫೩–೧೫೫. ಶಿವನು ಕೈಯ್ಯಲ್ಲೇ ಭೋಜನ ಪಾತ್ರೆಯನ್ನು ಹಿಡಿದಿರುವವನೂ, ಬ್ರಹ್ಮನನ್ನು ಕಾಪಾಡಿದವನೂ, ಎಲ್ಲರಿಗಿಂತಲೂ ಬಲಿಷ್ಠನೂ, ನಿತ್ಯ ಯುವಕನೂ, ಯಂತ್ರತಂತ್ರ ಸ್ವರೂಪವನ್ನು ಚೆನ್ನಾಗಿ ಅರಿತಿರುವವನೂ, ಸೂರ್ಯಾದಿ ಸ್ವರೂಪನೂ, ಆಗಿರುತ್ತಾನೆ. ಶಿವನು ಸರ್ವರಿಗೂ ಆಶ್ರಯನೂ, ಅತ್ಯಂತ ಕೋಮಲನೂ, ಸಂನ್ಯಾಸಿಯೂ, ಪ್ರಶಸ್ತ

ಮುಂಡೋ ವಿರೂಪೋ ವಿಕೃತೋ ದಂಡೀ ಕುಂಡೀ ವಿಕುರ್ವಣಃ ।
ವಾರ್ಯಕ್ಷಃ ಕಕುಭೋ ವಜ್ರೀ ದೀಪ್ತ ತೇಜಾಃ ಸಹಸ್ರಪಾತ್ ॥೧೫೪॥
ಸಹಸ್ರ ಮೂರ್ಧಾ ದೇವೇಂದ್ರಃ ಸರ್ವದೇವ ಮಯೋ ಗುರುಃ ।
ಸಹಸ್ರಬಾಹುಃ ಸರ್ವಾಂಗಃ ಶರಣ್ಯಃ ಸರ್ವ ಲೋಕಕೃತ್ ॥೧೫೫॥
ಪವಿತ್ರಂ ತ್ರಿಮಧುರ್ಮಂತ್ರಃ ಕನಿಷ್ಠಃ ಕೃಷ್ಣ ಪಿಂಗಲಃ ।
ಬ್ರಹ್ಮದಂಡ ವಿನಿರ್ಮಾತಾ ಶತಘ್ನಃ ಶತಪಾಶಧೃಕ್ ॥೧೫೬॥
ಕಲಾ ಕಾಷ್ಠಾ ಲವೋ ಮಾತ್ರಾ ಮುಹೂರ್ತೋಽಹಃ ಕ್ಷಪಾಕ್ಷಣಃ ।
ವಿಶ್ವಕ್ಷೇತ್ರ ಪ್ರದೋಬೀಜಂ ಲಿಂಗಮಾದ್ಯಸ್ತು ನಿರ್ಮುಖಃ ॥೧೫೭॥

---

ರೂಪನೂ, ಒಳ್ಳೆಕರ್ಮವನ್ನು ಮಾಡುವವನೂ, ಜಿತೇಂದ್ರಿಯನೂ, ಗಂಗಾಧರನೂ ಆಗಿದ್ದಾನೆ. ಶಿವನು ಸತ್ಕರ್ಮದಿಂದ ಲಭ್ಯನೂ, ಕಟಾಕ್ಷದಿಂದ ನೋಡೋಣದರಿಂದಲೇ ಎಲ್ಲವನ್ನೂ ಕೊಡುವ ಸಮರ್ಥನೂ, ವೀಣೆಯೇ ತೊಡೆಯುಲ್ಲುಳ್ಳವನೂ, ವಜ್ರಾಭರಣವುಳ್ಳವನೂ, ಮಹಾತೇಜಸ್ವಿಯೂ, ಸಾವಿರಾರು ಕಾಲುಗಳುಳ್ಳವನೂ ಆಗಿರುತ್ತಾನೆ. ಶಿವನು ಸಾವಿರಾರು ತಲೆಯುಳ್ಳವನೂ, ದೇವೇಂದ್ರಸ್ವರೂಪನೂ, ಸರ್ವದೇವತಾ ಸ್ವರೂಪನೂ, ಲೋಕಗುರುವೂ, ಸಾವಿರಾರು ತೋಳುಗಳುಳ್ಳವನೂ, ಸುಂದರಾಂಗನೂ, ಲೋಕಕ್ಕೆ ರಕ್ಷಕನೂ, ಸರ್ವಲೋಕಗಳನ್ನೂ ಸೃಷ್ಟಿಮಾಡಿದವನೂ, ಆಗಿರುತ್ತಾನೆ.

೧೫೬—೧೫೭. ಶಿವನು ಪವಿತ್ರ ಮೂರ್ತಿಯೂ, ಮೂರು ವಿಧವಾದ ಅಮೃತದಿಂದ ಪೂಜಿಸಲ್ಪಡುವವನೂ, ನಿತ್ಯಯುವಕನೂ, ಕಪ್ಪುಹೊಂಬಣ್ಣ ಮಿಶ್ರವಾದ ಕಾಂತಿಯಿಂದ ಕೂಡಿರುವವನೂ, ಬ್ರಹ್ಮಾಂಡವನ್ನು ನಿರ್ಮಿಸಿದವನೂ, ನೂರಾರು ಜೀವರನ್ನು ಕ್ಷಣಮಾತ್ರದಲ್ಲೇ ನಾಶಮಾಡಲು ಸಾಮರ್ಥ್ಯವುಳ್ಳವನೂ, ನೂರಾರು ಪಾಶವೆಂಬ ಅಸ್ತ್ರವನ್ನು ಧರಿಸಿರುವವನೂ, ಆದ ಪ್ರಭುವಾಗಿದ್ದಾನೆ. ಶಿವನು ಕ್ಷಣಸ್ವರೂಪನೂ, ನಿಮಿಷಸ್ವರೂಪನೂ, ಮಾತ್ರೆಗಳೆಂಬ ಸ್ವಲ್ಪ ಕಾಲದ ಸ್ವರೂಪನೂ, ಮುಹೂರ್ತವೂ, ರಾತ್ರಿಯೂ, ಜೀವರಿಗೆ ಶರೀರಗಳನ್ನು ಕೊಡುವ ಮೂಲಕಾರಣನೂ, ವೀರ್ಯ ಸ್ವರೂಪನೂ, ಮತ್ತು ಆದಿಲಿಂಗ ಸ್ವರೂಪನೂ, ಮತ್ತು ನಿರಾಕಾರನೂ, ಆಗಿರುತ್ತಾನೆ.

ಸದಸದ್ವ್ಯಕ್ತಮವ್ಯಕ್ತಂ ಪಿತಾ ಮಾತಾ ಪಿತಾಮಹಃ ।
ಸ್ವರ್ಗದ್ವಾರಂ ಮೋಕ್ಷದ್ವಾರಂ ಪ್ರಜಾದ್ವಾರಂ ತ್ರಿವಿಷ್ಟಪಃ ॥೧೫೮॥
ನಿರ್ವಾಣಂ ಹೃದಯ ಶ್ಚೈವ ಬ್ರಹ್ಮಲೋಕಃ ಪರಾಗತಿಃ ।
ದೇವಾಸುರ ವಿನಿರ್ಮಾತಾ ದೇವಾಸುರ ಪರಾಯಣಃ ॥೧೫೯॥
ದೇವಾಸುರ ಗುರುರ್ದೇವೋ ದೇವಾಸುರ ನಮಸ್ಕೃತಃ ।
ದೇವಾಸುರ ಮಹಾಮಾತ್ರೋ ದೇವಾಸುರ ಗಣಾಶ್ರಯಃ ॥೧೬೦॥
ದೇವಾಸುರ ಗಣಾಧ್ಯಕ್ಷೋ ದೇವಾಸುರ ಗಣಾಗ್ರಣೀಃ ।
ದೇವಾಧಿದೇವೋ ದೇವರ್ಷಿ ರ್ದೇವಾಸುರವರ ಪ್ರದಃ ॥೧೬೧॥
ದೇವಾಸುರೇಶ್ವರೋ ವಿಷ್ಣು ರ್ದೇವಾಸುರ ಮಹೇಶ್ವರಃ ।
ಸರ್ವದೇವ ಮಯೋಽಚಿಂತ್ಯೋ ದೇವತಾತ್ಮಾ ಸ್ವಯಂಭವಃ॥೧೬೨॥

---

೧೫೮–೧೬೦. ಶಿವನು ಚೇತನಾ ಚೇತನ ಸದಸತ್ಕಾರ್ಯಕಾರಣ ರೂಪನೂ, ಪ್ರತ್ಯಕ್ಷನೂ, ಅಪ್ರತ್ಯಕ್ಷನೂ, ತಾಯಿಯೂ, ತಂದೆಯೂ. ತಾತನೂ, ಸ್ವರ್ಗಕ್ಕೆ ಬಾಗಿಲೂ, ಮೋಕ್ಷಕ್ಕೆ ಬಾಗಿಲೂ, ಪ್ರಜೆಗಳ ಸೃಷ್ಟಿಗೆ ಕಾರಣನೂ, ಮೂರುಲೋಕದ ಸ್ವರೂಪವುಳ್ಳವನೂ, ಮೋಕ್ಷವೂ, ಮನಸ್ಸೂ, ಬ್ರಹ್ಮ ಲೋಕ ಸಾಧಕನೂ, ಕೊನೆಯಲ್ಲಿ ಹೊಂದಬೇಕಾದ ವಸ್ತುವೂ, ದೇವಾಸುರರನ್ನು ಸೃಜಿಸಿದವನೂ, ದೇವಾಸುರರ ಕ್ಷೇಮ ಚಿಂತಕನೂ, ದೇವಾಸುರರಿಗೆ ಗುರುವೂ, ದೇವರೂ, ದೇವಾಸುರರಿಂದ ನಮಸ್ಕರಿಸಲ್ಪಟ್ಟವನೂ, ದೇವಾಸುರರೇ ಮಂತ್ರಿಗಳಾಗುಳ್ಳವನೂ, ದೇವಾ ಸುರರ ಗುಂಪಿಗೆ ಆಶ್ರಯನೂ, ಆಗಿರುತ್ತಾನೆ.

೧೬೧–೧೬೩. ಶಿವನು ದೇವಾಸುರರ ಗುಂಪಿಗೆ ಸ್ವಾಮಿಯೂ, ದೇವಾ ಸುರರಲ್ಲಿ ಅತಿಶ್ರೇಷ್ಠನೂ, ದೇವತೆಗಳಿಗೆಲ್ಲರಿಗೂ ಪತಿಯೂ,ದೇವರ್ಷಿಯೂ, ದೇವಾಸುರರಿಗೆಲ್ಲರಿಗೂ ವರವನ್ನು ನೀಡುವವನೂ, ದೇವಾಸುರರಿಗೆ ನಿಯಾ ಮಕನೂ, ವಿಷ್ಣುವೂ, ದೇವಾಸುರರಿಗೆ ಅಧಿಪತಿಯೂ, ಸರ್ವದೇವತೆಗಳ ಸ್ವರೂಪನೂ, ತಿಳಿಯಲು ಅಶಕ್ಯನೂ, ದೇವತಾಸ್ವರೂಪನೂ, ತನ್ನಲ್ಲಿ ತಾನೆ ಹುಟ್ಟಿದವನೂ, ಉತ್ಕೃಷ್ಟವಾದ ಗತಿಯುಳ್ಳವನೂ, ಮೂರುಲೋಕಗಳಲ್ಲಿ

ಉದ್ಗತಸ್ತ್ರಿಕ್ರಮೋ ವೈದ್ಯೋ ವರದೋಽವರಜೋಂಽಬರಃ ।
ಇಜ್ಯೋ ಹಸ್ತೀ ತಥಾವ್ಯಾಘ್ರೋ ದೇವಸಿಂಹೋ ಮಹರ್ಷಭಃ ॥
ವಿಬುಧಾಗ್ರ್ಯಃ ಸುರಃ ಶ್ರೇಷ್ಠಃ ಸ್ವರ್ಗದೇವ ಸ್ತಥೋತ್ತಮಃ ।
ಸಂಯುಕ್ತಃ ಶೋಭನೋ ವಕ್ತಾ ಆಶಾನಾಂ ಪ್ರಭವೋಽವ್ಯಯಃ ॥
ಗುರುಃ ಕಾಂತೋ ನಿಜಃ ಸರ್ಗಃ ಪವಿತ್ರಃ ಸರ್ವವಾಹನಃ ।
ಶೃಂಗೀ ಶೃಂಗಪ್ರಿಯೋ ಬಭ್ರೂ ರಾಜ ರಾಜೋ ನಿರಾಮಯಃ ॥
ಅಭಿರಾಮಃ ಸುಶರಣೋ ನಿರಾಮಃ ಸರ್ವಸಾಧನಃ ।
ಲಲಾಟಾಕ್ಷೋ ವಿಶ್ವದೇಹೋ ಹರಿಣೋ ಬ್ರಹ್ಮವರ್ಚಸಃ ॥೧೬೬॥

---

ಯೂ, ತನ್ನ ಪಾದವನ್ನು ಏಕಕಾಲದಲ್ಲಿಟ್ಟವನೂ, ವೈದ್ಯನೂ, ವರವನ್ನು ಕೊಡುವವನೂ, ಪ್ರಲಯಕಾಲದಲ್ಲಿ ಅಗ್ನಿರೂಪದಲ್ಲಿ ಹುಟ್ಟಿದವನೂ, ಆಕಾಶ ಸ್ವರೂಪನೂ, ಯಾಗಕ್ಕೆ ಧ್ಯೇಯದೇವತೆಯೂ, ಐರಾವತ ಎಂಬ ಆನೆಯ ಸ್ವರೂಪನೂ, ದೇವಿಗೆ ವಾಹನವಾದ ಹುಲಿಯ ಸ್ವರೂಪನೂ, ದೇವಿಗೆ ವಾಹನವಾದ ಸಿಂಹರೂಪನೂ, ಪೂಜ್ಯವಾದ ನಂದೀಶ್ವರನೂ, ಆಗಿರುತ್ತಾನೆ.

೧೬೪–೧೬೬. ಶಿವನು ದೇವತೆಗಳಲ್ಲಿ ಶ್ರೇಷ್ಠನೂ, ದೇವಸ್ವರೂಪನೂ ಶ್ರೇಷ್ಠನೂ, ಸ್ವರ್ಗಕ್ಕೆ ಅಧಿಪತಿಯೂ, ಪರಮಾತ್ಮಸ್ವರೂಪನೂ, ಸಮಾಧಿಯುಳ್ಳವನೂ, ಅಲಂಕಾರವನ್ನುಂಟುಮಾಡುವವನೂ, ಒಳ್ಳೇಮಾತುಗಾರನೂ, ದಿಕ್ಕುಗಳಿಗೆ ಮೂಲಕಾರಣನೂ, ನಾಶರಹಿತನೂ ಆಗಿರುತ್ತಾನೆ. ಶಿವನು ಗುರುವೂ, ಮನೋಹರನೂ, ಎಲ್ಲರನ್ನೂ ತನ್ನಂತೆಯೇ ಭಾವಿಸುವವನೂ, ಸೃಷ್ಟಿಕರ್ತನೂ, ಪವಿತ್ರನೂ, ಎಲ್ಲಾ ಶರೀರಗಳೇ ವಾಹನವಾಗುಳ್ಳವನೂ, ಕೈಲಾಸಪರ್ವತ ಸ್ವರೂಪನೂ, ಮೇರುಪರ್ವತದ ಮಧ್ಯಭಾಗದ ಶಿಖರದಲ್ಲಿ ಅತಿ ಪ್ರೀತಿಯುಳ್ಳವನೂ, ಹೊಂಬಣ್ಣದವನೂ, ರಾಜರಿಗೆ ರಾಜನೂ, ರೋಗಗಳಿಲ್ಲದವನೂ, ಸುಂದರನೂ, ಒಳ್ಳೆಯ ರಕ್ಷಕನೂ, ಯೋಗಿಗಳಿಗೆ ಅತಿ ಪ್ರಿಯನೂ, ಎಲ್ಲದಕ್ಕೂ ಕಾರಣನೂ, ಹಣೆಯಲ್ಲಿ ಕಣ್ಣುಳ್ಳವನೂ, ಪ್ರಪಂಚವೇ ಶರೀರವಾಗುಳ್ಳವನೂ. ಜಿಂಕೆಯೂ, ಬ್ರಹ್ಮವರ್ಚಸ್ಸುಳ್ಳವನೂ, ಆಗಿರುತ್ತಾನೆ.

ಸ್ಥಾವರಾಣಾಂ ಪತಿಶ್ಚೈವ ನಿಯತೇಂದ್ರಿಯ ವರ್ತನಃ ।
ಸಿದ್ಧಾರ್ಥಃ ಸರ್ವ ಭೂತಾರ್ಥೋಽಚಿಂತ್ಯಃ ಸತ್ಯಃ ಶುಚಿವ್ರತಃ ॥

ವ್ರತಾಧಿಪಃ ಪರಂ ಬ್ರಹ್ಮ ಮುಕ್ತಾನಾಂ ಪರಮಾ ಗತಿಃ ।
ವಿಮುಕ್ತೋ ಮುಕ್ತಕೇಶಶ್ಚ ಶ್ರೀಮಾನ್ ಶ್ರೀ ವರ್ಧನೋ ಜಗತ್ ॥

ಯಥಾ ಪ್ರಧಾನಂ ಭಗವಾನಿತಿ ಭಕ್ತ್ಯಾ ಸ್ತುತೋ ಮಯಾ ।
ಭಕ್ತಿ ಮೇವಂ ಪುರಸ್ಕೃತ್ಯ ಮಯಾ ಯಜ್ಞಪತಿರ್ವಿಭುಃ ॥೧೬೯॥

ತತೋ ಹ್ಯನುಜ್ಞಾಂ ಪ್ರಾಪ್ಯೈವಂ ಸುತೋ ಭಕ್ತಿ ಮತಾಂ ಗತಿಃ ।
ತಸ್ಮಾಲ್ಲಬ್ಧ್ವಾ ಸ್ತವಂ ಶಂಭೋ ರ್ನೃಪ ಸ್ತ್ರೈಲೋಕ್ಯ ವಿಶ್ರುತಃ ॥

ಅಶ್ವಮೇಧ ಸಹಸ್ರಸ್ಯ ಫಲಂ ಪ್ರಾಪ್ಯ ಮಹಾಯಶಾಃ ।
ಗಣಾಧಿಪತ್ಯಂ ಸಂಪ್ರಾಪ್ತ ಸ್ತಂಡಿನಸ್ತೇಜಸಾ ಪ್ರಭೋಃ ॥೧೭೦॥

---

೧೬೭. ಶಿವನು ಸ್ಥಾವರಪ್ರಪಂಚಕ್ಕೆ ಪತಿಯೂ, ಜಿತೇಂದ್ರಿಯನೂ, ಎಲ್ಲಾ ಕಾರ್ಯಸಿದ್ಧಿಯನ್ನೂ ಪಡೆವವನೂ, ಸರ್ವಪ್ರಪಂಚಗಳಿಗೂ ಧರ್ಮಾದಿ ಪುರುಷಾರ್ಥಗಳನ್ನು ಕೊಡುವವನೂ, ತಿಳಿಯಲು ಶಕ್ಯನೂ, ಸತ್ಯಸ್ವರೂಪನೂ, ಶುದ್ಧವಾದ ಮನಸ್ಸುಳ್ಳವನೂ ಆಗಿರುತ್ತಾನೆ.

೧೬೮. ಶಿವನು ವ್ರತಗಳಿಗೆ ಸ್ವಾಮಿಯೂ, ಪರಬ್ರಹ್ಮಸ್ವರೂಪನೂ, ಮೋಕ್ಷ ಹೊಂದಿದವನು ಸೇರತಕ್ಕ ವಸ್ತುವೂ, ಮುಕ್ತನಾದವನೂ, ಸಂನ್ಯಾಸಿಯೂ ಪುಣ್ಯಶಾಲಿಯೂ, ಐಶ್ವರ್ಯವನ್ನು ವೃದ್ಧಿಹೊಂದಿಸುವವನೂ, ಪ್ರಪಂಚ ಸ್ವರೂಪನೂ ಆಗಿರುತ್ತಾನೆ.

೧೬೯–೧೭೦. ತಂಡಿಮಹರ್ಷಿಯು ಈ ರೀತಿಯಾಗಿ ಶಿವನಾಮ ಸಹಸ್ರವನ್ನು ಭಕ್ತಿಯಿಂದ ತಾನು ಜಪಿಸಿದೆನೆಂದು ದೊರೆಗೆ ಹೇಳಿದನು. ಈ ಸದ್ಗುರುವಾದ ತಂಡಿಮರ್ಷಿಯಿಂದ ಅಪ್ಪಣೆ ಪಡೆದು ಭಕ್ತರಿಗೆ ಆರಾಧ್ಯನಾದ ಶಿವನನ್ನು ಅದೇ ರುದ್ರನಾಮ ಸಹಸ್ರದಿಂದ ಧ್ಯಾನಿಸಿದನು. ಅದ್ದರಿಂದ ದೊರೆಯು ಮೂರುಲೋಕದಲ್ಲಿಯೂ, ಪ್ರಸಿದ್ಧನಾಗಿಯೂ, ಸಾವಿರ ಅಶ್ವಮೇಧಯಾಗದ ಫಲವನ್ನು ಹೊಂದಿದನು. ಅಲ್ಲದೇ ದೊರೆಗೆ ತಂಡಿ ಮಹರ್ಷಿಯ ಅನುಗ್ರಹದಿಂದ ಶಿವಗಣಗಳಿಗೆ ಅಧಿಪತಿಯಾಗುವ ಪುಣ್ಯವೂ ಲಭಿಸಿತು.

ಯಃ ಪಠೇಚ್ಛೃಣುಯಾದ್ವಾಽಪಿ ಶ್ರಾವಯೇ ದ್ಬ್ರಾಹ್ಮಣಾ ನಪಿ ।
ಅಶ್ವಮೇಧ ಸಹಸ್ರಸ್ಯ ಫಲಂ ಪ್ರಾಪ್ನೋತಿ ವೈ ದ್ವಿಜಾಃ ॥೧೭೨॥

ಬ್ರಹ್ಮಘ್ನಶ್ಚ ಸುರಾಪಶ್ಚ ಸ್ತೇಯೀ ಚ ಗುರು ತಲ್ಪಗಃ ।
ಶರಣಾಗತ ಘಾತೀ ಚ ಮಿತ್ರ ವಿಶ್ವಾಸ ಘಾತಕಃ ॥೧೭೩॥

ಮಾತೃಹಾ ಪಿತೃಹಾ ಚೈವ ವೀರಹಾ ಭ್ರೂಣಹಾ ತಥಾ ।
ಸಂವತ್ಸರಂ ಕ್ರಮಾಜ್ಜಪ್ತ್ವಾ ತ್ರಿಸಂಧ್ಯಂ ಶಂಕರಾ ಶ್ರಮೇ ॥೧೭೪॥
ದೇವ ಮಿಷ್ಟ್ವಾ ತ್ರಿ ಸಂಧ್ಯಂ ಚ ಸರ್ವಪಾಪೈಃ ಪ್ರಮುಚ್ಯತೇ ॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ರುದ್ರ ಸಹಸ್ರನಾಮ ಕಥನಂ ನಾಮ ಪಂಚ ಷಷ್ಟಿತಮೋಽಧ್ಯಾಯಃ

---

೧೭೨–೧೭೪. ಎಲೈ ಬ್ರಾಹ್ಮಣರೇ, ಶಿವ ಸಹಸ್ರನಾಮವನ್ನು ಯಾರು ಪಠಿಸುತ್ತಾರೋ, ಕೇಳುತ್ತಾರೆಯೋ ಅಥವಾ ಬ್ರಾಹ್ಮಣರಿಗೆ ಹೇಳುತ್ತಾರೆಯೋ, ಅವರು ಸಾವಿರ ಅಶ್ವಮೇಧಯಾಗದ ಫಲವನ್ನು ಹೊಂದುತ್ತಾರೆ. ಬ್ರಾಹ್ಮಣನನ್ನು ಕೊಂದವನೇ ಆಗಲೀ, ಮದ್ಯಪಾನ ಮಾಡುವವನೇ ಆಗಲೀ, ಕಳ್ಳನಾಗಲೀ, ಗುರುವಿನ ಸ್ತ್ರೀಯ ಸಂಬಂಧ ಮಾಡಿದವನೇ ಆಗಲೀ, ಶರಣಾಗತರನ್ನು ಕೊಂದವನಾಗಲೀ, ಸ್ನೇಹಿತನನ್ನು ನಂಬಿಸಿ ದ್ರೋಹಮಾಡಿದವನಾಗಲೀ, ತಾಯಿಯನ್ನು ನಾಶ ಮಾಡಿದವನಾಗಲಿ, ತಂದೆಯನ್ನು ನಾಶಪಡಿಸಿದವನಾಗಲೀ, ಶೂರನನ್ನು ಕೊಂದವನಾಗಲಿ, ಮಕ್ಕಳನ್ನು ಕೊಂದವನಾಗಲಿ, ಇಂಥಾ ಮಹಾಪಾಪಿಗಳೂ ಸಹ ಒಂದು ವರ್ಷಕಾಲ ಬೆಳಿಗ್ಗೆ ಸಾಯಂಕಾಲ ಶಿವನ ಮಂದಿರದಲ್ಲಿ ತಪ್ಪದೇ ಈ ಸಹಸ್ರನಾಮದ ಜಪಮಾಡಿದರೆ ಉಂಟಾಗುವ ಫಲವನ್ನು ಹೇಳುವೆನು.

೧೭೫. ಅಂಥಾ ಕಠೋರ ಪಾಪಿಗಳೂ ಸಹ ಭಗವಂತನಾದ ಶಿವನನ್ನು ಮೂರುಕಾಲದಲ್ಲೂ ಹೀಗೆ ಧ್ಯಾನಿಸಿದರೆ ಎಲ್ಲಾ ಪಾಪಗಳಿಂದಲೂ ಮುಕ್ತರಾಗುವರೆಂಬುದು ನಿಶ್ಚಯವು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ರುದ್ರ ಸಹಸ್ರನಾಮ ಕಥನ ಎಂಬ ಅರವತ್ತೈದನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಷಟ್ಷಷ್ಟಿತಮೋಽಧ್ಯಾಯಃ

॥ ಸೂತ ಉವಾಚ ॥

ತ್ರಿಧನ್ವಾ ದೇವದೇವಸ್ಯ ಪ್ರಸಾದಾತ್ತಂಡಿನ ಸ್ತಥಾ ।
ಅಶ್ವಮೇಧ ಸಹಸ್ರಸ್ಯ ಫಲಂ ಪ್ರಾಪ್ಯ ಪ್ರಯತ್ನತಃ ॥ ೧ ॥

ಗಾಣಪತ್ಯಂ ದೃಢಂ ಪ್ರಾಪ್ತಃ ಸರ್ವದೇವ ನಮಸ್ಕೃತಃ ।
ಆಸೀ ತ್ರಿಧನ್ವನ ಶ್ಚಾಪಿ ವಿದ್ವಾಂಸ್ತ್ರಯ್ಯಾ ರುಣೋ ನೃಪಃ ॥ ೨ ॥

ತಸ್ಯ ಸತ್ಯ ವ್ರತೋ ನಾಮ ಕುಮಾರೋಽಭೂನ್ಮಹಾ ಬಲಃ ।
ತೇನ ಭಾರ್ಯಾ ವಿದರ್ಭಸ್ಯ ಹೃತಾ ಹತ್ವಾಽಮಿ ತೌಜಸಂ ॥ ೩ ॥

ಪಾಣಿಗ್ರಹಣ ಮಂತ್ರೇಷು ನಿಷ್ಠಾಮಪ್ರಾಪಿ ತೇ ಷ್ವಿಹ ।
ತೇನಾಧರ್ಮೇಣ ಸಂಯುಕ್ತಂ ರಾಜಾತ್ರಯ್ಯಾ ರುಣೋಽತ್ಯಜತ್ ॥

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಅರವತ್ತಾರನೆಯ ಅಧ್ಯಾಯವು.

೧-೩. ಸೂತನು ಹೇಳಿದನು: ತಂಡಿಮಹರ್ಷಿಗಳ ಅನುಗ್ರಹದಿಂದಲೂ, ಶಿವಾನುಗ್ರಹದಿಂದಲೂ, ತ್ರಿಧನ್ವಧೊರೆಯು ಪ್ರಯತ್ನಪೂರ್ವಕವಾಗಿ ಸಾವಿರ ಅಶ್ವಮೇಧ ಯಾಗದ ಫಲವನ್ನು ಹೊಂದಿದನು. ಆವನು ಗಣಗಳಿಗೆ ಅಧಿಪತಿಯೂ, ಎಲ್ಲಾ ದೇವತೆಗಳಿಂದ ನಮಸ್ಕರಿಸಲ್ಪಟ್ಟವನೂ, ಆದನು. ತ್ರಿಧನ್ವಧೊರೆಗೆ ವಿದ್ವಾಂಸನಾದ ತ್ರಯ್ಯಾರುಣ, ಎಂಬ ರಾಜಕುಮಾರನಿದ್ದನು. ತ್ರಯ್ಯಾರುಣನಿಗೆ ಬಲಿಷ್ಠನಾದ ಸತ್ಯವ್ರತನೆಂಬ ಕುಮಾರನಿದ್ದನು. ಸತ್ಯವ್ರತನು ಬಹಳ ತೇಜಸ್ವಿಯಾದ ವಿದರ್ಭದೇಶದ ಧೊರೆಯು ಪತ್ನಿಯನ್ನು ಅಪಹರಿಸಿದನು.

೪. ಸತ್ಯವ್ರತನು ವಿದರ್ಭದೇಶದ ರಾಜನ ಪತ್ನಿಯನ್ನು ಇನ್ನೂ ಪಾಣಿಗ್ರಹಣ ಹೋಮವಾಗುವುದಕ್ಕಿಂತ ಮುಂಚೆಯೇ ಅಪಹರಿಸಿದನು. ತ್ರಯ್ಯಾರುಣ ರಾಜನು ಇಂಥಾ ಅಧರ್ಮವಾದ ಕೆಲಸಮಾಡಿದ ಸತ್ಯವ್ರತನನ್ನು ತ್ಯಾಗಮಾಡಿದನು.

ಪಿತರಂಸೋ ಬ್ರವೀತ್ಯುಕ್ತಃ ಕ್ವಗಚ್ಛಾಮೀತಿ ವೈ ದ್ವಿಜಾಃ ।
ಪಿತಾ ತ್ವೇನ ಮುಕ್ತೋ ವಾಚ ಶ್ವಪಾಕೈಃ ಸಹ ವರ್ತಯ ॥ ೫ ॥

ಇತ್ಯುಕ್ತಃ ಸ ನಿಚಕ್ರಾಮ ನಗರಾ ದ್ವಚನಾತ್ಪಿತುಃ ।
ಸ ತು ಸತ್ಯವ್ರತೋ ಧೀಮಾನ್ ಶ್ವಪಾಕಾ ವಸಥಾಂತಿಕೇ ॥ ೬ ॥

ಪಿತ್ರಾ ತ್ಯಕ್ತೋಽವಸದ್ವೀರಃ ಪಿತಾ ಚಾಸ್ಯ ವನಂ ಯ ಯೌ ।
ಸರ್ವ ಲೋಕೇಷು ವಿಖ್ಯಾತ ಸ್ತ್ರಿಶಂಕುರಿತಿ ವೀರ್ಯವಾನ್ ॥ ೭ ॥

ವಸಿಷ್ಠ ಕೋಪಾತ್ಪುಣ್ಯಾತ್ಮಾ ರಾಜಾ ಸತ್ಯವ್ರತಃ ಪುರಾ ।
ವಿಶ್ವಾಮಿತ್ರೋ ಮಹಾತೇಜಾ ವರಂ ದತ್ವಾ ತ್ರಿಶಂಕವೇ ॥ ೮ ॥

ರಾಜ್ಯೇಽಭಿಷಿಚ್ಯ ತಂ ಪಿತ್ರೇ ಯೋಜಯಾ ಮಾಸ ತಂ ಮುನಿಃ ।
ಮಿಷತಾಂ ದೇವತಾನಾಂ ಚ ವಸಿಷ್ಠಸ್ಯ ಚ ಕೌಶಿಕಃ ॥ ೯ ॥

---

೫. ಎಲೈ ಬ್ರಾಹ್ಮಣರೇ, ಹೀಗೆ ತ್ಯಾಗಮಾಡಲ್ಪಟ್ಟ ಸತ್ಯವ್ರತನು ತನ್ನ ತಂದೆಯನ್ನು ಕುರಿತು, ನಾನು ಎಲ್ಲಿಗೆ ಹೋಗಲಿ ? ಎಂದು ಕೇಳಿದನು. ತ್ರಯ್ಯಾರುಣನಾದರೋ, ಚಂಡಾಲರೊಂದಿಗೆ ವಾಸಮಾಡು, ಎಂದು ಸತ್ಯವ್ರತನಿಗೆ ಹೇಳಿದನು.

೬-೭. ಹೀಗೆ ತಂದೆಯಿಂದ ಹೇಳಲ್ಪಟ್ಟ ಸತ್ಯವ್ರತನು ತಂದೆಯ ಮಾತಿನಂತೆ ಪಟ್ಟಣದಿಂದ ಹೊರಗೆ ಹೊರಟುಹೋದನು. ಅನಂತರ ಬುದ್ಧಿವಂತನೂ, ವೀರ್ಯವಂತನೂ ಆದ ಸತ್ಯವ್ರತನು ಚಂಡಾಲರ ಮನೆಯ ಸಮೀಪದಲ್ಲಿ ವಾಸಮಾಡಲು ಪ್ರಾರಂಭಿಸಿದನು. ಇವನ ತಂದೆಯಾದ ತ್ರಯ್ಯಾರುಣನು ಕಾಡಿಗೆ ಹೊರಟು ಹೋದನು. ಹೀಗೆ ತಂದೆಯಿಂದ ಕಳುಹಿಸಲ್ಪಟ್ಟ ಸತ್ಯವ್ರತನು ಚಂಡಾಲರ ಜೊತೆಯಲ್ಲಿರುತ್ತಾ, ವೀರ್ಯವಂತನಾಗಿಯೂ, ತ್ರಿಶಂಕು, ಎಂದು ಮೂರುಲೋಕದಲ್ಲಿಯೂ ಪ್ರಸಿದ್ಧನಾಗಿಯೂ ಇದ್ದನು.

೮-೧೦. ಹಿಂದೆ ಸತ್ಯವ್ರತನಿಗೆ ಪುಣ್ಯಾತ್ಮನಾದ ತ್ರಿಶಂಕುಸ್ಥಾನ ಲಭಿಸಲು ವಸಿಷ್ಠಮಹರ್ಷಿಗಳ ಕೋಪವೇ ಕಾರಣವು. ಮಹಾ ತೇಜಸ್ವಿಯಾದ ವಿಶ್ವಾಮಿತ್ರನು ತ್ರಿಶಂಕುವಿಗೆ ವರವನ್ನು ಕೊಟ್ಟು ಅವನ ತಂದೆಯ

ಸಶರೀರಂ ತದಾ ತಂ ವೈ ದಿವ ಮಾರೋಪಯ ದ್ವಿಭುಃ ।
ತಸ್ಯ ಸತ್ಯವ್ರತಾ ನಾಮ ಭಾರ್ಯಾ ಕೇಕಯ ವಂಶಜಾ ॥೧೦॥
ಕುಮಾರಂ ಜನಯಾಮಾಸ ಹರಿಶ್ಚಂದ್ರ ಮಕಲ್ಮಷಂ ।
ಹರಿಶ್ಚಂದ್ರಸ್ಯ ಚ ಸುತೋ ರೋಹಿತೋ ನಾಮ ವೀರ್ಯವಾನ್ ॥೧೧॥
ಹರಿತೋ ರೋಹಿತಸ್ಯಾ ಥ ಧುಂಧುರ್ಹಾರಿತ ಉಚ್ಯತೇ ।
ವಿಜಯಶ್ಚ ಸುತೇಜಾಶ್ಚ ಧುಂಧು ಪುತ್ರೌ ಬಭೂವತುಃ ॥೧೨॥
ಜೇತಾ ಕ್ಷತ್ರಸ್ಯ ಸರ್ವತ್ರ ವಿಜಯಸ್ತೇನ ಸ ಸ್ಮೃತಃ ।
ರುಚಕ ಸ್ತಸ್ಯ ತನಯೋ ರಾಜಾ ಪರಮ ಧಾರ್ಮಿಕಃ ॥೧೩॥
ರುಚಕಸ್ಯ ವೃಕಃ ಪುತ್ರಃ ತಸ್ಮಾದ್ಬಾಹುಶ್ಚ ಜಜ್ಞಿವಾನ್ ।
ಸಗರ ಸ್ತಸ್ಯ ಪುತ್ರೋಽಭೂತ್ ರಾಜಾ ಪರಮಧಾರ್ಮಿಕಃ ॥೧೪॥

---

ಸ್ಥಾನದಲ್ಲಿ ಪಟ್ಟಾಭಿಷೇಕ ಮಾಡಿಸಿ ಅವನ ಕೈಲಿ ಯಾಗಮಾಡಿಸಿದನು. ಆಗ ವಿಶ್ವಾಮಿತ್ರನು ಸ್ವರ್ಗದ ದೇವತೆಗಳೂ, ವಸಿಷ್ಠನೂ ನೋಡುತ್ತಿರಲು, ತ್ರಿಶಂಕುವನ್ನು ಇಹಲೋಕದ ಶರೀರದಲ್ಲಿಯೇ ಸ್ವರ್ಗಕ್ಕೇರಿಸಿದನು. ಅವನಿಗೆ ಕೇಕಯ ವಂಶದ ಸತ್ಯವ್ರತಾ, ಎಂಬ ಹೆಸರಿನ ಪತ್ನಿಯಿದ್ದಳು.

೧೧-೧೨. ಸತ್ಯವ್ರತೆಯು ಶುದ್ಧಸ್ವಭಾವದ ಹರಿಶ್ಚಂದ್ರನನ್ನು ಪ್ರಸವಿಸಿದಳು. ಪರಾಕ್ರಮಶಾಲಿಯಾದ ರೋಹಿತನೆಂಬುವನು ಹರಿಶ್ಚಂದ್ರನ ಮಗನು. ಹರಿತನು ರೋಹಿತನ ಮಗನು. ಹರಿತನ ಮಗನು ಧುಂಧುವು. ಧುಂಧುವಿಗೆ ವಿಜಯ, ಸುತೇಜ, ಎಂಬಿಬ್ಬರು ಮಕ್ಕಳಾದರು.

೧೩-೧೪. ಕ್ಷತ್ರಿಯ ವಂಶವನ್ನೆಲ್ಲವನ್ನೂ ಜಯಿಸಿದ್ದರಿಂದಲೇ ವಿಜಯ ಎಂಬ ಹೆಸರು ಅವನಿಗೆ ಬಂದಿತು. ವಿಜಯನ ಮಗನು ರುಚಕನು. ಅವನು ಧರ್ಮಾತ್ಮನಾಗಿದ್ದನು. ವೃಕ, ಎಂಬುವನು ರುಚಕನ ಮಗನು. ವೃಕನಿಂದ ಬಾಹುವಿನ ಜನನವಾಯಿತು. ಬಾಹುವಿಗೆ ಪರಮ ಧರ್ಮಿಷ್ಠನಾದ ಸಗರನೆಂಬ ಮಗನಾದನು.

ದ್ವೇ ಭಾರ್ಯೇ ಸಗರಸ್ಯಾಪಿ ಪ್ರಭಾ ಭಾನುಮತೀ ತಥಾ ।
ತಾಭ್ಯಾಮಾರಾಧಿತಃ ಪೂರ್ವಮೌರ್ವೋಽಗ್ನಿಃ ಪುತ್ರ ಕಾಮ್ಯಯಾ ॥

ಔರ್ವಸ್ತುಷ್ಟ ಸ್ತಯೋಃ ಪ್ರಾದಾ ದ್ಯ ಥೇಷ್ಟಂ ವರಮುತ್ತಮಂ ।
ಏಕಾ ಷಷ್ಟಿ ಸಹಸ್ರಾಣಿ ಸುತಮೇಕಂ ಪರಾ ತಥಾ ॥೧೬॥

ಅಗೃಹ್ಣಾ ದ್ವಂಶ ಕರ್ತಾರಂ ಪ್ರಭಾಽಗೃಹ್ಣಾ ತ್ಸುತಾನ್ ಬಹೂನ್ ।
ಏಕಂ ಭಾನುಮತಿಃ ಪುತ್ರ ಮಗೃಹ್ಣಾದ ಸಮಂಜಸಂ ॥೧೭॥

ತತಃ ಷಷ್ಟಿ ಸಹಸ್ರಾಣಿ ಸುಷುವೇ ಸಾ ತು ವೈ ಪ್ರಭಾ ।
ಖನಂತಃ ಪೃಥಿವೀಂ ದಗ್ಧಾ ವಿಷ್ಣು ಹುಂಕಾರ ಮಾರ್ಗಣೈಃ ॥೧೮॥

ಅಸಮಂಜಸ್ಯ ತನಯಃ ಸೋಽಂಶುಮಾನ್ ನಾಮ ವಿಶ್ರುತಃ ।
ತಸ್ಯ ಪುತ್ರೋ ದಿಲೀಪಸ್ತು ದಿಲೀಪಾತ್ತು ಭಗೀರಥಃ ॥೧೯॥

---

೧೫. ಸಗರನಿಗೆ ಪ್ರಭಾ, ಭಾನುಮತೀ, ಎಂಬಿಬ್ಬರು ಪತ್ನಿಯರಿದ್ದರು. ಇವರಿಬ್ಬರೂ ಮಕ್ಕಳಾಗಬೇಕೆಂಬ ಅಪೇಕ್ಷೆಯಿಂದ ಬಡವಾಗ್ನಿಯನ್ನು ಪೂಜಿಸಿದರು.

೧೬–೧೮. ಬಡವಾಗ್ನಿಯು ಸಂತುಷ್ಟನಾಗಿ ಅವರಿಗೆ ಬೇಕಾದ ಶ್ರೇಷ್ಠವಾದ ವರಗಳನ್ನು ಕೊಟ್ಟನು. ಅವನು ಅವರಲ್ಲಿ ಒಬ್ಬಳು ಅರವತ್ತುಸಾವಿರ ಮಕ್ಕಳನ್ನೂ, ಇನ್ನೊಬ್ಬಳು ಒಬ್ಬ ಮಗನನ್ನೂ ಪಡೆಯಬೇಕೆಂದು ವರವನ್ನು ನೀಡಿದನು. ವಂಶೋದ್ಧಾರಕರಾದ ಅನೇಕ ಮಂದಿ ಮಕ್ಕಳನ್ನು ಪ್ರಭೆಯು ಹೆತ್ತಳು. ಭಾನುಮತಿಯು ಅಸಮಂಜಸನೆಂಬ ಒಬ್ಬ ಮಗನನ್ನು ಮಾತ್ರ ಪ್ರಸವಿಸಿದಳು. ಪ್ರಭೆಯು ಅರವತ್ತುಸಾವಿರ ಮಕ್ಕಳನ್ನು ಪಡೆದಳು. ಈ ಮಕ್ಕಳು ಭೂಮಿಯನ್ನು ಅಗೆಯುತ್ತಾ ವಿಷ್ಣುವಿನ ಹುಂಕಾರವೆಂಬ ಬಾಣದಿಂದ ಸುಡಲ್ಪಟ್ಟರು.

೧೯–೨೦. ಅಸಮಂಜಸನ ಮಗನು "ಅಂಶುಮಾನ್" ಎಂದು ಪ್ರಸಿದ್ಧನಾಗಿದ್ದನು. ಅವನ ಮಗನು ದಿಲೀಪನು. ದಿಲೀಪನ ಮಗನು

ಯೇನ ಭಾಗೀರಥೀ ಗಂಗಾ ತಪಃ ಕೃತ್ವಾಽವತಾರಿತಾ ।
ಭಗೀರಥ ಸುತಶ್ಚಾಪಿ ಶ್ರುತೋ ನಾಮ ಬಭೂವ ಹ ॥೨೦॥

ನಾಭಾಗಸ್ತಸ್ಯ ದಾಯಾದೋ ಭವಭಕ್ತಃ ಪ್ರತಾಪವಾನ್ ।
ಅಂಬರೀಷಃ ಸುತಸ್ತಸ್ಯ ಸಿಂಧುದ್ವೀಪ ಸ್ತತೋಽಭವತ್ ॥೨೧॥

ನಾಭಾಗೇ ನಾಂಬರೀಷೇಣ ಭುಜಾಭ್ಯಾಂ ಪರಿಪಾಲಿತಾ ।
ಬಭೂವ ವಸುಧಾಽತ್ಯರ್ಥಂ ತಾಪತ್ರಯ ವಿವರ್ಜಿತಾ ॥೨೨॥

ಅಯುತಾಯು ಸ್ಸುತಸ್ತಸ್ಯ ಸಿಂಧು ದ್ವೀಪಸ್ಯ ವೀರ್ಯವಾನ್ ।
ಪುತ್ರೋಽಯುತಾಯುಷೋಧೀಮಾನೃತುಪರ್ಣೋ ಮಹಾಯಶಾಃ

ದಿವ್ಯಾಕ್ಷ ಹೃದಯಜ್ಞೋ ವೈ ರಾಜಾ ನಲ ಸಖೋ ಬಲೀ ।
ನಲೌ ದ್ವಾವೇವ ವಿಖ್ಯಾತೌ ಪುರಾಣೇಷು ದೃಢವ್ರತೌ ॥೨೪॥

---

"ಭಗೀರಥನು". ಈ ಭಗೀರಥನೇ ತಪಸ್ಸುಮಾಡಿ ಗಂಗಾ ನದಿಯನ್ನು ಭೂಮಿಗೆ ತಂದವನು. ಭಗೀರಥನಿಗೆ, ಶ್ರುತ ಎಂಬ ಮಗನಾದನು.

೨೧. ಶ್ರುತನ ಜ್ಞಾತಿಯಾದ ನಾಭಾಗನು ಈಶ್ವರ ಭಕ್ತನಾಗಿಯೂ, ಪರಾಕ್ರಮಶಾಲಿಯಾಗಿಯೂ ಇದ್ದನು. ಅವನ ಮಗನು ಅಂಬರೀಷನು. ಅವನಿಗೆ ಸಿಂಧು ದ್ವೀಪನೆಂಬ ಮಗನಾದನು.

೨೨. ನಾಭಾಗನೂ, ಮತ್ತು ಅಂಬರೀಷನೂ, ಧೊರೆಗಳಾಗಿದ್ದಾಗ ಅವರ ದೇಶದಲ್ಲಿ ಯಾವ ವಿಧವಾದ ತಾಪತ್ರಯಗಳೂ ಸ್ವಲ್ಪವೂ ಇರಲಿಲ್ಲ.

೨೩. ಅಂಬರೀಷನ ಮಗನು ಅಯುತಾಯುಸ್ಸು. ಅವನ ಮಗನು ಬುದ್ಧಿವಂತನೂ, ಕೀರ್ತಿವಂತನೂ, ಪರಾಕ್ರಮಶಾಲಿಯೂ ಆದ ಋತುಪರ್ಣನು.

೨೪. ಬಲಿಷ್ಠನೂ, ನಲನ ಸ್ನೇಹಿತನೂ ಆದ ಋತುಪರ್ಣನು ಕುಶಲನಾಗಿ ಪಗಡೆಯಾಡುವುದರಲ್ಲಿ ನಿಪುಣನಾಗಿದ್ದನು. ದೃಢವಾದ ಮನಸ್ಸುಳ್ಳ ನಲರು ಪುರಾಣಗಳಲ್ಲಿ ಇಬ್ಬರು ಪ್ರಸಿದ್ಧರಾಗಿದ್ದಾರೆ.

ವೀರಸೇನ ಸುತಶ್ಚಾನ್ಯೋ ಯಶ್ಚೇಕ್ಷ್ವಾಕು ಕುಲೋದ್ಭವಃ ।
ಋತುಪರ್ಣಸ್ಯ ಪುತ್ರೋಽಭೂತ್ಸಾರ್ವಭೌಮಃ ಪ್ರಜೇಶ್ವರಃ ॥

ಸುದಾಸ ಸ್ತಸ್ಯ ತನಯೋ ರಾಜಾ ತ್ವಿಂದ್ರ ಸಮೋಽಭವತ್ ।
ಸುದಾಸಸ್ಯ ಸುತಃ ಪ್ರೋಕ್ತೋ ಸೌದಾಸೋ ನಾಮ ಪಾರ್ಥಿವಃ ॥

ಖ್ಯಾತಃ ಕಲ್ಮಾಷ ಪಾದೋ ವೈ ನಾಮ್ನಾ ಮಿತ್ರಸಹಶ್ಚ ಸಃ ।
ವಸಿಷ್ಠಸ್ತು ಮಹಾತೇಜಾಃ ಕ್ಷೇತ್ರೇ ಕಲ್ಮಾಷ ಪಾದಕೇ ॥೨೭॥

ಅಶ್ಮಕಂ ಜನಯಾ ಮಾಸ ಇಕ್ಷ್ವಾಕು ಕುಲವರ್ಧನಂ ।
ಅಶ್ಮಕ ಸ್ಯೋತ್ತರಾಯಾಂ ತು ಮೂಲಕಸ್ತು ಸುತೋಽಭವತ್ ॥

ಸ ಹಿ ರಾಮ ಭಯಾದ್ರಾಜಾ ಸ್ತ್ರೀಭಿಃ ಪರಿವೃತೋ ವನೇ ।
ಬಿಭರ್ತಿ ತ್ರಾಣ ಮಿಚ್ಛನ್ ವೈ ನಾರೀ ಕವಚ ಮುತ್ತಮಂ ॥೨೯॥

---

೨೫–೨೬. ಇಬ್ಬರು ಪುರಾಣ ಪ್ರಸಿದ್ಧರಾದ ನಲರಲ್ಲಿ, ಒಬ್ಬನು ವೀರ ಸೇನನ ಮಗನು, ಮತ್ತೊಬ್ಬನು ಇಕ್ಷ್ವಾಕು ವಂಶದಲ್ಲಿ ಹುಟ್ಟಿದವನು. ಜನಗಳ ರಕ್ಷಕನಾಗಿಯೂ, ಚಕ್ರವರ್ತಿಯಾಗಿಯೂ, ಇದ್ದ ಸುದಾಸ ನೆಂಬುವನು ಋತುಪರ್ಣನ ಮಗನು. ಸುದಾಸನು ಇಂದ್ರನಿಗೆ ಸಮಾನ ವಾದ ವೈಭವದಿಂದ ಆಳಿದನು. ಸುದಾಸನ ಮಗನು ಸೌದಾಸನೆಂದು ಹೇಳಲ್ಪಟ್ಟಿದೆ.

೨೭–೨೯. ಸೌದಾಸನೇ ಕಲ್ಮಾಷಪಾದ, ಎಂಬ ಹೆಸರಿನಿಂದ ಸ್ನೇಹ ಪರನಾದ ರಾಜನಾಗಿದ್ದನು. ಮಹಾತೇಜಸ್ವಿಗಳಾದ ವಸಿಷ್ಠರ ಅನುಗ್ರಹ ದಿಂದ ಕಲ್ಮಾಷಪಾದನಿಗೆ ಇಕ್ಷ್ವಾಕು ವಂಶೋದ್ಧಾರಕನಾದ ಅಶ್ಮಕ, ಎಂಬ ಮಗನು ಜನಿಸಿದನು. ಅಶ್ಮಕನಿಗೆ ಉತ್ತರಾ, ಎಂಬ ಸ್ತ್ರೀಯ ಸಂಬಂಧದಿಂದ, ಮೂಲಕ ಎಂಬುವನು ಹುಟ್ಟಿದನು. ಮೂಲಕನು ಪರಶುರಾಮನ ಭಯದಿಂದ, ಸ್ತ್ರೀಯರಿಂದ ಸುತ್ತುವರಿಯಲ್ಪಟ್ಟವನಾಗಿ, ಶ್ರೇಷ್ಠವಾದ ನಾರೀ ಕವಚದ ಸಂಬಂಧದಿಂದ (ಸಹಾಯದಿಂದ) ತನ್ನನ್ನು ರಕ್ಷಿಸಿಕೊಂಡನು.

ಮೂಲಕಸ್ಯಾಪಿ ಧರ್ಮಾತ್ಮಾ ರಾಜಾ ಶತರಥಃ ಸುತಃ ।
ತಸ್ಮಾಚ್ಛತರಥಾ ಜ್ಜಜ್ಞೇ ರಾಜಾ ತ್ವಿಲ ವಿಲೋ ಬಲೀ ॥೩೦॥
ಆಸೀತ್ತ್ವೈಲವಿಲಿಃ ಶ್ರೀಮಾನ್ ವೃದ್ಧ ಶರ್ಮಾ ಪ್ರತಾಪವಾನ್ ।
ಪುತ್ರೋ ವಿಶ್ವ ಸಹಸ್ತಸ್ಯ ಪಿತೃಕನ್ಯಾ ವ್ಯಜೀಜನತ್ ॥೩೧॥
ದಿಲೀಪಸ್ತಸ್ಯ ಪುತ್ರೋಽಭೂ ತ್ಖಟ್ವಾಂಗ ಇತಿ ವಿಶ್ರುತಃ ।
ಯೇನ ಸ್ವರ್ಗಾದಿಹಾಗತ್ಯ ಮುಹೂರ್ತಂ ಪ್ರಾಪ್ಯ ಜೀವಿತಂ ॥೩೨॥
ತ್ರಯೋಽಗ್ನಯ ಸ್ತ್ರಯೋ ಲೋಕಾಃ ಬುಧ್ಧ್ಯಾ ಸತ್ಯೇನ ವೈ ಜಿತಾಃ
ದೀರ್ಘಬಾಹುಃ ಸುತಸ್ತಸ್ಯ ರಘು ಸ್ತಸ್ಮಾದ ಜಾಯತ ॥೩೩॥
ಅಜಃ ಪುತ್ರೋ ರಘೋ ಶ್ಚಾಪಿ ತಸ್ಮಾಜ್ಜಜ್ಞೇ ಚ ವೀರ್ಯವಾನ್ ।
ರಾಜಾ ದಶರಥ ಸ್ತಸ್ಮಾಚ್ಛ್ರೀಮಾ ನಿಕ್ಷ್ವಾಕು ವಂಶಕೃತ್ ॥೩೪॥

---

೩೦–೩೧. ಮೂಲಕನಿಗೆ ಧರ್ಮಾತ್ಮನಾದ ಶತರಥ, ಎಂಬ ಮಗನಾದನು. ಶತರಥನಿಗೆ "ಇಲವಿಲ" ಎಂಬ ರಾಜಕುಮಾರನಾದನು. ಇಲವಿಲನಿಗೆ ಶ್ರೀಮಂತನೂ, ಪರಾಕ್ರಮಶಾಲಿಯೂ ಆದ ವಿಶ್ವಸಹ, ಎಂಬ ಮಗನಾದನು. ವಿಶ್ವಸಹನಿಗೂ, ಪಿತೃಕನ್ಯೆಗೂ, ವಿವಾಹವಾಯಿತು.

೩೨–೩೪. ದಿಲೀಪನ ಮಗನು ಖಟ್ವಾಂಗನೆಂದು ಪ್ರಸಿದ್ಧನಾಗಿದ್ದನು. ಖಟ್ವಾಂಗನು ಸ್ವರ್ಗದಿಂದ ಭೂಮಿಯಲ್ಲಿ ಇಳಿದು ಕ್ಷಣಕಾಲ ಜೀವನವನ್ನು ಹೊಂದಿದ್ದನು. ಅವನಿಂದ ಮೂರು ಅಗ್ನಿಗಳೂ, ಲೋಕಗಳೂ ಬುದ್ಧಿಯಿಂದಲೂ, ಸತ್ಯದಿಂದಲೂ ಜಯಿಸಲ್ಪಟ್ಟವು. ಖಟ್ವಾಂಗನ ಮಗನು ದೀರ್ಘಬಾಹುವು. ದೀರ್ಘಬಾಹುವಿನಿಂದ ರಘುವು ಉತ್ಪನ್ನನಾದನು. ಅಜನು ರಘುವಿನ ಮಗನು. ಅಜನಿಂದ ಶೂರನಾದ ದಶರಥನು ಹುಟ್ಟಿದನು. ಇವನು ಶ್ರೀಮಂತನೂ, ಇಕ್ಷ್ವಾಕು ವಂಶೋದ್ಧಾರಕನೂ, ಆಗಿದ್ದನು.

೩೫–೩೭. ದಶರಥನಿಗೆ ರಾಮನೆಂಬ ಧರ್ಮಜ್ಞನೂ, ವೀರನೂ, ಪ್ರಪಂಚ ಪ್ರಸಿದ್ಧನೂ, ಆದ ಮಗನಿದ್ದನು. ಅಲ್ಲದೇ ದಶರಥನಿಗೆ ವೀರ

ರಾಮೋ ದಶರಥಾ ದ್ವೀರೋ ಧರ್ಮಜ್ಞೋ ಲೋಕ ವಿಶ್ರುತಃ ।
ಭರತೋ ಲಕ್ಷ್ಮಣ ಶ್ಚೈವ ಶತ್ರುಘ್ನಶ್ಚ ಮಹಾಬಲಃ ॥೩೫॥

ತೇಷಾಂ ಶ್ರೇಷ್ಠೋ ಮಹಾತೇಜಾ ರಾಮಃ ಪರಮ ವೀರ್ಯವಾನ್ ।
ರಾವಣಂ ಸಮರೇ ಹತ್ವಾ ಯಜ್ಞೈ ರಿಷ್ಟ್ವಾ ಚ ಧರ್ಮವಿತ್ ॥೩೬॥

ದಶವರ್ಷ ಸಹಸ್ರಾಣಿ ರಾಮೋ ರಾಜ್ಯಂ ಚಕಾರ ಸಃ ।
ರಾಮಸ್ಯ ತನಯೋ ಜಜ್ಞೇ ಕುಶ ಇತ್ಯಭಿ ವಿಶ್ರುತಃ ॥೩೭॥

ಲವಶ್ಚ ಸುಮಹಾಭಾಗಃ ಸತ್ಯವಾನಭವ ತ್ಸುಧೀಃ ।
ಅತಿಥಿಸ್ತು ಕುಶಾಜ್ಜಜ್ಞೇ ನಿಷಧಸ್ತಸ್ಯ ಚಾತ್ಮಜಃ ॥೩೮॥

ನಲಸ್ತು ನಿಷಧಾ ಜ್ಜಾತಃ ನಭಸ್ತಸ್ಮಾಥಜಾಯತ ।
ನಭಸಃ ಪುಂಡರೀಕಾಖ್ಯಃ ಕ್ಷೇಮಧನ್ವಾ ತತಃ ಸ್ಮೃತಃ ॥೩೯॥

---

ರಾದ ಭರತ, ಲಕ್ಷ್ಮಣ ಮತ್ತು ಶತ್ರುಘ್ನರೆಂಬ ಮಕ್ಕಳೂ ಇದ್ದರು. ಅವರುಗಳಲ್ಲಿ ರಾಮನು ಶ್ರೇಷ್ಠನಾಗಿಯೂ, ಬಹಳ ಪರಾಕ್ರಮಶಾಲಿ ಯಾಗಿಯೂ ಇದ್ದನು. ಅವನು ರಾವಣನನ್ನು ಯುದ್ಧದಲ್ಲಿ ಸಂಹಾರ ಮಾಡಿದನು. ಮತ್ತು ಯಾಗಗಳನ್ನೂ ಮಾಡಿದನು. ಈ ರೀತಿಯಲ್ಲಿ ಅವನು ಹತ್ತುಸಾವಿರ ವರ್ಷಗಳು ರಾಜ್ಯಭಾರಮಾಡಿದನು. ರಾಮನ ಮಗನು ಕುಶನೆಂದು ಬಹಳ ಪ್ರಸಿದ್ಧನಾಗಿದ್ದನು.

೩೮. ರಾಮನಿಗೆ ಬಹಳ ಪುಣ್ಯವಂತನೂ, ಸತ್ಯವಂತನೂ, ವಿದ್ವಾಂಸನೂ ಆದ ಲವನೂ ಇನ್ನೊಬ್ಬ ಮಗನು. ಕುಶನಿಗೆ ಅತಿಥಿ ಎಂಬ ಮಗನಿದ್ದನು. ನಿಷಧನು ಅತಿಥಿಯ ಮಗನು.

೩೯. ನಿಷಧನಿಗೆ ನಲನು ಮಗನು. ನಲನಿಂದ ನಭಸ್ಸು ಎಂಬುವನು ಹುಟ್ಟಿದನು. ನಭಸ್ಸಿಗೆ ಪುಂಡರೀಕನೆಂಬ ಮಗನಾದನು. ಪುಂಡರೀಕನಿಗೆ ಕ್ಷೇಮಧನ್ವಾ ಎಂಬ ಮಗನಾದನು.

ತಸ್ಯ ಪುತ್ರೋಽಭವದ್ವೀರೋ ದೇವಾನೀಕಃ ಪ್ರತಾಪವಾನ್ ।
ಅಹೀನರಃ ಸುತಸ್ತಸ್ಯ ಸಹಸ್ರಾಕ್ಷಃ ತತಃ ಪರಃ ॥೪೦॥

ಶುಭಶ್ಚಂದ್ರಾವಲೋಕಶ್ಚ ತಾರಾಪೀಡಸ್ತತೋಽಭವತ್ ।
ತಸ್ಯಾತ್ಮಜಶ್ಚಂದ್ರಗಿರಿ ರ್ಭಾನುಶ್ಚಂದ್ರಸ್ತತೋಽಭವತ್ ॥೪೧॥

ಶ್ರುತಾಯು ರಭವತ್ತಸ್ಮಾದ್ಬೃಹದ್ಬಲ ಇತಿ ಸ್ಮೃತಃ ।
ಭಾರತೇಯೋ ಮಹಾತೇಜಾಃ ಸೌಭದ್ರೇಣ ನಿಪಾತಿತಃ ॥೪೨॥

ಏತೇ ಇಕ್ಷ್ವಾಕು ದಾಯಾದಾ ರಾಜಾನಃ ಪ್ರಾಯಶಃ ಸ್ಮೃತಾಃ ।
ವಂಶೇ ಪ್ರಧಾನಾ ಏತಸ್ಮಿನ್ ಪ್ರಾಧಾನ್ಯೇನ ಪ್ರಕೀರ್ತಿತಾಃ ॥೪೩॥

ಸರ್ವೇ ಪಾಶುಪತೇ ಜ್ಞಾನ ಮಧೀತ್ಯ ಪರಮೇಶ್ವರಂ ।
ಸಮಭ್ಯರ್ಚ್ಯ ಯಥಾ ಜ್ಞಾನ ಮಿಷ್ಟ್ವಾ ಯಜ್ಞೈರ್ಯಥಾ ವಿಧಿ ॥೪೪॥

---

೪೦. ಕ್ಷೇಮಧ್ವಜನಿಗೆ ಯಾಗಮಾಡಿದವನೂ, ಶೂರನೂ ಆದ ವೀರನು ಮಗನು. ವೀರನಿಗೆ ಅಹೀನರನು ಮಗನು. ಅಹೀನರನಿಗೆ ಸಹಸ್ರಾಕ್ಷನೆಂಬ ಮಗನಾದನು.

೪೧–೪೨. ಸಹಸ್ರಾಕ್ಷನಿಗೆ ಮಂಗಳಕರನೂ, ಚಂದ್ರನಂತೆ ಕಾಂತಿಯುಕ್ತನೂ ಆದ ತಾರಾಪೀಡನೆಂಬ ಮಗನಾದನು. ತಾರಾಪೀಡನ ಮಗನು ಚಂದ್ರಗಿರಿಯು. ಚಂದ್ರಗಿರಿಯ ಮಗನು ಭಾನುಚಂದ್ರನು. ಭಾನುಚಂದ್ರನಿಗೆ ಶ್ರುತಾಯು ಎಂಬ ಮಗನು ಹುಟ್ಟಿದನು. ಶ್ರುತಾಯುವಿನ ಮಗನು ಬೃಹದ್ಬಲನೆಂದು ಹೇಳಲ್ಪಟ್ಟಿದೆ. ಸುಭದ್ರೆಯ ಮಗನಾದ ಅಭಿಮನ್ಯುವಿನಿಂದ ಈ ಬೃಹದ್ಬಲನು ಭಾರತ ಯುದ್ಧದಲ್ಲಿ ಸೋಲಿಸಲ್ಪಟ್ಟನು.

೪೩. ಇಕ್ಷ್ವಾಕು ವಂಶದ ಜ್ಞಾತಿಗಳನ್ನೆಲ್ಲರನ್ನೂ ಸಾಮಾನ್ಯವಾಗಿ ಹೇಳಿದಂತಾಯಿತು. ಈ ವಂಶದಲ್ಲಿ ಪ್ರಾಮುಖ್ಯವುಳ್ಳ ಧೊರೆಗಳನ್ನೆಲ್ಲರನ್ನೂ ತಿಳಿದ ಹಾಗಾಯಿತು.

೪೪–೪೫. ಈ ಎಲ್ಲ ಧೊರೆಗಳೂ ಪಶುಪತಿಯಾದ ಪರಮೇಶ್ವರನ ಜ್ಞಾನವನ್ನು ಚೆನ್ನಾಗಿ ಸಂಪಾದಿಸಿ, ಪರಿಪಾಲಿಸಿ, ಚೆನ್ನಾಗಿಯೂ ಅವನನ್ನು ಯಾಗಗಳಿಂದಲೂ ಪೂಜಿಸಿ, ಮಹನೀಯರಾಗಿದ್ದು ಸ್ವರ್ಗಸ್ಥ

ದಿವಂ ಗತಾ ಮಹಾತ್ಮಾನಃ ಕೇಚಿನ್ಮೋಕ್ಷಾತ್ಮ ಯೋಗಿನಃ ।
ನೃಗೋ ಬ್ರಾಹ್ಮಣ ಶಾಪೇನ ಕೃಕಲಾಸತ್ವ ಮಾಗತಃ ॥೪೫॥

ಧೃಷ್ಟಶ್ಚ ಧೃಷ್ಟಕೇತುಶ್ಚ ಯಮಬಾಲಶ್ಚ ವೀರ್ಯವಾನ್ ।
ರಣಧೃಷ್ಟಶ್ಚ ತೇ ಪುತ್ರಾ ಸ್ತ್ರಯಃ ಪರಮ ಧಾರ್ಮಿಕಾಃ ॥೪೬॥

ಆನರ್ತೋ ನಾಮ ಶರ್ಯಾತೇಃ ಸುಕನ್ಯಾ ನಾಮ ದಾರಿಕಾ ।
ಆನರ್ತಸ್ಯಾ ಭವತ್ಪುತ್ರೋ ರೋಚಮಾನಃ ಪ್ರತಾಪವಾನ್ ॥೪೭॥

ರೋಚಮಾನಸ್ಯ ರೇವೋಽ ಭೂತ್ ರೇ ವಾದ್ರೈವತ ಏವ ಚ ।
ಕಕುದ್ಮೀ ಚಾಪರೋ ಜ್ಯೇಷ್ಠ ಪುತ್ರಃ ಪುತ್ರ ಶತಸ್ಯ ತು ॥೪೮॥

ರೇವತೀ ಯಸ್ಯ ಸಾ ಕನ್ಯಾ ಪತ್ನೀ ರಾಮಸ್ಯ ವಿಶ್ರುತಾ ।
ನರಿಷ್ಯಂತಸ್ಯ ಪುತ್ರೋಽಭೂ ಜ್ಜಿತಾತ್ಮಾ ತು ಮಹಾಬಲೀ ॥೪೯॥

---

ರಾದರು. ಕೆಲವರು ಯೋಗಾಭ್ಯಾಸಮಾಡಿ ಆತ್ಮಸಾಕ್ಷಾತ್ಕಾರವನ್ನೂ, ಮುಕ್ತಿಯನ್ನೂ ಪಡೆದರು. ನೃಗನೆಂಬ ದೊರೆಯು ಮಾತ್ರ ಬ್ರಾಹ್ಮಣನ ಶಾಪದಿಂದ ಹೆಂಟೆಗೊದ್ದನಾದನು.

೪೬. ಇವನಿಗೆ ಧೃಷ್ಟ ಮುಂತಾದ ನಾಲ್ಕು ಜನ ಮಕ್ಕಳಿದ್ದರು. ಅವರಲ್ಲಿ ಮೂವರು ಮಕ್ಕಳು, ಧೃಷ್ಟಕೇತು, ಯಮಬಾಲ, ರಣಧೃಷ್ಟ, ಎಂಬುವರು ಬಹಳ ಧಾರ್ಮಿಕರಾಗಿದ್ದರು.

೪೭. ಆನರ್ತ, ಎಂದು ಹೆಸರು ಪಡೆದಿದ್ದ ಶರ್ಯಾತಿಗೆ, ಸುಕನ್ಯೆ ಎಂಬ ಹೆಣ್ಣು ಮಗಳಿದ್ದಳು. ಆನರ್ತನ ಮಗ ರೋಚಮಾನನೆಂಬುವನು ಪರಾಕ್ರಮಶಾಲಿಯಾಗಿದ್ದನು.

೪೮. ರೋಚಮಾನನಿಗೆ ರೇವನೆಂಬ ಮಗನಾದನು. ರೇವನಿಗೆ ರೈವತನೆಂಬ ಮಗನಾದನು. ಅವನ ನೂರು ಮಕ್ಕಳುಗಳಲ್ಲಿ ಹಿರಿಯವ ನಾದ ಕಕುದ್ಮೀ, ಎಂಬ ಮಗನೂ ಇದ್ದನು.

೪೯. ಕಕುದ್ಮಿಯ ಮಗಳಾದ ರೇವತಿಯು ಬಲರಾಮನ ಪತ್ನಿ ಯೆಂದು ಪ್ರಸಿದ್ಧಳಾಗಿದ್ದಳು. ಅವಳಿಗೆ ನರಿಷ್ಯಂತನೆಂಬ ಜಿತೇಂದ್ರಿ ಯನೂ ಶೂರನೂ ಆದ ಮಗನಿದ್ದನು.

ನಾಭಾಗಾ ದಂಬರೀಷಸ್ತು ವಿಷ್ಣುಭಕ್ತಃ ಪ್ರತಾಪವಾನ್ ।
ಋತಸ್ತಸ್ಯ ಸುತಃ ಶ್ರೀಮಾ ನ್ಸರ್ವ ಧರ್ಮ ವಿದಾಂ ವರಃ ॥೫೦॥

ಕೃತಸ್ತಸ್ಯ ಸುಧರ್ಮಾಽಭೂ ತ್ಪೃಷಿತೋ ನಾಮ ವಿಶ್ರುತಃ ।
ಕರೂಷಸ್ಯ ತು ಕಾರೂಷಾಃ ಸರ್ವೇ ಪ್ರಖ್ಯಾತ ಕೀರ್ತಯಃ ॥೫೧॥

ಪೃಷಿತೋ ಹಿಂಸ ಯಿತ್ವಾ ಗಾಂ ಗುರೋಃ ಪ್ರಾಪ ಸುಕಲ್ಮಷಂ ।
ಶಾಪಾಚ್ಛೂದ್ರತ್ವಮಾಪನ್ನಃ ಚ್ಯವನಸ್ಯೇತಿ ವಿಶ್ರುತಃ ॥೫೨॥

ದಿಷ್ಟ ಪುತ್ರಸ್ತು ನಾಭಾಗ ಸ್ತಸ್ಮಾದಪಿ ಭಲಂದನಃ ।
ಭಲಂದನಸ್ಯ ವಿಕ್ರಾಂತೋ ರಾಜಾಽಸೀದಜವಾಹನಃ ॥೫೩॥

ಏತೇ ಸಮಾಸತಃ ಪ್ರೋಕ್ತಾ ಮನುಪುತ್ರಾ ಮಹಾಭುಜಾಃ ।
ಇಕ್ಷ್ವಾ ಕೋಃ ಪುತ್ರ ಪೌತ್ರಾದ್ಯಾಃ ಐಲಸ್ಯಾಥ ವದಾಮಿ ವಃ ॥೫೪

---

೫೦. ಅಂಬರೀಷನು ವಿಷ್ಣುಭಕ್ತನಾಗಿಯೂ, ಪರಾಕ್ರಮಶಾಲಿಯಾಗಿಯೂ, ಇದ್ದನು. ಇವನು ನಾಭಾಗನ ಮಗನು. ಶ್ರೀಮಂತನಾಗಿಯೂ, ಎಲ್ಲಾ ಧರ್ಮಗಳನ್ನು ಅರಿತವನೂ ಆದ ಋತನು ಅಂಬರೀಷನ ಮಗನು.

೫೧-೫೨. ಋತನ ಮಗನು ಧರ್ಮಿಷ್ಠನಾಗಿರುತ್ತಾ ಪೃಷಿತ, ಎಂದು ಹೆಸರು ಪಡೆದಿದ್ದನು. ಇವನೇ ಇನ್ನೊಬ್ಬ ಕರೂಷನು. ಕರೂಷನ ಮಕ್ಕಳು ಕಾರೂಷ ಎಂದು ಬಹಳ ಪ್ರಸಿದ್ಧರಾಗಿದ್ದರು. ಚ್ಯವನ ಮಹರ್ಷಿಗಳ ಹಸುವಿಗೆ ಹಿಂಸೆಮಾಡಿ ಪೃಷಿತನು ಅವರ ಶಾಪಕ್ಕೆ ಗುರಿಯಾದನು. ಅವರ ಶಾಪದಿಂದ ಶೂದ್ರನಾದನೆಂದು ಪ್ರಸಿದ್ಧಿಯಿದೆ.

೫೩-೫೪. ದಿಷ್ಟ ಎಂಬುವನ ಮಗನು ನಾಭಾಗ, ಎಂಬ ಬೇರೊಬ್ಬನಿದ್ದನು. ಈ ನಾಭಾಗನಿಗೆ ಭಲಂದನ, ಎಂಬ ಕುಮಾರನಿದ್ದನು. ಭಲಂದನನಿಗೆ ಅಜವಾಹನ, ಎಂಬ ರಾಜಕುಮಾರನು ಪ್ರಸಿದ್ಧನಾಗಿದ್ದನು. ಈ ರೀತಿಯಾಗಿ ಮನುವಂಶ ಪ್ರಸೂತರೂ ಮತ್ತು ಇಕ್ಷ್ವಾಕು ವಂಶ ಪ್ರಸಿದ್ಧರೂ ಆದ ಮಹಾ ಪರಾಕ್ರಮಶಾಲಿಗಳಾದ ರಾಜರುಗಳ ವಿಷಯವನ್ನು ಸಂಕ್ಷೇಪವಾಗಿ ಹೇಳಿದ್ದೇನೆ. ಇನ್ನು ಮುಂದೆ ಐಲನ ವಂಶದ ರಾಜರ ವಿಷಯವನ್ನು ಹೇಳುವೆನು.

॥ ಸೂತ ಉವಾಚ ॥

ಐಲಃ ಪುರೂರವಾ ನಾಮ ರುದ್ರಭಕ್ತಃ ಪ್ರತಾಪವಾನ್ ।
ಚಕ್ರೇ ತ್ವಕಂಟಕಂ ರಾಜ್ಯಂ ದೇಶೇ ಪುಣ್ಯತಮೇ ದ್ವಿಜಾಃ ॥೫೫॥

ಉತ್ತರೇ ಯಮುನಾತೀರೇ ಪ್ರಯಾಗೇ ಮುನಿ ಸೇವಿತೇ ।
ಪ್ರತಿಷ್ಠಾನಾಧಿಪಃ ಶ್ರೀಮಾನ್ಪ್ರತಿಷ್ಠಾನೇ ಪ್ರತಿಷ್ಠಿತಃ ॥೫೬॥

ತಸ್ಯ ಪುತ್ರಾಃ ಸಪ್ತ ಭವನ್ಸರ್ವೇ ವಿತತ ತೇಜಸಃ ।
ಗಂಧರ್ವ ಲೋಕ ವಿದಿತಾ ಭವಭಕ್ತಾ ಮಹಾಬಲಾಃ ॥೫೭॥

ಆಯು ರ್ಮಾಯು ರಮಾಯುಶ್ಚ ವಿಶ್ವಾಯುಶ್ಚೈವ ವೀರ್ಯವಾನ್ ।
ಶ್ರುತಾಯುಶ್ಚ ಶತಾಯುಶ್ಚ ದಿವ್ಯಾಶ್ಚೈವೋರ್ವಶೀ ಸುತಾಃ ॥೫೮॥

---

೫೫–೫೭. ಪುರೂರವನೆಂಬ ಈಶ್ವರ ಭಕ್ತನೂ, ಶೂರನೂ, ಆದ ಧೊರೆಯು ಇಲನ ವಂಶದಲ್ಲಿ ಹುಟ್ಟಿ ನಿಷ್ಕಂಟಕವಾಗಿ ರಾಜ್ಯವಾಳುತ್ತಿದ್ದನು. ಎಲೈ ಬ್ರಾಹ್ಮಣರೇ, ಈ ಧೊರೆಯು ಮುನಿಗಳ ವಾಸಸ್ಥಾನವಾದ ಉತ್ತರ ದೇಶದಲ್ಲಿರುವ ಪುಣ್ಯ ಭೂಮಿಯಾದ ಪ್ರಯಾಗ ಕ್ಷೇತ್ರದಲ್ಲಿ ಪ್ರತಿಷ್ಠಾನ, ಎಂದು ಪ್ರಸಿದ್ಧವಾದ ನಗರಕ್ಕೆ ಅಧಿಪತಿಯಾಗಿದ್ದನು. ಇವನ ಮಕ್ಕಳು ಬಹಳ ತೇಜಸ್ವಿಗಳಾಗಿಯೂ, ಈಶ್ವರ ಭಕ್ತರಾಗಿಯೂ ಮಹಾ ಶೂರರಾಗಿಯೂ, ಗಂಧರ್ವಲೋಕದಲ್ಲಿ ಬಹಳ ಹೆಸರುವಾಸಿಯುಳ್ಳವರಾಗಿಯೂ ಇದ್ದರು.

೫೮–೬೦. ಪುರೂರವನಿಗೆ ಊರ್ವಶಿಯಲ್ಲಿ ಆಯು, ಮಾಯು, ಅಮಾಯು, ವಿಶ್ವಾಯು, ಶ್ರುತಾಯು, ಶತಾಯು ಎಂದು ತೇಜಸ್ವಿಗಳಾದ ದಿವ್ಯರಾದ ಮಕ್ಕಳಾದರು. ಬಹಳ ತೇಜಸ್ವಿಯಾದ ಆಯುಸ್ಸಿಗೆ ಸ್ವರ್ಭಾನುವಿನ ಮಗಳಾದ ಪ್ರಭೆ ಎಂಬುವಳಲ್ಲಿ ವೀರರಾದ ಐದು ಜನ ಮಕ್ಕಳು ಉತ್ಪನ್ನರಾದರು. ಇವರ ಪೈಕಿ, ಧರ್ಮವನ್ನರಿತವನೂ, ಲೋಕಪ್ರಸಿದ್ಧನೂ ಆದ ನಹುಷನು ಮೊದಲನೆಯವನು. ನಹುಷನಿಗೆ, ಇಂದ್ರನಿಗೆ ಸಮಾನವಾದ ತೇಜಸ್ಸುಳ್ಳ ಆರು ಜನ (ಪುತ್ರ) ಜ್ಞಾತಿಗಳಿದ್ದರು.

ಆಯುಷಸ್ತನಯಾ ವೀರಾಃ ಪಂಚೈವಾಸನ್ಮಹೌಜಸಃ ।
ಸ್ವರ್ಭಾನು ತನಯಾಯಾಂ ತೇ ಪ್ರಭಾಯಾಂ ಜಜ್ಞಿರೇ ನೃಪಾಃ ॥

ನಹುಷಃ ಪ್ರಥಮಸ್ತೇಷಾಂ ಧರ್ಮಜ್ಞೋ ಲೋಕ ವಿಶ್ರುತಃ ।
ನಹುಷಸ್ಯ ತು ದಾಯಾದಾಃ ಷಡಿಂದ್ರೋಪಮ ತೇಜಸಃ ॥೬೦॥

ಉತ್ಪನ್ನಾಃ ಪಿತೃಕನ್ಯಾಯಾಂ ವಿರಜಾಯಾಂ ಮಹೌಜಸಃ ।
ಯತಿರ್ಯಯಾತಿಃ ಸಂಯಾತಿ ರಾಯಾತಿಃ ಪಂಚಮೋಽಂಧಕಃ॥೬೧॥

ವಿಜಾತಿಶ್ಚೇತಿ ಷಡಿಮೇ ಸರ್ವೇ ಪ್ರಖ್ಯಾತ ಕೀರ್ತಯಃ ।
ಯತಿರ್ಜ್ಯೇಷ್ಠಶ್ಚ ತೇಷಾಂ ವೈ ಯಯಾತಿಸ್ತು ತತೋಽವರಃ ॥೬೨॥

ಜ್ಯೇಷ್ಠಸ್ತು ಯತಿರ್ಮೋಕ್ಷಾರ್ಥೀ ಬ್ರಹ್ಮಭೂತೋಽಭವತ್ಪ್ರಭುಃ ।
ತೇಷಾಂ ಯಯಾತಿಃ ಪಂಚಾನಾಂ ಮಹಾಬಲ ಪರಾಕ್ರಮಃ ॥೬೩॥

ದೇವಯಾನೀ ಮುಶನಸಃ ಸುತಾಂ ಭಾರ್ಯಾ ಮವಾಪ ಸಃ ।
ಶರ್ಮಿಷ್ಠಾ ಮಾಸುರೀಂ ಚೈವ ತನಯಾಂ ವೃಷ ಪರ್ವಣಃ ॥೬೪॥

---

೬೧–೬೨. ಮಹಾತೇಜಸ್ವಿಗಳಾದ ಈ ಮಕ್ಕಳು ಪಿತೃಕನ್ಯೆಯಾದ, ವಿರಜಾ, ಎಂಬುವಳಲ್ಲಿ ಹುಟ್ಟಿದರು. ಇವರಿಗೆ ಹೆಸರುಗಳು ಕ್ರಮವಾಗಿ, ಯತಿ, ಯಯಾತಿ, ಸಂಯಾತಿ, ಆಯಾತಿ, ಅಂಧಕ, ವಿಜಾತಿ, ಎಂಬುದಾಗಿದ್ದುವು. ಇವರೆಲ್ಲರೂ ಬಹಳ ಪ್ರಸಿದ್ಧರಾಗಿದ್ದರು. ಇವರಲ್ಲಿ ಯತಿಯೇ ಹಿರಿಯ ಮಗನು. ಯಯಾತಿಯು ಎರಡನೆಯವನು.

೬೩–೬೪. ಹಿರಿಯವನಾದ ಯತಿಯು ಮೋಕ್ಷಾಭಿಲಾಷೆಯುಳ್ಳವನಾಗಿ ಬ್ರಹ್ಮನಲ್ಲಿ ಐಕ್ಯವಾದನು. ಉಳಿದವರಲ್ಲಿ ಯಯಾತಿಯು ಉಳಿದ ತಮ್ಮಂದಿರಿಗಿಂತ ಬಹಳ ಶೂರನಾಗಿದ್ದನು. ಇವನು ಶುಕ್ರನ ಮಗಳಾದ ದೇವಯಾನಿಯನ್ನು ಮದುವೆಯಾದನು. ಯಯಾತಿಯು ವೃಷಪರ್ವನ ಮಗಳಾದ ಅಸುರಕುಲೋತ್ಪನ್ನಳಾದ ಶರ್ಮಿಷ್ಠಾ ಎಂಬ ಕನ್ಯೆಯನ್ನೂ ಮದುವೆಯಾದನು. ದೇವಯಾನಿಯು ಯದು, ತುರ್ವಸು, ಎಂಬಿಬ್ಬರು ಮಕ್ಕಳನ್ನು ಹೆತ್ತಳು. ಈ ಇಬ್ಬರು ಮಕ್ಕಳೂ, ಒಳ್ಳೆಯ ಕೆಲಸಮಾಡುತ್ತಲೂ, ವಿದ್ಯಾಪಾರಂಗತರಾಗಿಯೂ, ಜನರ ಪ್ರಶಂಸೆಗೆ ಪಾತ್ರರಾಗಿಯೂ ಇದ್ದರು.

ಯದುಂ ಚ ತುರ್ವಸುಂ ಚೈವ ದೇವಯಾನೀ ವ್ಯಜಾಯತ ।
ತಾವುಭೌ ಶುಭ ಕರ್ಮಾಣೌ ಸ್ತುತೌ ವಿದ್ಯಾ ವಿಶಾರದೌ ॥೬೫॥

ದ್ರುಹ್ಯಂ ಚಾನುಂ ಚ ಪೂರುಂ ಚ ಶರ್ಮಿಷ್ಠಾ ವಾರ್ಷ ಪರ್ವಣೀ ।
ಯಯಾತಯೇ ರಥಂ ತಸ್ಮೈ ದದೌ ಶುಕ್ರಃ ಪ್ರತಾಪವಾನ್ ॥೬೬॥

ತೋಷಿತ ಸ್ತೇನ ವಿಪ್ರೇಂದ್ರಃ ಪ್ರೀತಃ ಪರಮ ಭಾಸ್ವರಂ ।
ಸುಗಂಧಂ ಕಾಂಚನಂ ದಿವ್ಯ ಮಕ್ಷಯೇ ಚ ಮಹೇಷುಧೀ ॥೬೭॥

ಯುಕ್ತಂ ಮನೋಜವೈ ರಶ್ವೈಃ ಯೇನ ಕನ್ಯಾಂ ಸಮುದ್ವಹನ್ ।
ಸ ತೇನ ರಥಮುಖ್ಯೇನ ಷಣ್ಮಾಸೇನಾ ಜಯನ್ಮಹೀಂ ॥೬೮॥

ಯಯಾತಿ ರ್ಯುಧಿ ದುರ್ಧರ್ಷೋ ದೇವದಾನವ ಮಾನುಷೈಃ ।
ಭವ ಭಕ್ತಸ್ತು ಪುಣ್ಯಾತ್ಮಾ ಧರ್ಮನಿಷ್ಠಃ ಸಮಂಜಸಃ ॥೬೯॥

---

೬೬–೬೮. ವೃಷಪರ್ವನ ಮಗಳಾದ ಶರ್ಮಿಷ್ಠೆಯು, ದ್ರುಹ್ಯ, ಅನು, ಪೂರು, ಎಂಬ ಮೂವರು ಕುಮಾರರನ್ನು ಹೆತ್ತಳು. ತೇಜಸ್ವಿಯಾದ ಶುಕ್ರನು ತನ್ನ ಅಳಿಯನಾದ ಯಯಾತಿಗೆ ಒಂದು ರಥವನ್ನು ಕೊಟ್ಟನು. ಬ್ರಾಹ್ಮಣ ಶ್ರೇಷ್ಠನಾದ ಈ ಯಯಾತಿಯು ಈ ರಥ ಪ್ರಾಪ್ತಿಯಿಂದ ಬಹಳ ಸಂತೋಷಪಟ್ಟನು. ಈ ರಥವು ಸ್ವರ್ಗೀಯವಾಗಿ ಸುವಾಸನೆಯುಳ್ಳದ್ದಾಗಿಯೂ, ಸುವರ್ಣಮಯವೂ ಆಗಿ, ಅಕ್ಷಯ ಬಾಣ ಬತ್ತಳಿಕೆಗಳಿಂದ ಕೂಡಿದುದಾಗಿಯೂ, ಪ್ರಕಾಶಿಸುತ್ತಾ ಇತ್ತು. ಯಯಾತಿಯು ತನ್ನ ಪತ್ನಿಯೊಡನೆ ಮನೋವೇಗವುಳ್ಳ ಕುದುರೆಗಳಿಂದ ಕೂಡಿದ ಈ ರಥವನ್ನು ಏರಿ, ಅದರ ಸಹಾಯದಿಂದ ಕೇವಲ ಆರು ತಿಂಗಳೊಳಗಾಗಿಯೇ ಭೂಮಿಯನ್ನೆಲ್ಲವನ್ನೂ ಜಯಿಸಿದನು.

೬೯–೭೧. ಈ ರಥದ ಸಹಾಯದಿಂದ ಯಯಾತಿಯು ಯುದ್ಧದಲ್ಲಿ ದೇವತೆಗಳು, ರಾಕ್ಷಸರು, ಮನುಷ್ಯರು, ಇವರು ಯಾರಿಂದಲೂ ಸೋಲಿಸಲ್ಪಡಲಿಲ್ಲ. ಯಯಾತಿಯು ಈಶ ಭಕ್ತನಾಗಿಯೂ, ಪುಣ್ಯವಂತನಾಗಿಯೂ, ಧರ್ಮಾತ್ಮನಾಗಿಯೂ, ಯೋಗ್ಯನಾಗಿಯೂ, ಇದ್ದನು. ಇವನು ಅನೇಕ ಯಾಗಗಳನ್ನು ಮಾಡುವವನೂ, ಕೋಪವಿಲ್ಲದವನೂ, ಎಲ್ಲಾ ಪ್ರಾಣಿಗಳಲ್ಲಿಯೂ ಕನಿಕರವುಳ್ಳವನೂ ಆಗಿದ್ದನು. ಈ ರಥವು

ಯಜ್ಞಯಾಜೀ ಜಿತ ಕ್ರೋಧಃ ಸರ್ವ ಭೂತಾನು ಕಂಪನಃ ।
ಕೌರವಾಣಾಂ ಚ ಸರ್ವೇಷಾಂ ಸಭವದ್ರಥ ಉತ್ತಮಃ ॥೨೦॥

ಯಾವ ನ್ನರೇಂದ್ರ ಪ್ರವರಃ ಕೌರವೋ ಜನಮೇಜಯಃ ।
ಪೂರೋ ರ್ವಂಶಸ್ಯ ರಾಜ್ಞಸ್ತು ರಾಜ್ಞಃ ಪಾರೀಕ್ಷಿತಸ್ಯ ತು ॥೨೧॥

ಜಗಾಮ ಸ ರಥೋ ನಾಶಂ ಶಾಪಾ ದ್ಗರ್ಗಸ್ಯ ಧೀಮತಃ ।
ಗರ್ಗಸ್ಯ ಹಿ ಸುತಂ ಬಾಲಂ ಸ ರಾಜಾ ಜನಮೇಜಯಃ ॥೨೨॥

ಅಕ್ರೂರಂ ಹಿಂಸಯಾ ಮಾಸ ಬ್ರಹ್ಮಹತ್ಯಾ ಮವಾಪ ಸಃ ।
ಸ ಲೋಹ ಗಂಧೀರಾಜರ್ಷಿಃ ಪರಿಧಾವ ನ್ನಿತಸ್ತತಃ ॥೨೩॥

ಪೌರಜಾನ ಪದ್ಯೈ ಸ್ತ್ಯಕ್ತೋ ನ ಲೇಭೇ ಶರ್ಮ ಕರ್ಹಿ ಚಿತ್ ।
ತತಃ ಸ ದುಃಖ ಸಂತಪ್ತೋ ನ ಲೇಭೇ ಸಂವಿದಂ ಕ್ವಚಿತ್ ॥೨೪॥

ಜಗಾಮ ಶೌನಕ ಮೃಷಿಂ ಶರಣ್ಯಂ ವ್ಯಥಿತ ಸ್ತದಾ ।
ಇಂದ್ರೋತಿ ರ್ನಾಮ ವಿಖ್ಯಾತೋ ಯೋಽಸೌ ಮುನಿರುದಾ ರಧೀಃ ॥

---

ಎಲ್ಲಾ ಕುರುವಂಶದ ಧೊರೆಗಳ ಹತ್ತಿರ ಬಹಳ ಕಾಲದವರೆಗೆ ಉತ್ತಮವಾಗಿತ್ತು. ಕೌರವರ ಗುಂಪಿನವನಾದ ಜನಮೇಜಯ, ಪುರುವಂಶದ ದೊರೆಯಾದ ಪಾರಿಕ್ಷಿತ, ಇವರ ಕಾಲದವರೆಗೂ ಈ ರಥವು ಒಂದೇ ಸಮನಾಗಿತ್ತು.

೨೨–೨೪. ಆದರೆ ಜನಮೇಜಯನ ಕಾಲದಲ್ಲಿ ಗರ್ಗಮಹರ್ಷಿಯ ಶಾಪದಿಂದ ಈ ರಥವು ಕೈಬಿಟ್ಟು ಹೋಯಿತು. ಜನಮೇಜಯ ಧೊರೆಯು ಗರ್ಗಮಹರ್ಷಿಯ ಮಗನಾದ ಅಕ್ರೂರನೆಂಬ ಬಾಲಕನನ್ನು ಹಿಂಸೆಮಾಡಿ ಬ್ರಹ್ಮಹತ್ಯಾ ಮಹಾ ಪಾಪವನ್ನು ಹೊಂದಿದನು. ಮೈಯ್ಯಲ್ಲೆಲ್ಲಾ ರಕ್ತದ ವಾಸನೆ ಹರಡಿರುವ ರಾಜನಾದ ಜನಮೇಜಯನು, ಇಲ್ಲಿ, ಅಲ್ಲಿ, ಓಡಾಡುತ್ತಲೂ, ತನ್ನ ಪಟ್ಟಣಿಗರಿಂದಲೂ ಪ್ರಜೆಗಳಿಂದಲೂ ಬಿಡಲ್ಪಟ್ಟು, ಎಲ್ಲಾ ಕಡೆಯಲ್ಲೂ ದುಃಖಕ್ಕೆ ಒಳಗಾದನು. ದುಃಖದಿಂದ ಬಹಳ ಕಷ್ಟಪಟ್ಟ ಜನಮೇಜಯನು ದಿಕ್ಕುತೋಚದವನಾದನು.

೨೫–೨೬. ಆಗ ಜನಮೇಜಯನು ಸಂಕಟಪಡುತ್ತಾ ಶೌನಕ ಮಹರ್ಷಿಗಳಿಗೆ ಶರಣುಹೋದನು. ಈ ಶೌನಕಮಹರ್ಷಿಗಳು ಇಂದ್ರೋತಿ,

ಯಾಜಯಾ ಮಾಸ ಚೇಂದ್ರೇತಿ ಸ್ತಂ ನೃಪಂ ಜನಮೇಜಯಂ ।
ಅಶ್ವಮೇಧೇನ ರಾಜಾನಂ ಪಾವನಾರ್ಥಂ ದ್ವಿಜೋತ್ತಮಾಃ ॥೭೬॥

ಸಲೋಹ ಗಂಧಾ ನ್ನಿರ್ಮುಕ್ತಃ ಏನಸಾ ಚ ಮಹಾ ಯಶಾಃ ।
ಯಜ್ಞಸ್ಯಾವಭೃಥೇ ಮಧ್ಯೇ ಯಾತೋ ದಿವ್ಯೋ ರಥಃ ಶುಭಃ ॥೭೭॥

ತಸ್ಮಾ ದ್ವಂಶಾತ್ಪರಿ ಭ್ರಷ್ಟೋ ವಸೋಶ್ಚೇದಿಪತೇಃ ಪುನಃ ।
ದತ್ತಃ ಶಕ್ರೇಣ ತುಷ್ಟೇನ ಲೇಭೇ ತಸ್ಮಾದ್ಬೃಹ ದ್ರಥಃ ॥೭೮॥

ತತೋ ಹತ್ವಾ ಜರಾಸಂಧಂ ಭೀಮ ಸ್ತಂ ರಥ ಮುತ್ತಮಂ ।
ಪ್ರದದೌ ವಾಸುದೇವಾಯ ಪ್ರೀತ್ಯಾ ಕೌರವ ನಂದನಃ ॥೭೯॥

॥ ಸೂತ ಉವಾಚ ॥

ಅಭ್ಯಷಿಂಚ ತ್ಪುರಂ ಪುತ್ರಂ ಯಯಾತಿ ರ್ನಾಹುಷಃ ಪ್ರಭುಃ ।
ಕೃತೋಪಕಾರ ಸ್ತೇನೈವ ಪುರುಣಾ ದ್ವಿಜ ಸತ್ತಮಾಃ ॥೮೦॥

---

ಎಂದು ಪ್ರಸಿದ್ಧರಾಗಿ ಮಹಾತ್ಮರಾಗಿದ್ದರು. ಎಲೈ ಬ್ರಾಹ್ಮಣರೇ, ಇಂದ್ರೇತಿ ಋಷಿಗಳು, ಜನಮೇಜಯನು ತನ್ನ ಪಾಪ ಪರಿಹಾರಕ್ಕಾಗಿ ಅಶ್ವಮೇಧ ಯಾಗ ಮಾಡುವಂತೆ ಹೇಳಿದರು. ಆ ಯಾಗ ಮಾಡಿದ್ದರಿಂದ ಜನಮೇಜಯನು ರಕ್ತದ ವಾಸನೆಯಿಂದ ಬಿಡಲ್ಪಟ್ಟವನಾಗಿ, ಪಾಪರಹಿತನೂ, ಕೀರ್ತಿಶಾಲಿಯೂ ಆದನು. ಯಜ್ಞದೀಕ್ಷಾ ವಿಸರ್ಜನ ಅವಭೃಥ ಸ್ನಾನದ ಕಾಲದಲ್ಲಿ ದಿವ್ಯವಾದ, ಮಂಗಳಕರವಾದ, ಹಿಂದೆ ಕಳೆದುಹೋಗಿದ್ದ ರಥವು ಪುನಃ ಪ್ರಾಪ್ತವಾಯಿತು.

೭೮–೭೯. ಈ ರಥವು ಕೌರವರ ವಂಶದಿಂದ ನಷ್ಟವಾಗಿ ಚೇದಿ ದೇಶದ ಧೊರೆಯಾದ ವಸುವಿಗೆ ಸಿಕ್ಕಿತು. ಶಕ್ರನ ಸಂತೋಷದಿಂದ ಈ ದೊಡ್ಡ ರಥವು ವಸುವಿಗೆ ಕೊಡಲ್ಪಟ್ಟಿತು. ಭೀಮನು ಜರಾಸಂಧನನ್ನು ಕೊಂದು ಈ ಶ್ರೇಷ್ಠವಾದ ರಥವನ್ನು ಕಸಿದುಕೊಂಡು ಬಹಳ ಪ್ರೀತಿಯಿಂದ ಕೃಷ್ಣನಿಗೆ ಕೊಟ್ಟನು.

೮೦–೮೩. ಸೂತನು ಹೇಳಿದನು :—ಎಲೈ ಬ್ರಾಹ್ಮಣರೇ, ನಹುಷನ ಮಗನಾದ ಯಯಾತಿರಾಜನು ತನ್ನ ಮಗನಾದ ಪುರುವಿನಿಂದ ಸಹಾಯ

ಅಭಿಷೇಕ್ತು ಕಾಮಂಚ ನೃಪಂ ಪುರುಂ ಪುತ್ರಂ ಕನೀಯಸಂ ।
ಬ್ರಾಹ್ಮಣ ಪ್ರಮುಖಾ ವರ್ಣಾಃ ಇದಂ ವಚನ ಮಬ್ರುವನ್ ॥೮೧॥
ಕಥಂ ಶುಕ್ರಸ್ಯ ನಪ್ತಾರಂ ದೇವಯಾನ್ಯಾಃ ಸುತಂ ಪ್ರಭೋ ।
ಜ್ಯೇಷ್ಠಂ ಯದುಮತಿಕ್ರಮ್ಯ ಕನೀಯಾ ನ್ರಾಜ್ಯ ಮರ್ಹತಿ ॥೮೨॥
ಏತೇ ಸಂಬೋಧಯಾಮಸ್ತ್ವಾಂ ಧರ್ಮಂ ಚ ಅನುಪಾಲಯ॥೮೩॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ವಸಿಷ್ಠ ವಂಶ ವಿಚಾರ ವರ್ಣನಂ ನಾಮ ಷಟ್ಷಷ್ಟಿತಮೋಽಧ್ಯಾಯಃ

---

ಪಡೆದು ಪುರುವನ್ನೇ ರಾಜ್ಯದ ದೊರೆಯನ್ನಾಗಿ ಪಟ್ಟಾಭಿಷೇಕ ಮಾಡಲು ಇಷ್ಟಪಟ್ಟನು. ಅವನ ದೇಶದ ಬ್ರಾಹ್ಮಣರೇ ಮೊದಲಾದ ಸಕಲ ಪಂಗಡ ದವರೂ, ಪ್ರಭುಗಳೇ; ಶುಕ್ರನ ಮೊಮ್ಮಗನೂ, ದೇವಯಾನಿಯ ಮಗನೂ ಆದ ಹಿರಿಯನಾದ ಯದುವು ಇರಲು, ಕಿರಿಯವನಾದ ಪುರುವು ರಾಜ್ಯಕ್ಕೆ ಅಧಿಪತಿಯಾಗಲು ಯೋಗ್ಯನಾಗುವನೇ ? ಎಂದು ಬಿನ್ನೈಸಿದರು. ಪ್ರಭುಗಳೇ, ತಾವು ಧರ್ಮರಕ್ಷಣೆ ಮಾಡಬೇಕೆಂದು ಬಿನ್ನೈಸುವೆವು. ಎಂದರು.

ಇಲ್ಲಿಗೆ ಶ್ರೀಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ವಸಿಷ್ಠರ ವಂಶ ವಿಚಾರ ಎಂಬ ಅರವತ್ತಾರನೆಯ ಅಧ್ಯಾಯವು ಮುಗಿದುದು.



## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಸಪ್ತಷಷ್ಟಿತಮೋಽಧ್ಯಾಯಃ

॥ ಯಯಾತಿರುವಾಚ ॥

ಬ್ರಾಹ್ಮಣ ಪ್ರಮುಖಾ ವರ್ಣಾಃ ಸರ್ವೇ ಶೃಣ್ವಂತು ಮೇ ವಚಃ ।
ಜ್ಯೇಷ್ಠಂ ಪ್ರತಿ ಯಥಾರಾಜ್ಯಂ ನ ದೇಯಂ ಮೇ ಕಥಂ ಚನ ॥ ೧ ॥
ಮಮ ಜ್ಯೇಷ್ಠೇನ ಯದುನಾ ನಿಯೋಗೋ ನಾಸು ಪಾಲಿತಃ ।
ಪ್ರತಿಕೂಲ ಮತಿಶ್ಚೈವ ನ ಸ ಪುತ್ರಃ ಸತಾಂ ಮತಃ ॥ ೨ ॥
ಮಾತಾ ಪಿತ್ರೋ ರ್ವಚನ ಕೃತ್ಸದ್ಭಿಃ ಪುತ್ರಃ ಪ್ರಶಸ್ಯತೇ ।
ಸ ಪುತ್ರಃ ಪುತ್ರವದ್ಯಸ್ತು ವರ್ತತೇ ಮಾತೃ ಪಿತೃಷು ॥ ೩ ॥
ಯದುನಾಽಹ ಮವಜ್ಞಾತ ಸ್ತಥಾ ತುರ್ವಸುನಾಽಪಿ ಚ ।
ದ್ರುಹ್ಯೇನ ಚಾನುನಾ ಚೈವ ಮಯ್ಯವಜ್ಞಾ ಕೃತಾ ಭೃಶಂ ॥ ೪ ॥

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಅರವತ್ತೇಳನೆಯ ಅಧ್ಯಾಯವು

೧–೩. ಯಯಾತಿಯು ಹೇಳಿದನು; ಎಲೈ ಬ್ರಾಹ್ಮಣರೇ ಮೊದಲಾದ ಸಕಲ ವಂಗಡದವರೇ, ನಾನು ಹಿರಿಯ ಮಗನಿಗೆ ರಾಜ್ಯವನ್ನು ಏಕೆ ಕೊಡುವುದಿಲ್ಲ ? ಎಂಬ ವಿಷಯವನ್ನು ಕೇಳಿರಿ. ನನ್ನ ಹಿರಿಯ ಮಗನಾದ ಯದುವು ನನ್ನ ಅಪ್ಪಣೆಯನ್ನು ಮೀರಿದನು. ಅವನು ನನಗೆ ವಿರುದ್ಧವಾಗಿ ನಡೆಯುವವನು. ಸತ್ಪುರುಷರು ಇಂಥಾ ಮಕ್ಕಳನ್ನು ಪುತ್ರರೆಂದೇ ಕರೆಯಲಾರರು. ತಂದೆ ತಾಯಿಗಳ ಮಾತನ್ನು ಕೇಳುವವನೇ ಪುತ್ರನೆಂದು ಸತ್ಪುರುಷರ ಅಭಿಪ್ರಾಯ. ಮಗನು ಹೇಗೆ ನಡೆದು ಕೊಳ್ಳಬೇಕೋ ಹಾಗೆ ನಡೆಯುವವನೇ ಮಗನೆಂದು ಸತ್ಪುರುಷರು ಹೇಳುತ್ತಾರೆ.

೪–೬. ನನ್ನ ಮಕ್ಕಳಾದ ಯದು, ತುರ್ವಸು, ದ್ರುಹ್ಯ, ಅನು ಎಂಬ ನಾಲ್ಕು ಮಂದಿಯೂ, ನನ್ನ ಮಾತನ್ನು ತಿರಸ್ಕರಿಸಿದರು. ಆದರೆ

ಪುರುಣಾ ಚ ಕೃತಂ ವಾಕ್ಯಂ ಮಾನಿತಶ್ಚ ವಿಶೇಷತಃ ।
ಕನೀಯಾ ನ್ಮಮ ದಾಯಾದೋ ಜರಾ ಯೇನ ಧೃತಾ ಮಮ ॥ ೫ ॥

ಶುಕ್ರೇಣ ಮೇ ಸಮಾದಿಷ್ಟಾ ದೇವಯಾನ್ಯಾಃ ಕೃತೇ ಜರಾ ।
ಪ್ರಾರ್ಥಿತೇನ ಪುನಸ್ತೇನ ಜರಾ ಸಂಚಾರಿಣೀ ಕೃತಾ ॥ ೬ ॥

ಶುಕ್ರೇಣ ಚ ವರೋ ದತ್ತಃ ಕಾವ್ಯೇನೋಶನಸಾ ಸ್ವಯಂ ।
ಪುತ್ರೋ ಯ ಸ್ತ್ವಾನು ವರ್ತೇತ ಸ ತೇ ರಾಜ್ಯ ಧರಸ್ತ್ವಿತಿ ॥ ೭ ॥

ಭವಂತೋಽಪ್ಯನುಜಾನಂತು ಪುರೂ ರಾಜ್ಯೇಽಭಿಷಿ ಚ್ಯತೇ ।

॥ ಪ್ರಕೃತಯ ಊಚುಃ ॥

ಯಃ ಪುತ್ರೋ ಗುಣ ಸಂಪನ್ನೋ ಮಾತಾ ಪಿತ್ರೋರ್ಹಿತಃ ಸದಾ ॥
ಸರ್ವ ಮರ್ಹತಿ ಕಲ್ಯಾಣಂ ಕನೀಯಾನಪಿ ಸ ಪ್ರಭುಃ ।
ಅರ್ಹಃ ಪೂರುರಿದಂ ರಾಜ್ಯಂ ಯಃ ಸುತೋ ವಾಕ್ಯ ಕೃತ್ತವ ॥ ೯ ॥
ವರದಾನೇನ ಶುಕ್ರಸ್ಯ ನ ಶಕ್ಯಂ ಕರ್ತು ಮನ್ಯಥಾ ।

---

ಪುರುವು ನನ್ನ ಮಾತನ್ನು ನಡೆಸಿ ಗೌರವಿಸಿದನು. ಆದ್ದರಿಂದ ಅವನು ಬಹು ಮಾನಯೋಗ್ಯನು. ಕಿರಿಯವನಾದ ಪುರುವು ನನ್ನ ಮಾತಿನಂತೆ ನನ್ನ ಮುಪ್ಪನ್ನು ತಾನುಹೊಂದಿ ಅವನ ಯೌವ್ವನವನ್ನು ನನಗೆ ಕೊಟ್ಟನು. ಮಗಳಾದ ದೇವಯಾನಿಯ ಮೇಲಿನ ವ್ಯಾಮೋಹದಿಂದ ಶುಕ್ರನು ನನಗೆ ಒಂದು ವರವನ್ನು ಕೊಟ್ಟಿದ್ದನು. ಅದರ ಪ್ರಕಾರ ನನ್ನ ಮುಪ್ಪನ್ನು ನಾನು ಇಷ್ಟಪಟ್ಟರೆ, ನನ್ನ ಮಕ್ಕಳಲ್ಲೊಬ್ಬರಿಗೆ ಬದಲಾಯಿಸಿ ಕೊಳ್ಳಬಲ್ಲೆ.

೭. ಅಲ್ಲದೆ ಕವಿಪುತ್ರನಾದ ಶುಕ್ರನಿಂದ ನಿನ್ನಮಕ್ಕಳಲ್ಲಿ ಯಾರು ನಿನ್ನ ಆಜ್ಞೆಯನ್ನು ಅನುಸರಿಸುವರೋ, ಅವರು ರಾಜ್ಯಭಾರ ಮಾಡಲಿ. ಎಂಬುದಾಗಿಯೂ ನನಗೆ ವರವು ಕೊಡಲ್ಪಟ್ಟಿತ್ತು.

೮-೯. ಆದುದರಿಂದ ನೀವೂ ಕೂಡ ಈ ಪುರುವಿಗೆ ರಾಜ್ಯಾಭಿಷೇಕ ಮಾಡಲು ಸಂಮತಿಸಿರಿ. ಎಂದು ಹೇಳಿದನು.

ಪ್ರಜೆಗಳು ಹೇಳಿದರು. ಪ್ರಭುಗಳೇ, ಯಾವನು ಗುಣಾಢ್ಯನಾಗಿಯೂ ತಾಯಿ, ತಂದೆಗಳಿಗೆ ಸಂತೋಷವನ್ನುಂಟು ಮಾಡುವವನಾಗಿಯೂ

॥ ಸೂತ ಉವಾಚ ॥

ಏವಂ ಜಾನಪದೈ ಸ್ತುಷ್ಟೈ ರಿತ್ಯುಕ್ತೋ ನಾಹುಷ ಸ್ತದಾ ॥೧೦॥
ಅಭಿಷಿಚ್ಯ ತತೋ ರಾಜ್ಯೇ ಪೂರುಂ ಸ ಸುತ ಮಾತ್ಮನಃ ।
ದಿಶಿ ದಕ್ಷಿಣ ಪೂರ್ವಸ್ಯಾಂ ತುರ್ವಸುಂ ಪುತ್ರಮಾದಿಶತ್ ॥೧೧॥
ದಕ್ಷಿಣಾಯಾ ಮಥೋ ರಾಜಾ ಯದುಂ ಜ್ಯೇಷ್ಠಂ ನ್ಯಯೋಜಯತ್
ಪ್ರತೀಚ್ಯಾ ಮುತ್ತರಸ್ಯಾಂ ತು ದ್ರುಹ್ಯಂ ಚಾನುಂ ಚ ತಾವುಭೌ ॥
ಸಪ್ತದ್ವೀಪಾಂ ಯಯಾತಿಸ್ತು ಜಿತ್ವಾ ಪೃಥ್ವೀಂ ಸಸಾಗರಾಂ ।
ವ್ಯಭಜಚ್ಚ ತ್ರಿಧಾ ರಾಜ್ಯಂ ಪುತ್ರೇಭ್ಯೋ ನಾಹುಷ ಸ್ತದಾ ॥೧೩॥
ಪುತ್ರ ಸಂಕ್ರಾಮಿತ ಶ್ರೀಸ್ತು ಹರ್ಷ ನಿರ್ಭರ ಮಾನಸಃ ।
ಪ್ರೀತಿಮಾನ ಭವದ್ರಾಜಾ ಭಾರಮಾವೇಶ್ಯ ಬಂಧುಷು ॥೧೪॥

---

ಇರುವನೋ ಅಂಥಾ ಮಗನೇ ಚಿಕ್ಕವನಾದರೂ ರಾಜ್ಯಾಭಿಷೇಕಕ್ಕೆ ಅರ್ಹನು. ಪೂರುವು ನಿಮ್ಮ ಮಾತನ್ನು ನಡೆಸಿರುವುದರಿಂದಲೂ, ಶುಕ್ರನ ವರವನ್ನು ಮೀರಲು ಅಸಾಧ್ಯವಾಗಿರುವುದರಿಂದಲೂ, ಅವನೇ ಈ ರಾಜ್ಯಕ್ಕೆ ಅರ್ಹನು. ಎಂದು ಒಪ್ಪಿದರು.

೧೦-೧೩. ಸೂತನು ಹೇಳಿದನು:—ಈ ರೀತಿಯಾಗಿ ಸಂತೋಷ ಗೊಂಡ ಪ್ರಜೆಗಳು ಒಪ್ಪಲು ಯಯಾತಿಯು ತನ್ನ ಸುಪುತ್ರನಾದ ಪೂರು ವನ್ನು ರಾಜ್ಯದಲ್ಲಿ ಅಭಿಷೇಕ ಮಾಡಿದನು. ಈಶಾನ್ಯದಿಕ್ಕಿನಲ್ಲಿ ತುರ್ವಸು, ಎಂಬ ಮಗನನ್ನು ಮೇಲ್ವಿಚಾರಣೆಗೆ ನಿಯಮಿಸಿದನು. ದೊರೆಯು ದಕ್ಷಿಣ ದಿಕ್ಕಿನಲ್ಲಿ ಹಿರಿಯುವನಾದ ಯದುವನ್ನು ನಿಯಮಿಸಿದನು. ಪಶ್ಚಿಮ ದಿಕ್ಕಿ ನಲ್ಲಿಯೂ, ಉತ್ತರ ದಿಕ್ಕಿನಲ್ಲಿಯೂ ದ್ರುಹ್ಯ, ಅನು, ಎಂಬ ಕುಮಾರ ರನ್ನು ಕ್ರಮವಾಗಿ ನಿಯಮಿಸಿದನು. ಆ ಮೇಲೆ ಯಯಾತಿಯು ಸಮುದ್ರ ದಿಂದ ಸುತ್ತುವರಿಯಲ್ಪಟ್ಟ ಏಳು ದ್ವೀಪಗಳುಳ್ಳ ಭೂಮಂಡಲವನ್ನೂ, ಗೆದ್ದು, ಬಹು ದೊಡ್ಡದಾದ ಆ ರಾಜ್ಯವನ್ನು ಮೂರು ಭಾಗವಾಗಿಮಾಡಿ ಆ ಮಕ್ಕಳಿಗೆಲ್ಲರಿಗೂ ಹಂಚಿದನು.

೧೪-೧೬. ಯಯಾತಿಯು ತನ್ನ ರಾಜ್ಯವೆಲ್ಲವನ್ನೂ ಅನುಭವಿಸಿ ಮಕ್ಕಳಿಗೆ ಹಂಚಿ ಬಹಳ ಸಂತೋಷಪಟ್ಟನು. ತನ್ನ ಭಾರವೆಲ್ಲವನ್ನೂ

ಅತ್ರ ಗಾಥಾ ಮಹಾರಾಜ್ಞಾ ಪುರಾ ಗೀತಾ ಯಯಾತಿನಾ ।
ಯಾಭಿಃ ಪ್ರತ್ಯಾಹರೇತ್ಕಾಮಾ ನ್ಸರ್ವತೋಽಂಗಾನಿ ಕೂರ್ಮವತ್॥
ತಾಭಿರೇವ ನರಃ ಶ್ರೀಮಾನ್ನಾನ್ಯಥಾ ಕರ್ಮ ಕೋಟಿ ಕೃತ್ ।
ನ ಜಾತು ಕಾಮಃ ಕಾಮಾನಾ ಮುಪಭೋಗೇನ ಶಾಮ್ಯತಿ ॥೧೬॥

ಹವಿಷಾ ಕೃಷ್ಣ ವರ್ತ್ಮೇವ ಭೂಯ ಏವಾಭಿ ವರ್ಧತೇ ।
ಯತ್ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ ॥೧೭॥
ನಾಲಮೇ ಕಸ್ಯ ತತ್ಸರ್ವ ಮಿತಿ ಮತ್ವಾಽಽಶ್ರಮಂ ವ್ರಜೇತ್ ।
ಯದಾ ನ ಕುರುತೇ ಭಾವಂ ಸರ್ವ ಭೂತೇಷು ಪಾಪಕಂ ॥೧೮॥

ಕರ್ಮಣಾ ಮನಸಾ ವಾಚಾ ಬ್ರಹ್ಮ ಸಂಪದ್ಯತೇ ತದಾ ।
ಯದಾ ಪರಾನ್ನಬಿಭೇತಿ ಪರೇ ಚಾಸ್ಮಾನ್ನ ಬಿಭ್ಯತಿ ॥೧೯॥

---

ಮಕ್ಕಳಿಗೆ ಹಂಚಿದ್ದರಿಂದ ಅವನಿಗೆ ಬಹಳ ಸಂತೋಷವಾಯಿತು. ಅಷ್ಟು ರಾಜ್ಯದ ವೈಭವ, ಪ್ರಪಂಚದ ಸುಖ ಭೋಗಗಳೆಲ್ಲವನ್ನೂ ಅನುಭವಿಸಿ ಕೊನೆಗೆ ಯಯಾತಿ ಮಹಾರಾಜನು ಹೀಗೆ ಹೇಳಿದನು. ಆಮೆಯು ತನ್ನ ಅವಯವಗಳನ್ನು ಮುದುರಿಕೊಳ್ಳುವಂತೆ ಯಾವ ಮನುಷ್ಯನು ತನ್ನ ಆಸೆಗಳನ್ನೆಲ್ಲವನ್ನೂ ಕಮ್ಮಿಮಾಡಿಕೊಳ್ಳುವನೋ ಅವನೇ ನಿಜವಾದ ಮನುಷ್ಯನು. ಹಾಗಲ್ಲದೇ ತನ್ನ ಆಶೆಗಳಿಂದ ಪ್ರೇರಿತನಾಗಿ ಕರ್ಮಮಾಡಿ ಎಷ್ಟು ಲಾಭಗಳನ್ನು ಹೊಂದಿದರೂ ಅವನ ಜೀವನ ಸಾರ್ಥಕವಾದಂತಾಗುವುದಿಲ್ಲ. ಏಕೆಂದರೆ ಬಯಕೆಯಿಂದ ಎಷ್ಟು ಸುಖಗಳನ್ನನುಭವಿಸಿದರೂ, ಬಯಕೆಗಳ ಶಮನವು ಆಗುವುದೇ ಇಲ್ಲ.

೧೭–೧೯. ಹವಿಸ್ಸು ಹಾಕುತ್ತಿದ್ದಷ್ಟೂ ಬೆಂಕಿಯು ಹೆಚ್ಚಾಗಿ ಜ್ವಲಿಸುವಂತೆ ಕಾಮಗಳನ್ನು ಅನುಭವಿಸಿದಷ್ಟೂ, ಅವು ಇನ್ನೂ ಹೆಚ್ಚಾಗುತ್ತವೆ. ಈ ಪ್ರಪಂಚದಲ್ಲಿರುವ ಎಲ್ಲಾ ದುಡ್ಡು, ದನ, ವಸ್ತು, ವಾಹನ ಮುಂತಾದುವುಗಳು, ಎಲ್ಲಾ ಸ್ತ್ರೀಯರೂ ಒಬ್ಬನಿಗೇ ದೊರಕಿದರೂ ಅವನ ಬಯಕೆಗಳಿಗೆ ತೃಪ್ತಿ ದೊರೆಯುವುದಿಲ್ಲ. ಎಂದು ಚೆನ್ನಾಗಿ ಅರಿತು ಮನುಷ್ಯನು ಶಾಂತಿಯನ್ನು ಹೊಂದಬೇಕು. ಯಾವ ಮನುಷ್ಯನು ಎಲ್ಲಾ

ಯದಾ ನ ನಿಂದೇ ನ್ನದ್ವೇಷ್ಟಿ ಬ್ರಹ್ಮ ಸಂಪದ್ಯತೇ ತದಾ ।
ಯಾ ದುಸ್ತ್ಯಜಾ ದುರ್ಮತಿಭಿ ರ್ಯಾ ನ ಜೀರ್ಯತಿ ಜೀರ್ಯತಃ ॥೨೦॥

ಯೋಽಸೌ ಪ್ರಾಣಾಂತಿಕೋ ರೋಗಸ್ತಾಂ ತೃಷ್ಣಾಂತ್ಯಜತಃ ಸುಖಂ
ಜೀರ್ಯಂತಿ ಜೀರ್ಯತಃ ಕೇಶಾ ದಂತಾ ಜೀರ್ಯಂತಿ ಜೀರ್ಯತಃ ॥೨೧॥

ಚಕ್ಷುಃ ಶ್ರೋತ್ರೇ ಚ ಜೀರ್ಯೇ ತೇ ತೃಷ್ಣೈಕಾ ನಿರುಪದ್ರವಾ ।
ಜೀರ್ಯಂತಿ ದೇಹಿನಃ ಸರ್ವೇ ಸ್ವಭಾವಾ ದೇವ ನಾನ್ಯಥಾ ॥೨೨॥

ಜೀವಿತಾಶಾ ಧನಾಶಾಚ ಜೀರ್ಯತೋಽಪಿ ನ ಜೀರ್ಯತೇ ।
ಯಚ್ಚ ಕಾಮ ಸುಖಂ ಲೋಕೇ ಯಚ್ಚ ದಿವ್ಯಂ ಮಹತ್ಸುಖಂ ॥೨೩॥

---

ಪ್ರಾಣಿಗಳ ವಿಷಯಗಳಲ್ಲಿಯೂ ಕೆಲಸದಲ್ಲಾಗಲೀ, ಮಾತಿನಲ್ಲಾಗಲೀ, ಮನಸ್ಸಿನಲ್ಲಾಗಲೀ, ಪಾಪಮಾಡಲು ಬಯಸುವುದಿಲ್ಲವೋ ಅವನಿಗೆ ಬ್ರಹ್ಮೈಕ್ಯರೂಪವಾದ ಮೋಕ್ಷವು ಸಿಕ್ಕುವುದು. ಯಾವನು ಇನ್ನೊಬ್ಬರಿಗೆ ಹೆದರುವಂತೆ ನಡೆದು ಕೊಳ್ಳುವುದಿಲ್ಲವೋ, ಅಥವಾ ಯಾವನ ನಡೆವಳಿಕೆಗಳಿಂದ ಇತರರಿಗೆ ಭಯವಿಲ್ಲವೋ, ಅಂಥವನು ಮೋಕ್ಷಪಡೆಯಲು ಅರ್ಹನು.

೨೦–೨೨. ಯಾವನು ಇನ್ನೊಬ್ಬರನ್ನು ನಿಂದಿಸುವುದಿಲ್ಲವೋ ಅಥವಾ ದ್ವೇಷಿಸುವುದಿಲ್ಲವೋ, ಅವನು ಮೋಕ್ಷಕ್ಕೆ ಯೋಗ್ಯನು. ಕೆಟ್ಟವರು ಆಶೆಯನ್ನು ಬಿಡಲಾರರು. ಮುಪ್ಪು ಬಂದರೂ ಆಶೆಗೆ ಮಾತ್ರ ಮುಪ್ಪು ಬರುವುದಿಲ್ಲ. ಪ್ರಾಣ ಹೋಗುವವರೆಗೆ ಮನುಷ್ಯರನ್ನು ಹಿಂಬಾಲಿಸಿರುವ ರೋಗವೇ ಆಶೆಯೆಂದು ತಿಳಿಯಬೇಕು. ಇಂಥಾ ಆಶೆಯನ್ನು ಬಿಟ್ಟಿರುವವನೇ ನಿಜವಾದ ಸುಖಪುರುಷನು. ಮನುಷ್ಯನಿಗೆ ಮುಪ್ಪು ಬಂದರೆ ಕೂದಲುಗಳೂ ನರೆಯಾಗುವುವು, ಹಲ್ಲುಗಳೂ ಬಿದ್ದು ಹೋಗುವುವು, ಕಣ್ಣು ಕಿವಿಗಳು ಕಾಣಿಸದೆ ಕೇಳಿಸದೇ ಹೋಗುವುವು. ಆದರೆ ಆಶೆಮಾತ್ರ ಹಾಳಾಗುವುದೇ ಇಲ್ಲ. ಮನುಷ್ಯನಿಗೆ ಸಂಬಧಪಟ್ಟ ದೇಹದ ಭಾಗಗಳೆಲ್ಲವೂ ತಾವಾಗಿಯೇ ಜೀರ್ಣವಾಗುವುವು. ಆಶೆಯು ಮಾತ್ರ ಹಾಗಾಗದು.

೨೩–೨೪. ಮನುಷ್ಯನಿಗೆ ಬದುಕಬೇಕೆಂಬ ಇಚ್ಛೆಯೂ, ದುಡ್ಡಿನ ಆಶೆಯೂ, ಮುಪ್ಪು ಬಂದರೂ ನಷ್ಟವಾಗುವುದಿಲ್ಲ. ಆಶೆಗಳನ್ನು ತೊರೆ

ತೃಷ್ಣಾ ಕ್ಷಯ ಸುಖಸ್ಯೈತತ್ಕಲಾಂ ನಾರ್ಹತಿ ಷೋಡಶೀಂ ।
ಏವ ಮುಕ್ತ್ವಾ ಸ ರಾಜರ್ಷಿಃ ಸದಾರಃ ಪ್ರಾವಿಶದ್ವನಂ ॥೨೪॥

ಭೃಗುತುಂಗೇ ತಪಸ್ತಪ್ತ್ವಾ ತತ್ರೈವ ಚ ಮಹಾಯಶಾಃ ।
ಸಾಧಯಿತ್ವಾ ತ್ವನಶನಂ ಸದಾರಃ ಸ್ವರ್ಗಮಾಪ್ತ ವಾನ್ ॥೨೫॥

ತಸ್ಯ ವಂಶಾತ್ತು ಪಂಚೈತೇ ಪುಣ್ಯಾ ದೇವರ್ಷಿ ಸತ್ಕೃತಾಃ ।
ಯೈ ರ್ವ್ಯಾಪ್ತಾ ಪೃಥಿವೀ ಕೃತ್ಸ್ನಾ ಸೂರ್ಯಸ್ಯೇವ ಮರೀಚಿಭಿಃ ॥

ಧನೀ ಪ್ರಜಾವಾ ನಾಯುಷ್ಮಾ ನ್ಕೀರ್ತಿ ಮಾಂಶ್ಚ ಭವೇನ್ನರಃ ।
ಯಯಾತಿ ಚರಿತಂ ಪುಣ್ಯಂ ಪಠ ಶೃಣ್ವಂ ಶ್ಚ ಬುದ್ಧಿಮಾನ್ ॥೨೭॥

---

ಯುವುದರಿಂದ ವುಂಟಾಗುವ ಸುಖದ ಹದಿನಾರನೆಯ ಒಂದು ಭಾಗದಷ್ಟು ಸುಖವೂ, ಎಲ್ಲಾ ಕಾಮಸುಖಗಳನ್ನು ಅನುಭವಿಸಿದರೂ, ಎಂಥಾ ಸ್ವರ್ಗ ಸೌಖ್ಯವನ್ನನುಭವಿಸಿದರೂ, ಬರಲಾರದೆಂಬುದು ಖಂಡಿತ. ಹೀಗೆ ಹೇಳಿ ಯಯಾತಿ ರಾಜನು ತನ್ನ ಪತ್ನಿಯೊಂದಿಗೆ ಅರಣ್ಯಕ್ಕೆ ಹೊರಟು ಹೋದನು.

೨೫-೨೭. ಮಹಾಕೀರ್ತಿಮಂತನಾದ ಯಯಾತಿಯು ಭೃಗುಪರ್ವತದ ಶಿಖರದಲ್ಲಿ ಉಪವಾಸವ್ರತವನ್ನು ತಪಸ್ಸನ್ನುಮಾಡಿ ಕೈಗೊಂಡು ಅದರ ಫಲವಾಗಿ ತನ್ನ ಪತ್ನಿಯೊಡನೆ ಸ್ವರ್ಗವನ್ನು ಹೊಂದಿದನು. ದೇವತೆಗಳೂ, ಋಷಿಗಳೂ, ಇವರೆಲ್ಲರಿಂದಲೂ ಪೂಜಿಸಲ್ಪಟ್ಟು ಐದು ವಂಶಗಳು ಅವನಿಗೆ ಸಂಬಂಧ ಪಟ್ಟವು. ಈ ವಂಶಗಳು ಬಹಳ ಪುಣ್ಯದಾಯಕಗಳು. ಸೂರ್ಯನ ಕಿರಣಗಳಂತೆಯೇ ಈ ಸಕಲ ಪ್ರಪಂಚವೂ ಈ ವಂಶಗಳಿಂದ ವ್ಯಾಪಿಸಲ್ಪಟ್ಟಿದೆ. ಈ ಪುಣ್ಯಕರವಾದ ಯಯಾತಿ ಚರಿತ್ರೆಯನ್ನು ಯಾವನು ಓದುತ್ತಾನೋ ಅಥವಾ ಕೇಳುತ್ತಾನೋ, ಅವನು ಧನಿಕನಾಗಿಯೂ

ಸರ್ವಪಾಪ ವಿನಿರ್ಮುಕ್ತಃ ಶಿವಲೋಕೇ ಮಹೀಯತೇ ॥೨೮॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಸೋಮವಂಶಜ ಯಯಾತಿ ಚರಿತ್ರವರ್ಣನಂ ನಾಮ ಸಪ್ತ ಷಷ್ಟಿತಮೋಽಧ್ಯಾಯಃ

---

ಸಂತಾನವುಳ್ಳವನಾಗಿಯೂ, ದೀರ್ಘಾಯುಸ್ಸುಳ್ಳವನಾಗಿಯೂ, ಕೀರ್ತಿವಂತನಾಗಿಯೂ ಬಾಳುವನು. ಅಂತಹ ಮನುಷ್ಯನು ಸಕಲ ಪಾಪಗಳಿಂದಲೂ ನಿವಾರಣೆಯನ್ನು ಹೊಂದಿ ಶಿವಲೋಕದಲ್ಲಿ ಬೆಳಗುವನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಸೋಮವಂಶದ ಯಯಾತಿ ಚರಿತ್ರೆಯ ವಿವರಣೆ ಎಂಬ ಅರವತ್ತೇಳನೆಯ ಅಧ್ಯಾಯವು ಮುಗಿದುದು.



ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
ಅಷ್ಟ ಷಷ್ಟಿತಮೋಽಧ್ಯಾಯಃ

॥ ಸೂತ ಉವಾಚ ॥

ಯದೋರ್ವಂಶಂ ಪ್ರವಕ್ಷ್ಯಾಮಿ ಜ್ಯೇಷ್ಠಸ್ಯೋತ್ತಮ ತೇಜಸಃ ।
ಸಂಕ್ಷೇಪೇಣಾನು ಪೂರ್ವ್ಯಾಚ್ಚ ಗದತೋ ಮೇ ನಿಬೋಧತ ॥ ೧ ॥

ಯದೋಃ ಪುತ್ರಾ ಬಭೂವು ರ್ಹಿ ಪಂಚ ದೇವಸುತೋಪಮಾಃ ।
ಸಹಸ್ರ ಜಿತ್ಸುತೋ ಜ್ಯೇಷ್ಠೋ ಕ್ರೋಷ್ಟುರ್ನೀಲೋಽಜಕೋ ಲಘುಃ

ಸಹಸ್ರ ಜಿತ್ಸುತಸ್ತದ್ವ ಚ್ಛತ ಜಿನ್ನಾಮ ಪಾರ್ಥಿವಃ ।
ಸುತಾಃ ಶತ ಜಿತಃ ಖ್ಯಾತಾ ಸ್ತ್ರಯಃ ಪರಮ ಕೀರ್ತಯಃ ॥ ೩ ॥

ಹೈ ಹಯಶ್ಚ ಹಯಶ್ಚೈವ ರಾಜಾ ವೇಣು ಹಯಶ್ಚಯಃ ।
ಹೈಹಯಸ್ಯ ತು ದಾಯಾದೋ ಧರ್ಮ ಇತ್ಯಭಿ ವಿಶ್ರುತಃ ॥ ೪ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಅರವತ್ತೆಂಟನೆಯ ಅಧ್ಯಾಯವು.

೧-೩. ಸೂತನು ಹೇಳಿದನು :—ಎಲ್ಲರಿಗೂ ಹಿರಿಯವನಾದ, ಬಹಳ ತೇಜಸ್ವಿಯಾದ, ಯದುವಿನ ವಂಶದ ವಿಷಯವನ್ನು ಹೇಳುವೆನು. ಇದನ್ನು ಸಂಗ್ರಹವಾಗಿಯೂ ಸರಿಯಾದ ಕ್ರಮದಲ್ಲಿಯೂ ಹೇಳುವೆನು. ಕೇಳಿರಿ. ಯದುವಿಗೆ, ದೇವ ಪುತ್ರರಿಗೆ ಸಮಾನರಾದ ಐವರು ಮಕ್ಕಳಿದ್ದರು. ಅವರಲ್ಲಿ ಸಹಸ್ರಜಿತ್, ಎಂಬುವನು ಹಿರಿಯವನು. ಇವನು ಅಲ್ಲದೆ ಕ್ರೋಷ್ಟು, ನೀಲ, ಅಜ, ಲಘು, ಎಂಬ ನಾಲ್ಕು ಮಕ್ಕಳು. ಸಹಸ್ರಜಿತುವಿಗೆ "ಶತಜಿತ್" ಎಂಬ ರಾಜಕುಮಾರನಿದ್ದನು. ಶತಜಿತುವಿಗೆ ಬಹಳ ಕೀರ್ತಿವಂತರಾದ ಮೂವರು ಮಕ್ಕಳಿದ್ದರು.

೪-೬. ಹೈಹಯ, ಹಯ, ವೇಣುಹಯ ಎಂಬುವರೇ ಆ ಮೂವರು ಮಕ್ಕಳು. ಹೈಹಯ ಎಂಬುವನ ಜ್ಞಾತಿಯು ಧರ್ಮ ಎಂದು ಪ್ರಸಿದ್ಧನಾಗಿದ್ದನು. ಎಲೈ ಬ್ರಾಹ್ಮಣರೇ, ಧರ್ಮನ ಮಗನು ಧರ್ಮ

ತಸ್ಯ ಪುತ್ರೋಽಭವದ್ವಿಪ್ರಾ ಧರ್ಮನೇತ್ರ ಇತಿ ಶ್ರುತಃ ।
ಧರ್ಮನೇತ್ರಸ್ಯ ಕೀರ್ತಿಸ್ತು ಸಂಜಯಸ್ತಸ್ಯ ಚಾತ್ಮಜಃ ॥ ೫ ॥

ಸಂಜಯಸ್ಯ ತು ದಾಯಾದೋ ಮಹಿಷ್ಮಾನ್ನಾಮ ಧಾರ್ಮಿಕಃ ।
ಆಸೀನ್ಮಹಿಷ್ಮತಃ ಪುತ್ರೋ ಭದ್ರಶ್ರೇಣ್ಯಃ ಪ್ರತಾಪವಾನ್ ॥ ೬ ॥

ಭದ್ರ ಶ್ರೇಣ್ಯಸ್ಯ ದಾಯಾದೋ ದುರ್ದಮೋ ನಾಮ ಪಾರ್ಥಿವಃ ।
ದುರ್ದಮಸ್ಯ ಸುತೋ ಧೀಮಾನ್ ಧನಿಕೋ ನಾಮ ವಿಶ್ರುತಃ ॥ ೭ ॥

ಧನಿಕಸ್ಯ ತು ದಾಯಾದಾ ಶ್ಚತ್ವಾರೋ ಲೋಕಸಂಮತಾಃ ।
ಕೃತವೀರ್ಯಃ ಕೃತಾಗ್ನಿಶ್ಚ ಕೃತವರ್ಮಾ ತಥೈವ ಚ ॥ ೮ ॥

ಕೃತೌಜಾಶ್ಚ ಚತುರ್ಥೋಽಭೂತ್ಕಾರ್ತವೀರ್ಯಸ್ತತೋಽರ್ಜುನಃ ।
ಜಜ್ಞೇ ಬಾಹು ಸಹಸ್ರೇಣ ಸಪ್ತದ್ವೀಪೇಶ್ವರೋತ್ತಮಃ ॥ ೯ ॥

ತಸ್ಯ ರಾಮಸ್ತದಾ ತ್ವಾಸೀ ನ್ಮೃತ್ಯುಃ ನಾರಾಯಣಾತ್ಮಕಃ ।
ತಸ್ಯ ಪುತ್ರ ಶತಾನ್ಯಾಸ ನ್ಪಂಚ ತತ್ರ ಮಹಾರಥಾಃ ॥೧೦॥

---

ನೇತ್ರ, ಎಂದು ತಿಳಿಯಿರಿ. ಧರ್ಮನೇತ್ರನಿಗೆ ಕೀರ್ತಿಯೂ, ಕೀರ್ತಿಗೆ ಸಂಜಯನೂ ಮಕ್ಕಳಾಗಿದ್ದರು. ಆ ಸಂಜಯನಿಗೆ ಮಹಿಷ್ಮಾನ್ ಎಂಬ ಧಾರ್ಮಿಕನಾದ ಮಗನಿದ್ದನು. ಆ ಮಹಿಷ್ಮಂತನಿಗೆ ಭದ್ರಶ್ರೇಣ್ಯ ಎಂಬ ಶೂರನಾದ ಕುಮಾರನಿದ್ದನು.

೭–೯. ದುರ್ದಮನೆಂಬ ದೊರೆಯು ಭದ್ರಶ್ರೇಣ್ಯನ ಮಗನು. ದುರ್ದಮನಿಗೆ ಧನಿಕನೆಂಬ ಬುದ್ಧಿಶಾಲಿಯಾದ ಕುಮಾರನು ಹುಟ್ಟಿದನು. ಧನಿಕನಿಗೆ ಲೋಕದಲ್ಲಿ ಗೌರವಿಸಲ್ಪಟ್ಟ ನಾಲ್ಕು ಜನ ಮಕ್ಕಳಿದ್ದರು. ಕೃತವೀರ್ಯ, ಕೃತಾಗ್ನಿ, ಕೃತವರ್ಮ, ಕೃತೌಜಸ್ ಎಂಬುವರೇ ಆ ನಾಲ್ಕು ಮಕ್ಕಳು. ಕಾರ್ತವೀರ್ಯಾರ್ಜುನನು ಏಳು ದ್ವೀಪಕ್ಕೂ ದೊರೆಯಾಗಿಯೂ ಸಾವಿರ ತೋಳುಗಳಿಂದಲೂ ಪ್ರಕಾಶಿಸುತ್ತಿದ್ದನು.

೧೦–೧೨. ಕಾರ್ತವೀರ್ಯಾರ್ಜುನನಿಗೆ ನಾರಾಯಣ ಸ್ವರೂಪಿಯಾದ ಪರಶುರಾಮನು ಮೃತ್ಯುವಾದನು. ಕಾರ್ತವೀರ್ಯಾರ್ಜುನನಿಗೆ ನೂರು ಜನ

ಕೃತಾಸ್ತ್ರಾ ಬಲಿನಃ ಶೂರಾ ಧರ್ಮಾತ್ಮಾನೋ ಮನಸ್ವಿನಃ ।
ಶೂರಶ್ಚ ಶೂರಸೇನಶ್ಚ ಧೃಷ್ಟಃ ಕೃಷ್ಣಸ್ತಥೈವಚ ॥೧೧॥

ಜಯಧ್ವಜ ಶ್ಚ ರಾಜಾಽಽಸೀ ದಾವಂತೀನಾಂ ವಿಶಾಂ ಪತಿಃ ।
ಜಯಧ್ವಜಸ್ಯ ಪುತ್ರೋಽಭೂತ್ತಾಲ ಜಂಘೋ ಮಹಾಬಲಃ ॥೧೨॥

ಶತಂ ಪುತ್ರಾಸ್ತು ತಸ್ಯೇಹ ಕಾಲಜಂಘಾಃ ಪ್ರಕೀರ್ತಿತಾಃ ।
ತೇಷಾಂ ಜ್ಯೇಷ್ಠೋ ಮಹಾವೀರ್ಯೋ ವೀತಿಹೋತ್ರೋಽಭವನ್ನೃಪಃ

ವೃಷಪ್ರಭೃತಯ ಶ್ಚಾನ್ಯೇ ತತ್ಸುತಾಃ ಪುಣ್ಯ ಕರ್ಮಣಃ ।
ವೃಷೋ ವಂಶಕರಸ್ತೇಷಾಂ ತಸ್ಯಪುತ್ರೋಽಭವನ್ಮಧುಃ ॥೧೪॥

ಮಧೋಃ ಪುತ್ರ ಶತಂ ಚಾಸೀ ದ್ವೃಷ್ಣಿ ಸ್ತಸ್ಯ ತು ವಂಶಭಾಕ್ ।
ವೃಷ್ಣೇಃ ವೃಷ್ಣಯಃ ಸರ್ವೇ ಮಧೋರ್ವೈ ಮಾಧವಾಃ ಸ್ಮೃತಾಃ ॥

---

ಮಕ್ಕಳಿದ್ದರು. ಅವರಲ್ಲಿ ಐದು ಜನರು ಮಹಾರಥ ಎಂಬ ದೊಡ್ಡ ಬಿರುದಿಗೆ ಪಾತ್ರರಾಗಿ, ಯುದ್ಧದಲ್ಲಿ ಬಹು ಗಟ್ಟಿಗರಾಗಿದ್ದರು. ಶೂರ, ಶೂರಸೇನ, ಧೃಷ್ಟ, ಕೃಷ್ಣ, ಜಯಧ್ವಜ, ಎಂಬ ಆ ಐದು ಮಂದಿ ಮಕ್ಕಳೂ, ಅಸ್ತ್ರವಿದ್ಯೆಯಲ್ಲಿ ಗಟ್ಟಿಗರಾಗಿಯೂ, ಶೂರರಾಗಿಯೂ, ಧರ್ಮಿಕರಾಗಿಯೂ ನಿರಂಕುಶ ಪ್ರಭುಗಳಾಗಿಯೂ, ಇದ್ದರು. ಜಯಧ್ವಜನು ಅವಂತಿ ದೇಶಕ್ಕೆ ಅಧಿಪತಿಯಾಗಿದ್ದನು. ಮಹಾಬಲಿಷ್ಠನಾದ ತಾಲಜಂಘನು ಜಯಧ್ವಜನ ಮಗನು.

೧೩–೧೫. ತಾಲಜಂಘನಿಗೆ ನೂರು ಜನ ಕಾಲಜಂಘರೆಂದು ಪ್ರಸಿದ್ಧರಾಗಿದ್ದ ಮಕ್ಕಳಿದ್ದರು. ಇವರುಗಳಲ್ಲಿ ಹಿರಿಯಮಗನಾದ ವೀತಿಹೊತ್ರನು ಬಹಳ ಪರಾಕ್ರಮಶಾಲಿಯಾಗಿ ಪುಣ್ಯಕರ್ಮ ಮಾಡುವವನಾಗಿ ಇದ್ದನು. ವೃಷನೇ ಮೊದಲಾದ ಇತರ ಮಕ್ಕಳೂ ಬಹಳ ಒಳ್ಳೆಯ ಕೆಲಸ ಮಾಡುತ್ತಾ ಇದ್ದರು. ಅವರಲ್ಲಿ ವೃಷನು ವಂಶೋದ್ಧಾರಕನು. ಅವನ ಮಗನು ಮಧುವು. ಮಧುವಿಗೆ ನೂರು ಜನ ಮಕ್ಕಳಿದ್ದರು. ವೃಷ್ಣಿ, ಎಂಬುವನು ಆವರಲ್ಲಿ ವಂಶೋದ್ಧಾರಕನು. ವೃಷ್ಣಿಯ ಮಕ್ಕಳುಗಳೆಲ್ಲರೂ ವೃಷ್ಣಿಗಳೆಂದೂ, ಮಧುವಿನ ಮಕ್ಕಳೆಲ್ಲಾ ಮಾಧವರೆಂದೂ, ಕರೆಯಲ್ಪಡುತ್ತಾರೆ.

ಯಾದವಾ ಯದುವಂಶೇನ ನಿರುಚ್ಯಂತೇ ತು ಹೈಹಯಾಃ ।
ತೇಷಾಂ ಪಂಚಗಣಾ ಹ್ಯೇತೇ ಹೈಹಯಾನಾಂ ಮಹಾತ್ಮಾನಾಂ ॥

ವೀತಿಹೊತ್ರಾಶ್ಚ ಹರ್ಯಾತಾ ಭೋಜಾಶ್ಚಾವಂತಯ ಸ್ತಥಾ ।
ಶೂರ ಸೇನಾಸ್ತು ವಿಖ್ಯಾತಾ ಸ್ತಾಲ ಜಂಘಾಸ್ತಥೈವ ಚ ॥೧೭॥

ಶೂರಶ್ಚ ಶೂರಸೇನಶ್ಚ ವೃಷಃ ಕೃಷ್ಣಸ್ತ ಥೈವ ಚ ।
ಜಯಧ್ವಜಃ ಪಂಚಮಸ್ತು ವಿಖ್ಯಾತಾ ಹೈಹಯೋತ್ತಮಾಃ ॥೧೮॥

ಶೂರಶ್ಚ ಶೂರವೀರಶ್ಚ ಶೂರಸೇನಸ್ಯ ಚಾನಘಾಃ ।
ಶೂರಸೇನಾ ಇತಿಖ್ಯಾತಾ ದೇಶಾಸ್ತೇಷಾಂ ಮಹಾತ್ಮನಾಂ ॥೧೯॥

ವೀತಿಹೋತ್ರ ಸುತಶ್ಚಾಪಿ ವಿಶ್ರುತೋಽನರ್ತ ಇತ್ಯುತ ।
ದುರ್ಜಯಃ ಕೃಷ್ಣಪುತ್ರಸ್ತು ಬಭೂವಾಽಮಿತ್ರ ಕರ್ಶನಃ ॥೨೦॥

ಕ್ರೋಷ್ಟು ಶ್ಚ ಶೃಣು ರಾಜರ್ಷೇಃ ವಂಶ ಮುತ್ತಮ ಪೌರುಷಂ ।
ಯಸ್ಯಾನ್ವಯೇ ತು ಸಂಭೂತೋ ವಿಷ್ಣು ರ್ವೃಷ್ಣಿ ಕುಲೋದ್ವಹಃ ॥

---

೧೬–೧೮. ಯದುವಂಶದವರಿಗೆ ಯಾದವರೆಂದು ಹೆಸರು. ಹೈಹಯನಿಗೆ ಸಂಬಂಧಪಟ್ಟ ಐದು ಗುಂಪುಗಳಿವೆ. ವೀತಿಹೋತ್ರ, ಹರ್ಯಾತ, ಭೋಜ, ಅವಂತಿ, ಶೂರಸೇನ, ತಾಲಜಂಘ, ಶೂರ, ಶೂರಸೇನ, ವೃಷ, ಕೃಷ್ಣ, ಜಯಧ್ವಜ, ಇವೆಲ್ಲವೂ, ಹೈಹಯರ ಶ್ರೇಷ್ಠವಾದ ಗುಂಪುಗಳೆಂದು ಅರಿಯಬೇಕು.

೧೯. ಮಹಾತ್ಮರಾದ ಶೂರಸೇನರ ದೇಶಗಳು, ಶೂರ, ಶೂರವೀರ, ಶೂರಸೇನ, ಎಂಬುದೆಲ್ಲವೂ ಶೂರಸೇನ ದೇಶಗಳೆಂದು ಪ್ರಸಿದ್ಧವಾಗಿವೆ.

೨೦–೨೧. ಅನರ್ತ, ಎಂದು ಪ್ರಸಿದ್ಧನಾದ ಮಗನು ವೀತಿಹೋತ್ರನಿಂದ ಉತ್ಪನ್ನನಾದನು. ಶತ್ರು ನಾಶಕನಾದ ಕೃಷ್ಣನ ಮಗನಾದ ದುರ್ಜಯನು ಪ್ರಸಿದ್ಧನಾಗಿದ್ದನು. ರಾಜರ್ಷಿಯಾದ ಕ್ರೋಷ್ಟುವಿನ ವಂಶದ ವಿಷಯಗಳನ್ನು ಕೇಳಿರಿ. ಇವನ ವಂಶದಲ್ಲೇ ವೃಷ್ಣಿಕುಲಕ್ಕೆ ತಿಲಕಪ್ರಾಯನಾದ ವಿಷ್ಣುವು ಹುಟ್ಟಿದನು.

ಕ್ರೋಷ್ಟೋ ರೇಕೋಽಭವತ್ಪುತ್ರೋ ವೃಜಿನೀವಾನ್ ಮಹಾ
ಯಂಶಾಃ ।
ತಸ್ಯ ಪುತ್ರೋಽಭವತ್ಸ್ವಾತೀ ಕುಶಂಕುಸ್ತ ತ್ಸುತೋಽಭವತ್ ॥೨೨॥
ಅಥ ಪ್ರಸೂತಿ ಮಿಚ್ಛ ನ್ವೈ ಕುಶಂಕುಃ ಸುಮಹಾ ಬಲಃ ।
ಮಹಾಕ್ರತುಭಿ ರೀಜೇಽಸೌ ವಿವಿಧೈ ರಾಪ್ತ ದಕ್ಷಿಣೈಃ ॥೨೩॥
ಜಜ್ಞೇ ಚಿತ್ರರಥ ಸ್ತಸ್ಯ ಪುತ್ರಃ ಕರ್ಮಭಿರನ್ವಿತಃ ।
ಅಥ ಚೈತ್ರರಥೋ ವೀರೋ ಯಜ್ವಾ ವಿಪುಲ ದಕ್ಷಿಣಃ ॥೨೪॥
ಶಶಬಿಂದುಸ್ತು ವೈ ರಾಜಾ ಅನ್ವಯಾ ದ್ವ್ರತ ಮುತ್ತಮಂ ।
ಚಕ್ರವರ್ತೀ ಮಹಾಸತ್ವೋ ಮಹಾವೀರ್ಯೋ ಬಹುಪ್ರಜಾಃ ॥೨೫॥
ಶಶಬಿಂದೋಸ್ತು ಪುತ್ರಾಣಾಂ ಸಹಸ್ರಾಣಾ ಮಭೂಚ್ಛತಂ ।
ಶಂಸಂತಿ ತಸ್ಯ ಪುತ್ರಾಣಾ ಮನಂತಕ ಮನುತ್ತಮಂ ॥೨೬॥

---

೨೨. ಕ್ರೋಷ್ಟುವಿಗೆ ವೃಜಿನೀವಾನ್, ಎಂಬ ಬಹಳ ಕೀರ್ತಿವಂತನಾದ ಮಗನಿದ್ದನು. ಅವನಿಗೆ ಸ್ವಾತಿಯು ಮಗನಾದನು. ಅವನಿಗೆ ಕುಶಂಕುವು ಮಗನಾದನು.

೨೩. ಬಹಳ ಬಲಿಷ್ಠನಾದ ಕುಶಂಕುವು ಮಕ್ಕಳಾಗಬೇಕೆಂಬ ಅಪೇಕ್ಷೆಯಿಂದ ಬ್ರಾಹ್ಮಣರುಗಳಿಗೆ ಸಂತೋಷ ಪಡಿಸುವ ಅನೇಕ ವಿಧವಾದ ದಕ್ಷಿಣೆಗಳನ್ನು ಕೊಟ್ಟು ದೊಡ್ಡ ದೊಡ್ಡ ಯಾಗಗಳನ್ನು ನಡೆಸಿದನು.

೨೪–೨೬. ಕುಶಂಕುವಿಗೆ ಪುಣ್ಯಶಾಲಿಯಾದ ಚಿತ್ರರಥನೆಂಬ ಮಗನಾದನು. ಚಿತ್ರರಥನ ಮಗನಾದ ಶಶಬಿಂದುವೂ ಕೂಡ, ಬಹಳ ಶೂರನಾಗಿಯೂ, ಹೆಚ್ಚು ದಕ್ಷಿಣೆಗಳನ್ನು ಕೊಟ್ಟು ಯಾಗಮಾಡಿದವನಾಗಿಯೂ ಹೆಸರುವಾಸಿಯಾದ ದೊರೆಯಾಗಿದ್ದನು. ಇವನು ಚಕ್ರವರ್ತಿಯಾಗಿಯೂ ಬಹಳ ಪರಾಕ್ರಮಶಾಲಿಯಾಗಿಯೂ, ಅನೇಕ ಮಕ್ಕಳೊಂದಿಗನಾಗಿಯೂ, ಬಾಳಿದನು. ಇವನು ಯಾಗಗಳನ್ನು ಮಾಡಿದ್ದರಿಂದ ಒಂದು ನೂರು ಸಾವಿರ ಮಕ್ಕಳಾದರೆಂದು ಪ್ರಸಿದ್ಧಿಯಿದೆ. ಇವರ ಪೈಕಿ ಅನಂತಕ, ಎಂಬುವನು ಅತ್ಯಂತ ಶ್ರೇಷ್ಠನಾಗಿದ್ದನು.

ಅನಂತಕಾತ್ಸುತೋ ಯಜ್ಞೋ ಯಜ್ಞಸ್ಯ ತನಯೋ ಧೃತಿಃ ।
ಉಶನಾ ಸ್ತಸ್ಯ ತನಯಃ ಸಂಪ್ರಾಪ್ಯ ತು ಮಹೀಮಿಮಾಂ ॥೨೭॥
ಆಜಹಾರಾ ಶ್ವಮೇಧಾನಾಂ ಶತಮುತ್ತಮ ಧಾರ್ಮಿಕಃ ।
ಸ್ಮೃತ ಶ್ಶೋ ಶನಸಃ ಪುತ್ರಃ ಸಿತೇಷು ರ್ನಾಮ ಪಾರ್ಥಿವಃ ॥೨೮॥
ಮರುತ ಸ್ತಸ್ಯ ತನಯೋ ರಾಜರ್ಷಿರ್ವಂಶ ವರ್ಧನಃ ।
ವೀರಃ ಕಂಬಲ ಬರ್ಹಿಸ್ತು ಮರುಸ್ತಸ್ಯಾತ್ಮಜಃ ಸ್ಮೃತಃ ॥೨೯॥
ಪುತ್ರಸ್ತು ರುಕ್ಮ ಕವಚೋ ವಿದ್ವಾನ್ಸಕಂಬಲ ಬರ್ಹಿಷಃ ।
ನಿಹತ್ಯ ರುಕ್ಮ ಕವಚೋ ವೀರಾನ್ಕವಚಿನೋ ರಣೇ ॥೩೦॥
ಧನ್ವಿನೋ ನಿಶಿತೈ ರ್ಬಾಣೈಃ ಅವಾಪ ಶ್ರಿಯ ಮುತ್ತಮಾಂ ।
ಅಶ್ವಮೇಧೇ ತು ಧರ್ಮಾತ್ಮಾ ಋತ್ವಿಗ್ಭ್ಯಃ ಪೃಥಿವೀಂ ದದೌ ॥೩೧॥

---

೨೭–೨೮. ಅನಂತಕನ ಮಗನು ಯಜ್ಞನು. ಯಜ್ಞನ ಮಗನು ಧೃತಿಯು, ಧೃತಿಯ ಮಗನು ಉಶನಸ್ಸು, ಉಶನಸ್ಸಿನ ಮಗನು ಬಹಳ ಧಾರ್ಮಿಕರಲ್ಲಿ ಶ್ರೇಷ್ಠನಾಗಿಯೂ, ಅಶ್ವಮೇಧ, ಮುಂತಾದ ನೂರುಯಾಗ ಗಳನ್ನು ಮಾಡಿದವನಾಗಿಯೂ ಇದ್ದನು. ಇವನು ಸೀತೆಷು, ಎಂದು ಪ್ರಸಿದ್ಧನಾದ ರಾಜನಾಗಿದ್ದನು.

೨೯–೩೧. ಸಿತೇಷುವಿನ ಮಗನು ಮರುತ. ಇವನು ರಾಜರ್ಷಿ ಯಾಗಿಯೂ, ವಂಶೋದ್ಧಾರಕನಾಗಿಯೂ, ಇದ್ದನು. ಮರುತನ ಮಗನು ವೀರನಾಗಿಯೂ, ಕಂಬಲ ಬರ್ಹಿ, ಎಂದು ಪ್ರಸಿದ್ಧನಾಗಿಯೂ ಇದ್ದನು. ಕಂಬಲಬರ್ಹಿಸ್ಸಿನ ಮಗನು, ವಿದ್ವಾಂಸನಾದ ರುಕ್ಮಕವಚನು. ಇವನು ಯುದ್ಧ ಕವಚಗಳನ್ನು ಧರಿಸಿ ಬಹಳ ಗಟ್ಟಿಗರಾದ ಭಟರನ್ನು ಯುದ್ಧದಲ್ಲಿ ನಾಶಮಾಡಿ, ಬೇಕಾದಷ್ಟು ಹಣವನ್ನು ಸಂಪಾದಿಸಿದನು. ಧಾರ್ಮಿಕ ನಾದ ಇವನು ಅಶ್ವಮೇಧ ಯಾಗಮಾಡಿ, ಋತ್ವಿಕ್ಕುಗಳಿಗೆ ಬೇಕಾದ ಹಾಗೆ ಭೂಮಿಯನ್ನು ದಾನಮಾಡಿದನು.

ಜಜ್ಞೇ ತು ರುಕ್ಮಕವಚಾ ತ್ಸರಾಪೃತ್ಸರ ವೀರಹಾ ।
ಜಜ್ಞಿರೇ ಪಂಚ ಪುತ್ರಾಸ್ತು ಮಹಾಸತ್ವಾಃ ಪರಾವೃತಃ ॥೩೨॥

ರುಕ್ಮೇಷುಃ ಪೃಥುರುಕ್ಮಶ್ಚ ಜ್ಯಾಮುಘಃ ಪರಿಘೋ ಹರಿಃ ।
ಪರಿಘಂ ಚ ಹರಿಂ ಚೈವ ವಿದೇಹೇಷು ಪಿತಾ ನ್ಯಸತ್ ॥೩೩॥

ರುಕ್ಮೇಷು ರಭವ ದ್ರಾಜಾ ಪೃಥು ರುಕ್ಮಸ್ತದಾಶ್ರಯಾತ್ ।
ತೈಸ್ತು ಪ್ರವಾಜಿತೋ ರಾಜಾ ಜ್ಯಾಮುಘೋಽವಸದಾಶ್ರಮೇ ॥೩೪॥

ಪ್ರಶಾಂತಃ ಸ ವನಸ್ಥೋಽಪಿ ಬ್ರಾಹ್ಮಣೈ ರೇವ ಬೋಧಿತಃ ।
ಜಗಾಮ ಧನುರಾದಾಯ ದೇಶಮನ್ಯಂ ಧ್ವಜೀ ರಥೀ ॥೩೫॥

ನರ್ಮದಾ ತೀರ ಮೇಕಾಕೀ ಕೇವಲಂ ಭಾರ್ಯಯಾ ಯುತಃ ।
ಋಕ್ಷವಂತಂ ಗಿರಿಂ ಗತ್ವಾ ತ್ಯಕ್ತಮನ್ಯೈರುವಾಸ ಸಃ ॥೩೬॥

---

೩೨–೩೪. ರುಕ್ಮ ಕವಚನಿಗೆ ಶತ್ರುನಾಶಕರಾದ, ಬಹಳ ಪರಾಕ್ರಮ ಶಾಲಿಗಳಾದ ಐದುಜನ ಮಕ್ಕಳಾದರು. ರುಕ್ಮೇಷು, ಪೃಥುರುಕ್ಮ, ಜ್ಯಾಮುಘ, ಪರಿಘ, ಹರಿ, ಎಂಬುವರೇ ಆ ಐದುಜನ ಮಕ್ಕಳು. ಇವರ ಪೈಕಿ, ಪರಿಘನನ್ನೂ, ಹರಿಯನ್ನೂ ರುಕ್ಮಕವಚನು ಶತ್ರುಗಳನ್ನಡಗಿಸವುದಕ್ಕಾಗಿ ವಿದೇಹದೇಶದಲ್ಲಿಟ್ಟನು. ಮೊದಲನೆಯವನಾದ ರುಕ್ಮೇಷುವು ದೊರೆಯಾದನು. ಪೃಥುರುಕ್ಮನು ಅವನನ್ನು ಅನುಸರಿಸಿಕೊಂಡಿದ್ದನು. ಆದರೆ ಜ್ಯಾಮುಘ, ಎಂಬ ಧೊರೆಯು ಮಾತ್ರ ವಿರಕ್ತನಾಗಿ ಆಶ್ರಮ ವಾಸಿಯಾದನು.

೩೫–೩೬. ಜ್ಯಾಮುಘನು ಶಾಂತಿಯುಕ್ತವಾದ ಮನಸ್ಸಿನಿಂದ ವನದಲ್ಲಿ ಸಂನ್ಯಾಸಿಯಾಗಿದ್ದರೂ, ಬ್ರಾಹ್ಮಣರ ಆಜ್ಞಾನುಸಾರವಾಗಿ ಪುನಃ ಧನುಸ್ಸನ್ನು ಹಿಡಿದು, ರಥವ ಮೇಲೆ ಕೂತು ಬೇರೆ ದೇಶಕ್ಕೆ ಹೋದನು. ಇವನು ತನ್ನ ಪತ್ನಿಯೊಡನೆ ಇನ್ಯಾರನ್ನೂ ಜೊತೆಯಲ್ಲಿ ಕರೆದುಕೊಳ್ಳದೇ, ನಿರ್ಜನವಾದ ನರ್ಮದಾನದಿಯ ದಡದಲ್ಲಿದ್ದ, ಋಕ್ಷವಂತ, ಎಂಬ ಪರ್ವತವನ್ನು ಪ್ರವೇಶಿಸಿ ಅಲ್ಲಿ ವಾಸಮಾಡಿಕೊಂಡಿದ್ದನು. ಜ್ಯಾಮುಘನ ಪತ್ನಿ

ಜ್ಯಾಮುಘಸ್ಯಾ ಭವದ್ಭಾರ್ಯಾ ಶೈಬ್ಯಾ ಶೀಲವತೀ ಸತೀ ।
ಸಾ ಚೈವ ತಪಸೋ ಗ್ರೇಣ ಶೈಬ್ಯಾ ವೈ ಸಂಪ್ರಸೂಯತ ॥೩೭॥
ಸುತಂ ವಿದರ್ಭಂ ಸುಭಗಾ ವಯಃ ಪರಿಣತಾ ಸತೀ ।
ರಾಜಪುತ್ರ ಸುತಾಯಾಂ ತು ವಿದ್ವಾಂಸೌ ಕ್ರಥ ಕೌಶಿಕೌ ॥೩೮॥
ಪುತ್ರೌ ವಿದರ್ಭರಾಜಸ್ಯ ಶೂರೌ ರಣ ವಿಶಾರದೌ ।
ರೋಮಪಾದ ಸ್ತೃತೀಯಶ್ಚ ಬಭ್ರುಸ್ತಸ್ಯಾತ್ಮಜಃ ಸ್ಮೃತಃ ॥೩೯॥
ಸುಧೃತಿ ಸ್ತನಯ ಸ್ತಸ್ಯ ವಿದ್ವಾನ್ ಪರಮ ಧಾರ್ಮಿಕಃ ।
ಕೌಶಿಕ ಸ್ತನಯ ಸ್ತಸ್ಮಾ ತ್ತಸ್ಮಾ ಚ್ಚೈದ್ಯಾ ನ್ವಯಃ ಸ್ಮೃತಃ ॥೪೦॥
ಕ್ರಥೋ ವಿದರ್ಭಸ್ಯ ಸುತಃ ಕುಂತಿ ಸ್ತಸ್ಯಾತ್ಮಜೋಽಭವತ್ ।
ಕುಂತೇ ರ್ವೃತ ಸ್ತತೋ ಜಜ್ಞೇ ರಣಧೃಷ್ಟಃ ಪ್ರತಾಪವಾನ್ ॥೪೧॥

---

ಯು ಶೈಬ್ಯಾ, ಎಂಬುವಳು, ಬಹಳ ಗುಣಾಢ್ಯಳಾಗಿದ್ದಳು. ಅವಳೂ ಘೋರವಾದ ತಪಸ್ಸನ್ನು ಮಾಡಿ ಒಳ್ಳೇ ಪುತ್ರನನ್ನು ಎಂದರೆ,

೩೮–೪೦. ವೃದ್ಧಳೂ, ಸುಂದರಳೂ, ಆದ ಶೈಬ್ಯೆಯು ವಿದರ್ಭ, ನೆಂಬ ಮಗನನ್ನು ಹೆತ್ತಳು. ವಿದರ್ಭರಾಜನಿಗೆ ವಿದ್ವಾಂಸರಾದ, ಕ್ರಥ, ಕೌಶಿಕ, ಎಂಬಿಬ್ಬರು ಮಕ್ಕಳೂ ಮತ್ತು ರೋಮಪಾದನೆಂಬ ಮೂರನೆಯ ಮಗನೂ, ಆದರು. ರೋಮಪಾದನಿಗೆ ಬಭ್ರು ವೆಂಬ ಮಗನಾದನು. ಬಭ್ರುವಿಗೆ ಸುಧೃತಿ ಎಂಬ ಮಗನೂ, ಸುಧೃತಿಗೆ ಪರಮ ಧರ್ಮಿಷ್ಠನೂ ಮತ್ತು ವಿದ್ವಾಂಸನೂ ಆದ ಕೌಶಿಕ ನೆಂಬ ಮಗನೂ ಆದರು. ಕೌಶಿಕನಿಂದ ಚೈದ್ಯ, ಎಂಬ ವಂಶ ವುಂಟಾಯಿತೆಂದು ಹೇಳಲ್ಪಟ್ಟಿದೆ.

೪೧–೪೩. ವಿದರ್ಭನಿಗೆ ಕ್ರಥನೆಂಬ ಮಗನಾದನು. ಕ್ರಥನಿಗೆ ಕುಂತಿ ಎಂಬ ಮಗನು ಹುಟ್ಟಿದನು. ಕುಂತಿಗೆ ವೃತನೂ, ವೃತನಿಗೆ ಶೂರನಾದ ರಣಧೃಷ್ಟನೂ, ಮಕ್ಕಳಾದರು. ರಣಧೃಷ್ಟನಿಗೆ ಶತ್ರುನಾಶಕನಾದ ನಿಧೃತಿ, ಎಂಬ ಮಗನಾದನು. ನಿಧೃತಿಗೆ ದಶಾರ್ಹ

ರಣಧೃಷ್ಟಸ್ಯ ಚ ಸುತೋ ನಿಧೃತಿಃ ಪರವೀ ರಹಾ ।
ದಶಾರ್ಹೋ ನೈಧೃತೋ ನಾಮ್ನಾಮಹಾರಿ ಗಣ ಸೂದನಃ ॥೪೨॥

ದಶಾರ್ಹಸ್ಯ ಸುತೋ ವ್ಯಾಪ್ತೋ ಜೀಮೂತ ಇತಿ ತ ತ್ಸುತಃ ।
ಜೀಮೂತ ಪುತ್ರೋ ವಿಕೃತಿ ಸ್ತಸ್ಯ ಭೀಮರಥಃ ಸುತಃ ॥೪೩॥

ಅಥ ಭೀಮರಥ ಸ್ಯಾಸೀ ತ್ಪುತ್ರೋ ನವರಥಃ ಕಿಲ ।
ದಾನ ಧರ್ಮ ರತೋ ನಿತ್ಯಂ ಸತ್ಯಶೀಲ ಪರಾಯಣಃ ॥೪೪॥

ತಸ್ಯ ಚಾಸೀ ದ್ದೃಢರಥಃ ಶಕುನಿಸ್ತಸ್ಯ ಚಾತ್ಮಜಃ
ತಸ್ಮಾತ್ಕರಂಭಃ ಸಂಭೂತೋ ದೇವರಾತೋಽಭವತ್ತತಃ ॥೪೫॥

ದೇವರಾತಾ ದಭೂ ದ್ರಾಜಾ ದೇವರಾತಿ ರ್ಮಹಾಯಶಾಃ ।
ದೇವಗರ್ಭೋ ಪಮೋ ಜಜ್ಞೇ, ಯೋ ದೇವಕ್ಷತ್ರ ನಾಮಕಃ ॥೪೬॥

ದೇವಕ್ಷತ್ರ ಸುತಃ ಶ್ರೀಮಾ ಮ್ಮಧುರ್ನಾಮ ಮಹಾಯಶಾಃ ।
ಮಧೂನಾಂ ವಂಶ ಕೃದ್ರಾಜಾ ಮಧೋಸ್ತು ಕುರುವಂಶಕಃ ॥೪೭॥

---

ನೆಂಬ ದೊಡ್ಡ ಶತ್ರುಗಳನ್ನೂ ಜಯಿಸಬಲ್ಲ ಮಗನಾದನು. ದಶಾರ್ಹನಿಗೆ ಜೀಮೂತ, ಎಂಬ ಪ್ರಭಾವಶಾಲಿಯಾದ ಮಗನೂ, ಜೀಮೂತನಿಗೆ ವಿಕೃತಿಯೂ, ವಿಕೃತಿಗೆ ಭೀಮರಥನೂ ಮಕ್ಕಳಾದರು.

೪೪–೪೬. ಭೀಮರಥನಿಗೆ ನವರಥನೆಂಬ ಮಗನಾದನು. ಇವನು ದಾನಧರ್ಮ ಮಾಡುವುದರಲ್ಲಿ ಆಸಕ್ತನಾಗಿಯೂ, ಸದಾ ಸತ್ಯವನ್ನೇ ನುಡಿಯುತ್ತಾ ಗುಣಾಢ್ಯನಾಗಿದ್ದನು. ಇವನಿಗೆ ದೃಢರಥ ನೆಂಬ ಮಗನಾದನು. ಇವನ ಮಗ ಶಕುನಿಯೂ ಶಕುನಿಯಿಂದ ಕರಂಭನೂ ಹುಟ್ಟಿದರು. ಕರಂಭನಿಂದ ದೇವರಾತನೂ, ದೇವರಾತನಿಂದ ಬಹಳ ಕೀರ್ತಿವಂತನಾದ ದೇವರಾತಿಯೂ, ಹುಟ್ಟಿದರು. ಇವನು ದೇವಕ್ಷತ್ರ ಎಂದು ಬೇರೆ ಹೆಸರನ್ನು ಪಡೆದು ದೇವತೆಗಳಿಗೆ ಸಮನಾಗಿದ್ದನು.

೪೭–೪೯. ದೇವಕ್ಷತ್ರನಿಗೆ ಶ್ರೀಮಂತನಾದ ಮಧು ಎಂಬ ಮಗನಿದ್ದನು. ಮಧುವು ವಂಶೋದ್ಧಾರಕನಾಗಿದ್ದನು. ಮಧುವಿಗೆ, ಕುರುವಂಶ ಎಂಬ ಮಗನಾದನು. ಕುರುವಂಶನಿಗೆ ಅನುವೂ, ಅನುವಿಗೆ

ಕುರುವಂಶಾ ದನುಸ್ತಸ್ಮಾತ್ಪುರುತ್ವಾನ್ ಪುರುಷೋತ್ತಮಃ ।
ಅಂಶುರ್ಜಜ್ಞೇ ಚ ವೈದರ್ಭ್ಯಾಂ ಭದ್ರವತ್ಯಾಂ ಪುರುತ್ವತಃ ॥೪೮॥
ಐಕ್ಷ್ವಾಕೀಷು ವಹಜ್ಯಾಂಶುಃ ಸತ್ವಸ್ತಸ್ಮಾದ ಜಾಯತ ।
ಸತ್ವಾತ್ಸರ್ವ ಗುಣೋಪೇತಃ ಸಾತ್ವತಃ ಕುಲವರ್ಧನಃ ॥೪೯॥
ಜ್ಯಾಮಘಸ್ಯ ಮಯಾ ಪ್ರೋಕ್ತಾ ಸೃಷ್ಟಿರ್ವೈ ವಿಸ್ತರೇಣ ವಃ ।
ಯಃ ಪಠೇತ್ ಶೃಣುಯಾ ದ್ವಾಪಿ ನಿಸೃಷ್ಟಿಂ ಜ್ಯಾಮಘಸ್ಯ ತು ॥
ಪ್ರಜೀಪತ್ಯೇತಿ ವೈ ಸ್ವರ್ಗಂ ರಾಜ್ಯಂ ಸೌಖ್ಯಂ ಚ ವಿಂದತಿ ॥೫೦॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ವಂಶ ವಿವರಣಂ ನಾಮ
ಅಷ್ಟ ಷಷ್ಟಿತಮೋಽಧ್ಯಾಯಃ

---

ಶ್ರೇಷ್ಠನಾದ ಪುರುತ್ವಂತನೂ, ಪುರುತ್ವಂತನಿಗೆ ವಿದರ್ಭದೇಶದಲ್ಲಿ ಹುಟ್ಟಿದ ಭದ್ರವತೀ ಎಂಬುವಳಲ್ಲಿ ಅಂಶುವೂ, ಹುಟ್ಟಿದರು. ಅಂಶುವು ಇಕ್ಷ್ವಾಕು ವಂಶೋದ್ಧಾರಕನಾಗಿದ್ದನು. ಅಂಶುವಿನಿಂದ ಸತ್ವನು ಹುಟ್ಟಿದನು. ಸತ್ವನಿಂದ ಎಲ್ಲಾ ಗುಣಗಳಿಂದ ಕೂಡಿದ ಸಾತ್ವತನೂ ಹುಟ್ಟಿದನು. ಇವನು ವಂಶೋದ್ಧಾರಕನಾಗಿದ್ದನು.

೫೦–೫೧. ಓ ಋಷಿಗಳೇ, ಜ್ಯಾಮಘನ ವಂಶವನ್ನು ವಿಸ್ತಾರವಾಗಿ ಹೇಳಿದ್ದೇನೆ. ಜ್ಯಾಮಘನ ವಂಶದ ವಿಷಯುವನ್ನು ಯಾರು ಓದುವರೋ ಅಥವಾ ಕೇಳುವರೋ ಅವರು ಲೋಕದಲ್ಲಿ ಚೆನ್ನಾಗಿ ಬಾಳುತ್ತಾರೆ. ಅವರು ಸ್ವರ್ಗ, ರಾಜ್ಯ, ಸೌಖ್ಯ, ಎಲ್ಲವನ್ನೂ ಹೊಂದುತ್ತಾರೆ.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ವಂಶಗಳ ವಿವರಣೆ ಎಂಬ
ಅರವತ್ತೆಂಟನೆಯ ಅಧ್ಯಾಯವು ಮುಗಿದುದು.

ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
ಏಕೋನ ಸಪ್ತತಿತಮೋಽಧ್ಯಾಯಃ

॥ ಸೂತ ಉವಾಚ ॥

ಸಾತ್ವತಃ ತಸ್ಯ ಸಂಪನ್ನಃ ಪ್ರಜಜ್ಞೇ ಚತುರಃ ಸುತಾನ್ ।
ಭಜನಂ ಭ್ರಾಜಮಾನಂಚ ದಿವ್ಯಂ ದೇವಾ ವೃಧಂ ನೃಪಂ ॥ ೧ ॥
ಅಂಧಕಂಚ ಮಹಾಭಾಗಂ ವೃಷ್ಣಿಂ ಚ ಯದು ನಂದನಂ ।
ತೇಷಾಂ ನಿಸರ್ಗಾಂ ಶ್ಚತುರಃ ಶೃಣುಧ್ವಂ ವಿಸ್ತರೇಣ ವೈ ॥ ೨ ॥
ಸೃಂಜಯ್ಯಾಂ ಭಜನಾ ಚ್ಚೈವ ಬ್ರಾಜಮಾನಾ ದ್ವಿಜಜ್ಞಿರೇ ।
ಅಯುತಾಯುಃ ಶತಾಯುಶ್ಚ ಬಲವಾನ್ ಹರ್ಷ ಕೃತ್ಸ್ಮೃತಃ ॥ ೩ ॥
ತೇಷಾಂ ದೇವಾವೃಧೋ ರಾಜಾ ಚಚಾರ ಪರಮಂ ತಪಃ ।
ಪುತ್ರಃ ಸರ್ವಗುಣೋಪೇತೋ ಮಮ ಭೂಯಾದಿತಿ ಸ್ಮರನ್ ॥ ೪ ॥
ತಸ್ಯ ಬಭ್ರೂರಿತಿ ಖ್ಯಾತಃ ಪುಣ್ಯ ಶ್ಲೋಕೋ ನೃಪೋತ್ತಮಃ ।

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಆರವತ್ತೊಂಭತ್ತನೆಯ ಅಧ್ಯಾಯವು

೧-೩. ಸೂತನು ಹೇಳಿದನು: ಸತ್ಯವಂತನಾದ ಸಾತ್ವತನು ನಾಲ್ಕುಜನ ಮಕ್ಕಳನ್ನು ಪಡೆದನು. ಪ್ರಕಾಶಮಾನನಾದ, ಭಜನ, ದಿವ್ಯನಾದ ದೇವಾವೃಧ ದೊರೆ, ಮಹಾ ಪುಣ್ಯವಂತನಾದ ಅಂಧಕ, ಯದುವಂಶಶ್ರೇಷ್ಠನಾದ ವೃಷ್ಣಿ, ಇವರೇ ಆ ನಾಲ್ಕು ಮಕ್ಕಳು. ಇವರ ನಾಲ್ಕು ವಂಶಗಳನ್ನೂ ವಿಸ್ತಾರವಾಗಿ ಕೇಳಿರಿ. ಪ್ರಕಾಶಮಾನನಾದ ಭಜನ, ಎಂಬುವನಿಂದ ಸೃಂಜಯ್ಯೆಯಲ್ಲಿ ಅಯುತಾಯುತ, ಶತಾಯು, ಎಂಬ ಬಲಿಷ್ಠರೂ, ಜನಗಳ ಪ್ರೀತಿಗೆ ಪಾತ್ರರೂ ಆದ ಮಕ್ಕಳು ಹುಟ್ಟಿದರು.

೪-೫. ಅವರ ಪೈಕಿ ದೇವಾವೃಧ ದೊರೆಯು ಬಹಳ ತಪಸ್ಸನ್ನು ಮಾಡಿದನು. ಇವನು ತಪಸ್ಸುಮಾಡಲು ಸಕಲ ಗುಣಗಳಿಂದ ಕೂಡಿದ ಮಗನು ತನಗಾಗಲೆಂಬುದೇ ಕಾರಣ. ಅದರ ಪರಿಣಾಮವಾಗಿ ಇವನಿಗೆ

ಅನುನಂಶ ಪುರಾಣಜ್ಞಾ ಗಾಯಂತೀತಿ ಪರಿಶ್ರುತಂ ॥ ೫ ॥
ಗುಣಾ ನ್ದೇವಾ ವೃಧಸ್ಯಾಥ ಕೀರ್ತಯಂತೋ ಮಹಾತ್ಮನಃ ।
ಯಥೈವ ಶ್ರುಣುಮೋ ದೂರಾತ್ ಸಂಪಶ್ಯಾಮ ಸ್ತಥಾಂऽತಿಕಾತ್ ॥
ಬಭ್ರುಃ ಶ್ರೇಷ್ಠೋ ಮನುಷ್ಯಾಣಾಂ ದೇವೈ ರ್ದೇವಾವೃಧಃ ಸಮಃ ।
ಪುರುಷಾಃ ಪಂಚ ಷಷ್ಟಿಸ್ತು ಷಟ್ಸಹಸ್ರಾಣಿ ಚಾಷ್ಟ ಚ ॥ ೭ ॥
ಯೇऽಮೃತತ್ವ ಮನುಪ್ರಾಪ್ತಾ ಬಭ್ರೋ ರ್ದೇವಾ ವೃಧಾ ದಪಿ ।
ಯಜ್ವಾ ದಾನ ಪತಿ ರ್ವೀರೋ ಬ್ರಹ್ಮಣ್ಯಸ್ತು ದೃಢ ವ್ರತಃ ॥ ೮ ॥
ಕೀರ್ತಿ ಮಾಂಶ್ಚ ಮಹಾತೇಜಾಃ ಸಾತ್ವತಾನಾಂ ಮಹಾರಥಃ ।
ತಸ್ಯಾನ್ವವಾಯೇ ಸಂಭೂತಾ ಭೋಜಾ ವೈ ದೇವತೋಪಮಾಃ ॥

---

ಬಭ್ರುವೆಂಬ ರಾಜಶ್ರೇಷ್ಠ ಕುಮಾರನಾದನು. ಈ ಅನುವಿನ ವಂಶದ ಚರಿತ್ರೆಯನ್ನು ಚೆನ್ನಾಗಿ ಅರಿತವಳು ಗಾಯಂತೀ, ಎಂಬುವಳೆಂದು ಪ್ರಸಿದ್ಧವಾಗಿದೆ.

೬–೮. ಮಹಾತ್ಮನಾದ ದೇವಾವೃಧನ ಗುಣಾತಿಶಯಗಳನ್ನು ಕೇಳಿದವರು ಅವನನ್ನು ಪ್ರತ್ಯಕ್ಷವಾಗಿ ಕಂಡು ವಾಸ್ತವವೆಂದು ತಲೆತೂಗುತ್ತಿದ್ದರು. ಮನುಷ್ಯರಿಗೆಲ್ಲರಿಗೂ ಶ್ರೇಷ್ಠನಾದ ಬಭ್ರುವೂ, ದೇವತೆಗಳಿಗೆ ಸಮಾನನಾದ ದೇವಾವೃಧನೂ, ಜನಗಳಿಗೆಲ್ಲರಿಗೂ ಬಹಳ ಪ್ರೀತಿಪಾತ್ರರಾಗಿದ್ದರು. ಬಭ್ರು ಮತ್ತು ದೇವಾವೃಧರ ಅನುಗ್ರಹದಿಂದ ಲಕ್ಷೋಪಲಕ್ಷ ಜನರು ಸ್ವರ್ಗವನ್ನು ಹೊಂದಿದರು. ದಾನದಲ್ಲಿ ಆಸಕ್ತಿಯುಳ್ಳ ವೀರನಾದ ಬ್ರಹ್ಮಣ್ಯನೆಂಬುವನು ವ್ರತಗಳನ್ನು ಮನೋದಾರ್ಢ್ಯದಿಂದ ಮಾಡುತ್ತಿದ್ದನು.

೯–೧೧. ಬ್ರಹ್ಮಣ್ಯನು ಬಹಳ ಕೀರ್ತಿವಂತನಾಗಿಯೂ, ಬಹಳ ತೇಜಸ್ವಿಯಾಗಿಯೂ, ಸಾತ್ವತವಂಶದಲ್ಲಿ ಹುಟ್ಟಿದವರಲ್ಲಿ ಮಹಾರಥ, ಎಂದು ಹೆಸರು ಪಡೆದು ವೀರನಾಗಿಯೂ ಇದ್ದನು. ಇವನ ವಂಶದಲ್ಲಿ ಹುಟ್ಟಿದವರಲ್ಲಿ "ಭೋಜಾ" ಎಂಬುವರು ದೇವತೆಗಳಿಗೆ ಸಮಾನರಾಗಿದ್ದರು.

ಗಾಂಧಾರೀ ಚೈವ ಮಾದ್ರೀ ಚ ವೃಷ್ಣಿ ಭಾರ್ಯೇ ಬಭೂವತುಃ ।
ಗಾಂಧಾರೀ ಜನಯಾ ಮಾಸ ಸುಮಿತ್ರಂ ಮಿತ್ರ ನಂದನಂ ॥೧೦॥

ಮಾದ್ರೀ ಲೇಭೇ ಚ ತಂ ಪುತ್ರಂ ತತಃ ಸಾ ದೇವ ಮೀಢುಷಂ ।
ಅನಮಿತ್ರಂ ಶಿನಿಂ ಚೈವ ತಾವುಭೌ ಪುರುಷೋತ್ತಮೌ ॥೧೧॥

ಅನಮಿತ್ರ ಸುತೋ ನಿಘ್ನೋ ನಿಘ್ನಸ್ಯ ದ್ವೌ ಬಭೂವತುಃ ।
ಪ್ರಸೇನಶ್ಚ ಮಹಾಭಾಗಃ ಸತ್ರಾಜಿಚ್ಚ ಸುತಾ ವುಭೌ ॥೧೨॥

ತಸ್ಯ ಸತ್ರಾಜಿತಃ ಸೂರ್ಯಃ ಸಖಾ ಪ್ರಾಣ ಸಮೋಽಭವತ್ ।
ಸ್ಯಮಂತಕೋ ನಾಮ ಮಣಿ ರ್ದತ್ತ ಸ್ತಸ್ಮೈ ವಿವಸ್ವತಾ ॥೧೩॥

ಪೃಥಿವ್ಯಾಂ ಸರ್ವ ರತ್ನಾನಾಂ ಅಸೌ ರಾಜಾಽಭವನ್ಮಣಿಃ ।
ಕದಾಚಿ ನ್ಮೃಗಯಾಂ ಯಾತಃ ಪ್ರಸೇನೇನ ಸಹೈವ ಸಃ ॥೧೪॥

---

ವೃಷ್ಣಿಯ ಪತ್ನಿಯರಾದ, ಗಾಂಧಾರೀ, ಮಾದ್ರೀ, ಎಂಬುವರು ಇವರ ವಂಶದಲ್ಲೇ ಹುಟ್ಟಿದವರು. ಸುಮಿತ್ರಾ ಎಂಬುವನನ್ನು ಗಾಂಧಾರಿಯು ಹೆತ್ತಳು. ಮಾದ್ರಿಯು ಮಿತ್ರನಂದನನನ್ನು ಪಡೆದಳು. ಅಲ್ಲದೇ ದೇವ ಮೀಢುಷ, ಎಂಬ ಮಗನನ್ನೂ, ಅನಮಿತ್ರ, ಶಿನಿ, ಎಂಬ ಮಕ್ಕಳನ್ನೂ ಪಡೆದಳು. ಅನಮಿತ್ರ, ಮತ್ತು ಶಿನಿ, ಎಂಬುವರು ಪುರುಷ ಶ್ರೇಷ್ಠ ರಾಗಿದ್ದರು.

೧೨–೧೪. ನಿಘ್ನನು ಅನಮಿತ್ರನ ಮಗನು. ನಿಘ್ನನಿಗೆ ಪುಣ್ಯಶಾಲಿಯಾದ ಪ್ರಸೇನ, ಸತ್ರಾಜಿತ್, ಎಂಬಿಬ್ಬರು ಮಕ್ಕಳಾದರು. ಸತ್ರಾಜಿತನಿಗೆ ಸೂರ್ಯನು ಪ್ರಾಣಕ್ಕೆ ಸಮಾನನಾದ ಸ್ನೇಹಿತನಾಗಿದ್ದನು. ಸೂರ್ಯನಿಂದ ಸ್ಯಮಂತಕ, ಎಂಬ ಮಣಿಯು ಅವನಿಗೆ ಕೊಡಲ್ಪಟ್ಟಿತು. ಭೂಮಿಯಲ್ಲಿ ಸ್ಯಮಂತಕಮಣಿಯು ಎಲ್ಲಾ ಮಣಿಗಳಿಗಿಂತಲೂ ಸರ್ವ ಶ್ರೇಷ್ಠವಾಗಿತ್ತು. ಒಂದುಸಲ ಪ್ರಸೇನಜಿತ್ ಸ್ಯಮಂತಕ ಮಣಿಯನ್ನು ತೆಗೆದುಕೊಂಡು ಬೇಟೆಗಾಗಿ ಹೊರಟನು.

ವಧಂ ಪ್ರಾಪ್ತೋಽಸಹಾಯಶ್ಚ ಸಿಂಹಾದೇವ ಸುದಾರುಣಾತ್ ।
ಅಥ ಪುತ್ರಃ ಶಿನೇರ್ಜಜ್ಞೇ ಕನಿಷ್ಠಾದ್ವೃಷ್ಣಿ ನಂದನಾತ್ ॥೧೩॥
ಸತ್ಯವಾಕ್ ಸತ್ಯ ಸಂಪನ್ನಃ ಸತ್ಯಕ ಸ್ತಸ್ಯ ಚಾತ್ಮಜಃ ।
ಸಾತ್ಯಕಿ ರ್ಯುಯುಧಾನಸ್ತು ಶಿನೇರ್ನಪ್ತಾ ಪ್ರತಾಪವಾನ್ ॥೧೬॥
ಅಸಂಗೋ ಯುಯುಧಾನಸ್ಯ ಕುಣಿಸ್ತಸ್ಯ ಸುತೋಽಭವತ್ ।
ಕುಣೇ ರ್ಯುಗಂಧರಃ ಪುತ್ರಃ ಶೈನೇಯಾ ಇತಿ ಕೀರ್ತಿತಾಃ ॥೧೭॥
ಮಾದ್ರ್ಯಾಃ ಸುತಸ್ಯ ಸಂಜಜ್ಞೇ ಸುತೋ ವಾರ್ಷ್ಣಿ ರ್ಯುಧಾಜಿತಃ ।
ಶ್ವಫಲ್ಕ ಇತಿ ವಿಖ್ಯಾತ ಸ್ತ್ರೈಲೋಕ್ಯ ಹಿತ ಕಾರಕಃ ॥೧೮॥
ಶ್ವಫಲ್ಕ ಶ್ಚ ಮಹಾರಾಜೋ ಧರ್ಮಾತ್ಮಾ ಯತ್ರ ವರ್ತತೇ ।
ನಾಸ್ತಿ ವ್ಯಾಧಿಭಯಂ ತತ್ರ ನಾವೃಷ್ಟಿ ಭಯಮಪ್ಯುತ ॥೧೯॥

---

೧೫–೧೭. ಬೇಟೆಯಾಡುವ ಕಾಲದಲ್ಲಿ ಪ್ರಸೇನ ಜಿತ್ತನು, ಸಹಾಯಕರು ಯಾರೂ ಇಲ್ಲದೆ ಬಹಳ ಭಯಂಕರವಾದ ಸಿಂಹದ ಬಾಯಿಗೆ ತುತ್ತಾದನು. ಅನಂತರ ವೃಷ್ಣಿಕುಮಾರರಲ್ಲಿ ಕಿರಿಯವನಾದ ಶಿನಿಯಿಂದ ಸತ್ಯಕ, ಎಂಬ ಸತ್ಯವಂತನೂ, ಸತ್ಯವಾಗಿ ಕೆಲಸ ಮಾಡುವವನೂ, ಆದ ಪುತ್ರನು ಜನಿಸಿದನು. ಸತ್ಯಕನ ಮಗನು ಸಾತ್ಯಕಿಯು. ಶೂರನಾದ ಯುಯುಧಾನನು ಶಿನಿಯ ಮೊಮ್ಮಗನು. ಯುಯುಧಾನನಿಗೆ 'ಕುಣಿ' ಎಂಬ ಮಗನಾದನು. ಕುಣಿಗೆ ಯುಗಂಧರನು ಮಗನು. ಇವರೆಲ್ಲರೂ ಶಿನಿಯ ವಂಶದವರೆಂದು ಹೆಸರು ಬಂದಿದೆ.

೧೮–೧೯. ಮಾದ್ರಿಯ ಮಗ ದೇವಮೀಢುಷನ, ಮಗನಾದ ಯುಧಾಜಿತ್ ಎಂಬುವನು ವೃಷ್ಣಿವಂಶದಲ್ಲಿ ಹುಟ್ಟಿದವನೂ, ಶ್ವಫಲ್ಕ, ಎಂದು ಹೆಸರು ಪಡೆದವನೂ, ಮೂರು ಲೋಕಕ್ಕೂ ಸೌಖ್ಯವನ್ನುಂಟು ಮಾಡುವವನೂ, ಆಗಿದ್ದನು. ಇವನ ರಾಜ್ಯದಲ್ಲಿ ರೋಗದ ಭಯವಾಗಲೀ, ಮಳೆಯಿಲ್ಲದೇ ಬರದ ಭೀತಿಯಾಗಲೀ ಇರಲಿಲ್ಲ.

ಶ್ವಫಲ್ಕಃ ಕಾಶಿ ರಾಜಸ್ಯ ಸುತಾಂ ಭಾರ್ಯಾ ಮವಾಪ ಸಃ ।
ಗಾಂದಿನೀಂ ನಾಮ ಕಾಶ್ಯೋ ಹಿ ದದೌ ತಸ್ಮೈ ಸ್ವ ಕನ್ಯಕಾಂ ॥೨೦॥
ಸಾ ಮಾತು ರುದರ ಸ್ಥಾ ವೈ ಬಹೂನ್ವರ್ಷ ಗಣಾ ನ್ಕಿಲ ।
ವಸಂತೀ ನ ಚ ಸಂಜಜ್ಞೇ ಗರ್ಭಸ್ಥಾ ತಾಂ ಪಿತಾಽಬ್ರವೀತ್ ॥೨೧॥
ಜಾಯಸ್ವ ಶೀಘ್ರಂ ಭದ್ರಂ ತೇ ಕಿಮರ್ಥಂ ಚಾಭಿತಿಷ್ಠಸಿ ।
ಪ್ರೋವಾಚ ಚೈನಂ ಗರ್ಭಸ್ಥಾ ಸಾ ಕನ್ಯಾ ಗಾಂದಿನೀ ತದಾ ॥೨೨॥
ವರ್ಷತ್ರಯಂ ಪ್ರತಿದಿನಂ ಗಾಮೇಕಾಂ ಬ್ರಾಹ್ಮಣಾಯ ತು ।
ಯದಿ ದದ್ಯಾ ಸ್ತತಃ ಕುಕ್ಷೇ ರ್ನಿಗಮಿಷ್ಯಾಮ್ಯಹಂ ಪಿತಃ ॥೨೩॥
ತಥೇತ್ಯುವಾಚ ತಸ್ಯಾ ವೈ ಪಿತಾ ಕಾಮಮಪೂರಯತ್ ।
ದಾತಾ ಶೂರಶ್ಚ ಯಜ್ವಾ ಚ ಶ್ರುತವಾನತಿಥಿ ಪ್ರಿಯಃ ॥೨೪॥

---

೨೦–೨೨. ಶ್ವಫಲ್ಕನಿಗೆ ಕಾಶಿರಾಜನು ತನ್ನ ಮಗಳಾದ ಗಾಂದಿನೀ, ಎಂಬುವಳನ್ನು ಕೊಟ್ಟನು. ಕಾಶಿರಾಜನ ಪತ್ನಿಯು ಗರ್ಭಧರಿಸಿ ಬಹಳ ವರ್ಷಗಳಾಗಿದ್ದರೂ, ಆ ಗಾಂದಿನಿಯು, ಜನಿಸಲೇ ಇಲ್ಲ. ಆಗ ಕಾಶಿ ರಾಜನು ಪತ್ನಿಯ ಗರ್ಭವನ್ನು ಕುರಿತು, ಜಾಗ್ರತೆಯಾಗಿ ಜನಿಸು, ಏಕೆ ಇಷ್ಟು ತಡಮಾಡುತ್ತಿದ್ದೀಯೆ? ಎಂದನು. ಗರ್ಭದಲ್ಲಿರುವಾಗಲೇ ಗಾಂದಿನೀ ಎಂಬ ಹೆಣ್ಣು ಮಗಳು ತಂದೆಯನ್ನು ಕುರಿತು ಹೀಗೆ ಹೇಳಿದಳು.

೨೩. ಎಲೈ ತಂದೆಯೇ, ಪ್ರತಿದಿನವೂ ತಪ್ಪದೇ ಮೂರು ವರ್ಷ ಗಳ ಕಾಲ ನೀನು ಬ್ರಾಹ್ಮಣನಿಗೆ ಒಂದು ಹಸುವನ್ನು ದಾನ ಮಾಡುತ್ತಾ ಬಂದರೆ ನಾನು ನಮ್ಮ ತಾಯಿಯ ಉದರದಿಂದ ಹೊರಗೆ ಬರುವೆನು.

೨೪–೨೬. ಹಾಗೆಯೇ ಆಗಲೆಂದು ತಂದೆಯು ಅವಳ ಇಷ್ಟಾರ್ಥ ವನ್ನು ನೆರವೇರಿಸಿದನು. ಶ್ವಫಲ್ಕನಿಗೆ ದಾತೃವೂ, ಶೂರನೂ, ಯಾಗ ಮಾಡುವವನೂ, ಶಾಸ್ತ್ರಜ್ಞನೂ, ಅತಿಥಿಗಳಿಗೆ ಬೇಕಾದವನೂ, ಹೆಚ್ಚಾಗಿ

ತಸ್ಯಾಃ ಪುತ್ರಃ ಸ್ಮೃತೋಽಕ್ರೂರಃ ಶ್ವಫಲ್ಕಾ ದ್ಭೂರಿ ದಕ್ಷಿಣಃ ।
ರತ್ನಾ ಕನ್ಯಾ ಚ ಶೈವಸ್ಯ ಹ್ಯಕ್ರೂರ ಸ್ತಾ ಮವಾಪ್ತವಾನ್ ॥೨೫॥

ಅಸ್ಯಾ ಮುತ್ಪಾದಯಾ ಮಾಸ ತನಯಾಂಸ್ತಾ ನ್ನಿಬೋಧತ ।
ಉಪಮನ್ಯು ಸ್ತಥಾ ಮಾಗುರ್ವೃತ ಸ್ತು ಜನಮೇಜಯಃ ॥೨೬॥

ಗಿರಿರಕ್ಷ ಸ್ತಥೋ ಪೇಕ್ಷಃ ಶತ್ರುಘ್ನೋ ಯೋಽರಿಮರ್ದನಃ ।
ಧರ್ಮಭೃ ದ್ದೃಷ್ಟ ಧರ್ಮಾ ಚ ಗೋಧನೋಽಥ ವರಸ್ತಥಾ ॥೨೭॥

ಆವಾಹ ಪ್ರತಿವಾಹೌ ಚ ಸುಧಾರಾ ಚ ವರಾಂಗನಾ ।
ಅಕ್ರೂರಸ್ಯೋ ಗ್ರಸೇನ್ಯಾಂ ತು ಪುತ್ರೌ ದ್ವೌ ಕುಲ ನಂದನೌ ॥೨೮॥

ದೇವವಾ ನುಪದೇವಶ್ಚ ಜಜ್ಞಾತೇ ದೇವ ಸಂಮತೌ ।
ಸುಮಿತ್ರಸ್ಯ ಸುತೋ ಜಜ್ಞೇ ಚಿತ್ರಕಶ್ಚ ಮಹಾಯಶಾಃ ॥೨೯॥

ಚಿತ್ರಕಸ್ಯಾಭವ ನ್ಪುತ್ರಾ ವಿಪೃಥುಃ ಪೃಥು ರೇವ ಚ ।
ಅಶ್ವಗ್ರೀವಃ ಸುಬಾಹುಶ್ಚ ಸುಧಾ ಸೂಕ ಗವೇಕ್ಷಣೌ ॥೩೦॥

---

ಬ್ರಾಹ್ಮಣರಿಗೆ ದಕ್ಷಿಣೆಗಳನ್ನು ಕೊಡುವ ಅಕ್ರೂರ, ಎಂಬ ಮಗನು ಗಾಂದಿನಿಯಲ್ಲಿ ಹುಟ್ಟಿದನು. ಅಕ್ರೂರನು, ಶೈವನ ರತ್ನಾ ಎಂಬ ಕನ್ಯೆಯನ್ನು ಮದುವೆಯಾದನು. ಇವನು ರತ್ನಳಲ್ಲಿ ಉಪಮನ್ಯು, ಮಾಗುವೃತ, ಜನಮೇಜಯ, ಎಂಬ ಮಕ್ಕಳನ್ನು ಪಡೆದನು.

೨೭–೨೯. ಅಲ್ಲದೆ ಅಕ್ರೂರನಿಗೆ ಗಿರಿರಕ್ಷ, ಉಪೇಕ್ಷ, ಶತ್ರುಘ್ನ, ಧರ್ಮಭೃತ್, ದೃಷ್ಟಧರ್ಮ, ಗೋಧನ, ಅವರ, ಆವಾಹ, ಪ್ರತಿವಾಹ, ದೇವವಾನ್, ಉಪದೇವ, ಎಂಬ ದೇವತೆಗಳಿಗೆ ಸಮಾನರಾದ ಮಕ್ಕಳೂ, ಸುದಾರಾ, ಎಂಬ ಶ್ರೇಷ್ಠಳಾದ ಮಗಳೂ ಹುಟ್ಟಿದರು. ಚಿತ್ರಕನು ಸುಮಿತ್ರನೆಂಬುವನ ಮಗನು.

೩೦–೩೨. ಚಿತ್ರಕನಿಗೆ ವಿಪೃಥು, ಪೃಥು, ಅಶ್ವಗ್ರೀವ, ಸುಬಾಹು, ಸುಧಾಸೂಕ, ಗವೇಕ್ಷಣ, ಅರಿಷ್ಟನೇಮಿ, ಅಶ್ವ, ಧರ್ಮ, ಧರ್ಮಭೃತ್,

ಅರಿಷ್ಟನೇಮಿ ರಶ್ವಶ್ಚ ಧರ್ಮೋ ಧರ್ಮ ಭೃದೇವಚ ।
ಸು ಭೂಮಿ ರ್ಬಹು ಭೂಮಿಶ್ಚ ಶ್ರವಿಷ್ಠಾ ಶ್ರವಣೇ ಸ್ತ್ರಿಯೌ ॥೩೧॥

ಅಂಥಕಾ ತ್ಕಾಶ್ಯ ದುಹಿತಾ ಲೇಭೇ ಚ ಚತುರಃ ಸುತಾನ್ ।
ಕುಕುರಂ ಭಜಮಾನಂ ಚ ಶುಚಿಂ ಕಂಬಲಬರ್ಹಿಷಂ ॥೩೨॥

ಕುಕುರಸ್ಯ ಸುತೋ ವೃಷ್ಣಿ ರ್ವೃಷ್ಣೇಃ ಶೂರಸ್ತತೋಽಭವತ್ ।
ಕಪೋತ ರೋಮಾಽತಿಬಲ ಸ್ತಸ್ಯ ಪುತ್ರೋ ವಿಲೋಮಕಃ ॥೩೩॥

ತಸ್ಯಾಸೀ ತ್ತುಂಬುರು ಸಖೋ ವಿದ್ವಾನ್ಪುತ್ರೋ ನಲಃ ಕಿಲ ।
ಖ್ಯಾಯತೇ ಸ ಸುನಾಮ್ನಾತು ಚಂದನಾ ನಕ ದುಂದುಭಿಃ ॥೩೪॥

ತಸ್ಮಾದಪ್ಯಭಿಜಿತ್ಪುತ್ರ ಉತ್ಪನ್ನೋಽಸ್ಯ ಪುನರ್ವಸುಃ ।
ಅಶ್ವಮೇಧಂ ಸ ಪುತ್ರಾರ್ಥ ಮಾಜಹಾರ ನರೋತ್ತಮಃ ॥೩೫॥

---

ಸುಭೂಮಿ, ಬಹುಭೂಮಿ, ಎಂಬ ಗಂಡು ಮಕ್ಕಳೂ, ಶ್ರವಿಷ್ಠಾ, ಶ್ರವಣಾ, ಎಂಬ ಹೆಣ್ಣುಮಕ್ಕಳೂ, ಆದರು. ಕಾಶೀರಾಜನ ಪುತ್ರಿಯು ಅಂಧಕನಿಂದ ಕುಕುರ, ಭಜಮಾನ, ಶುಚಿ, ಕಂಬಲಬರ್ಹಿಸ್, ಎಂಬ ನಾಲ್ಕು ಜನ ಮಕ್ಕಳನ್ನು ಪಡೆದಳು.

೩೩–೩೫. ಕುಕುರನ ಮಗನು ವೃಷ್ಣಿಯು. ವೃಷ್ಣಿಯ ಮಗನು ಶೂರನು. ಶೂರನ ಮಗನು ಬಹಳ ಬಲಿಷ್ಠನಾದ ಕಪೋತ ರೋಮ. ಅವನ ಮಗನು ವಿಲೋಮಕ, ವಿಲೋಮಕನ ಮಗನು ವಿದ್ವಾಂಸನೂ, ತುಂಬುರು, ಎಂಬ ಗಂಧರ್ವನಿಗೆ ಸ್ನೇಹಿತನೂ ಆದ ನಲ ಎಂಬುವನು. ಇವನು ಚಂದನ, ಆನಕ ದುಂದುಭಿ, ಎಂಬ ಹೆಸರುಗಳಿಂದಲೂ, ಪ್ರಸಿದ್ಧನಾಗಿದ್ದನು. ನಲನಿಂದ ಅಭಿಜಿತ್ ಎಂಬುವನು ಹುಟ್ಟಿದನು. ಅಭಿಜಿತಿನಿಂದ ಪುನರ್ವಸು, ಎಂಬುವನು ಹುಟ್ಟಿದನು. ಪುನರ್ವಸು ದೊರೆಯು ಮಕ್ಕಳಾಗಲೆಂಬ ಅಭಿಲಾಷೆಯಿಂದ ಅಶ್ವಮೇಧ ಯಾಗವನ್ನು ಮಾಡಿದನು.

ತಸ್ಯ ಮಧ್ಯೇ ತಿರಾತ್ರಸ್ಯ ಸದೋ ಮಧ್ಯಾ ತ್ಸಮುತ್ಥಿತಃ ।
ತತಸ್ತು ವಿದ್ವಾನ್ಸರ್ವಜ್ಞೋ ದಾತಾ ಯಜ್ವಾ ಪುನರ್ವಸುಃ ॥೩೬॥

ತಸ್ಯಾಪಿ ಪುತ್ರ ಮಿಥುನಂ ಬಭೂವಾ ಭಿಜಿತಃ ಕಿಲ ।
ಆಹುಕಶ್ಚಾಹುಕೀ ಚೈವ ಖ್ಯಾತೌ ಕೀರ್ತಿಮತಾಂ ವರೌ ॥೩೭॥

ಆಹುಕಾ ತ್ಕಾಶ್ಯ ದುಹಿತು ದ್ವೌರ್ವ ಪುತೌ ಸಂಬಭೂವತುಃ ।
ದೇವಕ ಶ್ಚೋಗ್ರ ಸೇನಶ್ಚ ದೇವಗರ್ಭ ಸಮಾವುಭೌ ॥೩೮॥

ದೇವಕಸ್ಯ ಸುತಾ ರಾಜ್ಞೋ ಜಜ್ಞಿರೇ ತ್ರಿದಶೋಪಮಾಃ ।
ದೇವವಾನುಪ ದೇವಶ್ಚ ಸುದೇವೋ ದೇವ ರಕ್ಷಿತಃ ॥೩೯॥

ತೇಷಾಂ ಸ್ವಸಾರಃ ಸಪ್ತಾಸನ್ ವಸುದೇವಾಯ ತಾ ದದೌ ।
ವೃಷದೇವೋಪ ದೇವಾ ಚ ತಥಾऽನ್ಯಾ ದೇವ ರಕ್ಷಿತಾ ॥೪೦॥

---

೩೬-೩೭. ಅಶ್ವಮೇಧ ಯಾಗಮಾಡುವಾಗ ಅತಿರಾತ್ರದ ಯಾಗ ಶಾಲೆಯ ಸಭಾ ಮಧ್ಯದಿಂದ ಆವಿರ್ಭವಿಸಿದ ಅಭಿಜಿತ್ತಿನ ಮಗನಾದ ಪುನರ್ವಸುವು ಆಹುಕ, ಆಹುಕೀ, ಎಂಬ ಇಬ್ಬರು ಕೀರ್ತಿಶಾಲಿಗಳಾದ ಮಕ್ಕಳನ್ನು ಪಡೆದನು.

೩೮-೪೦. ಆಹುಕನಿಂದ ಕಾಶಿರಾಜನ ಪುತ್ರಿಯಲ್ಲಿ ದೇವತೆಗಳಿಗೆ ಸಮಾನರಾದ ದೇವಕ ಮತ್ತು ಉಗ್ರಸೇನ, ಎಂಬಿಬ್ಬರು ಮಕ್ಕಳು ಹುಟ್ಟಿದರು. ದೇವಕನಿಗೆ ದೇವತೆಗಳಿಗೆ ಸಮನಾದ, ದೇವವಾನ್, ಉಪದೇವ, ಸುದೇವ, ದೇವರಕ್ಷಿತ, ಎಂಬ ಮಕ್ಕಳು ಹುಟ್ಟಿದರು. ಅವರಿಗೆ ಏಳುಮಂದಿ ತಂಗಿಯರಿದ್ದರು. ಅವರು ಇವರನ್ನು ವಸುದೇವನಿಗೆ ವಿವಾಹಾರ್ಥವಾಗಿ ಪ್ರದಾನಮಾಡಿದರು. ವೃಷದೇವಾ, ಉಪದೇವಾ, ದೇವರಕ್ಷಿತಾ, ಎಂಬ ಮೂವರು ಮಂದಿ ಸ್ತ್ರೀಯರು ಆ ಏಳು ಜನಗಳಲ್ಲೇ ಸೇರುತ್ತಾರೆ.

ಶ್ರೀ ದೇವಾ ಶಾಂತಿ ದೇವಾ ಚ ಸಹದೇವಾ ತಥಾ ಪರಾ ।
ದೇವಕೀ ಚಾಪಿ ತಾಸಾಂ ಚ ವರಿಷ್ಠಾಽಭೂ ತ್ಸುಮಧ್ಯಮಾ ॥೪೧॥
ನವೋಗ್ರಸೇನಸ್ಯ ಸುತಾಸ್ತೇಷಾಂ ಕಂಸಸ್ತು ಪೂರ್ವಜಃ ।
ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಶತ ಶೋಽಥ ಸಹಸ್ರಶಃ ॥೪೨॥
ದೇವಕಸ್ಯ ಸುತಾ ಪತ್ನೀ ವಸುದೇವಸ್ಯ ಧೀಮತಃ ।
ಬಭೂವ ವಂದ್ಯಾ ಪೂಜ್ಯಾ ಚ ದೇವೈರಪಿ ಪತಿವ್ರತಾ ॥೪೩॥
ರೋಹಿಣೀ ಚ ಮಹಾಭಾಗಾ ಪತ್ನೀ ಚಾನಕ ದುಂದುಭೇಃ ।
ಪೌರವೀ ಬಾಹ್ಲಿಕಸುತಾ ಸಂಪೂಜ್ಯಾಽಸೀತ್ಸುರೈ ರಪಿ ॥೪೪॥
ಅಸೂತ ರೋಹಿಣೀ ರಾಮಂ ಬಲಶ್ರೇಷ್ಠಂ ಹಲಾಯುಧಂ ।
ಆಶ್ರಿತಂ ಕಂಸಭೀತ್ಯಾ ಚ ಸ್ವಾತ್ಮಾನಂ ಶಾಂತ ತೇಜಸಂ ॥೪೫॥

---

೪೧–೪೩. ಇವರಲ್ಲದೆ ಶ್ರೀದೇವಾ, ಶಾಂತಿದೇವಾ ಸಹದೇವಾ, ದೇವಕೀ, ಇವರುಗಳೂ ಆ ಕನ್ಯಕೆಯರುಗಳಲ್ಲೇ ಸೇರುತ್ತಾರೆ. ದೇವಕಿಯು ಎಲ್ಲರಿಗೂ ಹಿರಿಯಳೂ ಆಗಿದ್ದಳು. ಕಂಸನು ಇವರಿಗೆಲ್ಲರಿಗೂ ಅಣ್ಣನು. ಹೀಗೆ ಒಂಬತ್ತುಮಂದಿ ಹೆಣ್ಣು ಮಕ್ಕಳು ಉಗ್ರಸೇನನಿಗಿದ್ದರು. ಇವರಲ್ಲಿ ವಸುದೇವನ ಪತ್ನಿಯು ದೇವಕನ ಮಗಳಾದ ದೇವಕಿಯು. ಮೇಲಿನ ಹೆಣ್ಣು ಮಕ್ಕಳಿಗೆ ಸಂತಾನವು ಬೆಳೆಯುತ್ತಾ, ಮಕ್ಕಳೂ ಮತ್ತು ಮೊಮ್ಮಕ್ಕಳು ಸಾವಿರಾರು ಮಂದಿಯಾದರು. ದೇವಕಿಯೊಬ್ಬಳು ಮಾತ್ರ ದೇವತೆಗಳಿಗೂ ಪೂಜಾಯೋಗ್ಯಳೂ, ಮಹಾ ಪತಿವ್ರತೆಯೂ, ಆಗಿದ್ದಳು.

೪೪–೪೫. ಆನಕ ದುಂದುಭಿಯ ಪತ್ನಿಯು ಬಹಳ ಪುಣ್ಯಶಾಲಿಯಾದ ರೋಹಿಣೀ, ಎಂದು ತಿಳಿಯಬೇಕು. ಬಾಹ್ಲೀಕ, ಎಂಬುವನ ಮಗಳಾದ ಪೌರವಿಯು, ದೇವತೆಗಳಿಗೂ ಪೂಜ್ಯಳಾಗಿದ್ದಳು. ಬಹಳ ಬಲಿಷ್ಠನಾದ, ನೇಗಿಲೇ ಆಯುಧವಾಗುಳ್ಳ, ಬಲರಾಮನನ್ನು ರೋಹಿಣಿಯು ಹೆತ್ತಳು. ಕಂಸನ ಭಯದಿಂದ ಈ ಮಗುವು ದೇವಕಿಯ ಗರ್ಭದಲ್ಲಿರುವಾಗಲೇ ರೋಹಿಣಿಯ ಗರ್ಭಕ್ಕೆ ವರ್ಗಾಯಿಸಲ್ಪಟ್ಟಿತು. ಇದಕ್ಕೆ ಮುಂಚೆಯೇ ಅತ್ಯಂತ ಸುಂದರವಾದ ವಸುದೇವನ ಆರು ಶಿಶುಗಳು ಕಂಸನಿಂದ ವಧೆ ಮಾಡಲ್ಪ

ಜಾತೇ ರಾಮೇಽಥ ನಿಹತೇ ಷಡ್ಗರ್ಭೇ ಚಾತಿ ದಕ್ಷಿಣೇ ।
ವಸುದೇವೋ ಹರಿಂ ಧೀಮಾನ್ದೇವಕ್ಯಾ ಮುದಪಾದಯತ್ ॥೪೬॥

ಸ ಏವ ಪರಮಾತ್ಮಾಽಸೌ ದೇವದೇವೋ ಜನಾರ್ದನಃ ।
ಹಲಾಯುಧಶ್ಚ ಭಗವಾನನಂತೋ ರಜತ ಪ್ರಭಃ ॥೪೭॥

ಭೃಗು ಶಾಪಾಚ್ಛಲೇ ನೈವ ಮಾನಯನ್ಮಾನುಷೀಂ ತನುಂ ।
ಬಭೂವ ತಸ್ಯಾಂ ದೇವಕ್ಯಾಂ ವಾಸುದೇವೋ ಜನಾರ್ದನಃ ॥೪೮॥

ಉಮಾ ದೇಹಸಮುದ್ಭೂತಾ ಯೋಗ ನಿದ್ರಾ ಚ ಕೌಶಿಕೀ ।
ನಿಯೋಗಾದ್ದೇವ ದೇವಸ್ಯ ಯಶೋದಾ ತನಯಾ ಹ್ಯಭೂತ್ ॥೪೯॥

ಸಾ ಚೈವ ಪ್ರಕೃತಿಃ ಸಾಕ್ಷಾತ್ಸರ್ವದೇವ ನಮಸ್ಕೃತಾ ।
ಪುರುಷೋ ಭಗವಾ ನ್ಕೃಷ್ಣೋ ಧರ್ಮಮೋಕ್ಷ ಫಲಪ್ರದಃ ॥೫೦॥

---

ಟ್ಟಿದ್ದವು. ಆದ್ದರಿಂದಲೇ ದೇವಕಿಯ ಗರ್ಭದಲ್ಲಿದ್ದ ಬಲರಾಮನು ರೋಹಿಣಿಯ ಮೂಲಕ ಪ್ರಸವಿಸಲ್ಪಟ್ಟನು. ಅನಂತರ ವಸುದೇವನು ದೇವಕಿಯಲ್ಲಿ ಕೃಷ್ಣನನ್ನು ಪಡೆದನು.

೪೭–೪೯. ಕೃಷ್ಣನೇ ಪರಮಾತ್ಮಸ್ವರೂಪಿಯೂ, ಜಗತ್ಪತಿಯೂ, ಆಗಿದ್ದಾನೆಂದು ತಿಳಿಯಬೇಕು. ಬೆಳ್ಳಿಯಂತೆ ಅತಿಶುಭ್ರವಾದ ದೇಹವುಳ್ಳ ಆದಿಶೇಷನೇ, ನೇಗಿಲೇ ಆಯುಧವಾಗಿವುಳ್ಳ ಬಲರಾಮನೆಂದೂ, ತಿಳಿಯತಕ್ಕದ್ದು. ಭೃಗು ಮಹರ್ಷಿಗಳ ಶಾಪದ ನೆಪದಿಂದ, ಭಗವಂತನೇ ಮನುಷ್ಯ ಶರೀರಧಾರಿಯಾಗಿ, ವಸುದೇವ ಮತ್ತು ದೇವಕಿಯರಿಂದ, ಜನಿಸಿದನು. ದೇವದೇವನಾದ ಭಗವಂತನ ಅಪ್ಪಣೆಯಂತೆ ಉಮಾದೇವಿಯ ದೇಹದಿಂದ ಹೊರಟ ಯೋಗನಿದ್ರಾರೂಪಿಣಿಯಾದ ದುರ್ಗಿಯೇ ಯಶೋದೆಯ ಮಗಳಾಗಿ ಹುಟ್ಟಿದಳು.

೫೦–೫೨. ಎಲ್ಲಾ ದೇವತೆಗಳಿಂದಲೂ ನಮಸ್ಕರಿಸಲ್ಪಟ್ಟ ಆ ಶಕ್ತಿಯೇ ಪ್ರಕೃತಿಯು. ಧರ್ಮ ಮೋಕ್ಷಗಳನ್ನು ಕೊಡುವ ಭಗವಂತ

ತಾಂ ಕನ್ಯಾಂ ಜಗೃಹೇ ರಕ್ಷನ್ ಕಂಸಾತ್ ಸ್ವಸ್ಯಾತ್ಮಜಂ ತದಾ ।
ಚತುರ್ಭುಜಂ ವಿಶಾಲಾಕ್ಷಂ ಶ್ರೀವತ್ಸ ಕೃತ ಲಾಂಛನಂ ॥೫೧॥
ಶಂಖ ಚಕ್ರ ಗದಾ ಪದ್ಮಂ ಧಾರಯಂತಂ ಜನಾರ್ದನಂ ।
ಯಶೋದಾಯ್ಯೈ ಪ್ರದತ್ವಾ ತು ವಸುದೇವಶ್ಚ ಬುದ್ಧಿಮಾನ್ ॥೫೨॥
ದತ್ವೈನಂ ನಂದಗೋಪಸ್ಯ ರಕ್ಷತಾಮಿತಿ ಚಾಬ್ರವೀತ್ ।
ರಕ್ಷಕಂ ಜಗತಾಂ ವಿಷ್ಣುಂ ಸ್ವೇಚ್ಛಯಾ ಧೃತ ವಿಗ್ರಹಂ ॥೫೩॥
ಪ್ರಸಾದಾ ಚ್ಚೈವ ದೇವಸ್ಯ ಶಿವಸ್ಯಾ ಮಿತ ತೇಜಸಃ ।
ರಾಮೇಣ ಸಾರ್ಧಂ ತಂ ದತ್ವಾ ವರದಂ ಪರಮೇಶ್ವರಂ ॥೫೪॥
ಭೂಭಾರ ನಿಗ್ರಹಾರ್ಥಂ ಚ ಹ್ಯವತೀರ್ಣಂ ಜಗದ್ಗುರುಂ ।
ಅತೋ ವೈ ಸರ್ವಕಲ್ಯಾಣಂ ಯಾದವಾನಾಂ ಭವಿಷ್ಯತಿ ॥೫೫॥
ಅಯಂ ಸ ಗರ್ಭೋ ದೇವಕ್ಯಾ ಯೋ ನಃ ಕ್ಲೇಶಾ ಹರಿಷ್ಯತಿ ।
ಉಗ್ರ ಸೇನಾತ್ಮಜಾಯಾಽಥ ಕಂಸಾಯಾನಕ ದುಂದುಭಿಃ ॥೫೬॥

---

ನಾದ ಶ್ರೀ ಕೃಷ್ಣನೇ, ಪುರುಷನು. ಆಗ ವಸುದೇವನು ತನ್ನ ಮಗನಾದ ವಿಶಾಲವಾದ ಕಣ್ಣುಳ್ಳ, ಕೌಸ್ತುಭ ಮಣಿಯನ್ನು, ಧರಿಸಿರುವ, ಶಂಖಚಕ್ರ ಗದಾಧಾರಿಯಾದ, ಕೃಷ್ಣನನ್ನು ರಕ್ಷಿಸಲು ಯಶೋದೆಯ ಹತ್ತಿರವಿದ್ದ ಆ ಕನ್ಯೆಯನ್ನು ತೆಗೆದುಕೊಂಡನು.

೫೨–೫೫. ವಸುದೇವನು ಈ ಶಿಶುವನ್ನು ನಂದಗೋಪ ಯಶೋದೆ ಯರಿಗೆ ಗುಟ್ಟಾಗಿ ಕಾಪಾಡಲು ಕೊಟ್ಟನು. ಬಹಳ ತೇಜಸ್ವಿಯೂ, ಶಿವನ ಪ್ರಸಾದದಿಂದ ಲೋಕೋದ್ಧಾರಕ್ಕಾಗಿ ತಾನಾಗಿಯೇ ಅವತರಿಸಿದ ದೇವ ದೇವನೂ ಆದ ಮಹಾವಿಷ್ಣುವನ್ನು, ವಸುದೇವನು ಬಲರಾಮನೊಂದಿಗೆ ನಂದಗೋಪನಿಗೆ ಕೊಟ್ಟನು. ಸ್ವಾಮಿಯಾದ ನಾರಾಯಣನ ಅವತಾರವು ಭೂಮಿಯ ಭಾರವನ್ನು ನಾಶಮಾಡಿ ಧರ್ಮ ಸಂಸ್ಥಾಪನೆ ಮಾಡುವುದಕ್ಕಾ ಗಿಯೇ, ಎಂದು ತಿಳಿಯಬೇಕು. ಭಗವಂತನ ಅವತಾರದಿಂದ ಯಾದವ ಕುಲಕ್ಕೆ ಕ್ಷೇಮವುಂಟಾಗುವುದರಲ್ಲಿ ಸಂದೇಹವಿಲ್ಲ. ಈ ಅಂಶದಲ್ಲಿ ವಿಷ್ಣು ಭಾಗವತಕ್ಕೂ ಈ ಪುರಾಣಕ್ಕೂ ಇರುವ ಭೇದವು ಕಲ್ಪಭೇದವನ್ನು ಅವ ಲಂಬಿಸಿದೆ. ಎಂದು ತಿಳಿಯಬೇಕು.

೫೬–೫೮. ಈ ಭಗವಂತನಾದ ಶಿಶುವು ಶತ್ರುನಾಶಕ್ಕಾಗಿ ಅವತರಿಸಿ ತೆಂದು ತಿಳಿಯಬೇಕು. ಆನಕ ದುಂದುಭಿಯು ಮಾತ್ರ ಉಗ್ರಸೇನನ

ನಿವೇದಯಾಮಾಸ ತದಾ ಜಾತಾಂ ಕನ್ಯಾಂ ಸುಲಕ್ಷಣಾಂ ।
ಅಸ್ಯಾಸ್ತ್ವಷ್ಟಮೋ ಗರ್ಭೋ ದೇವಕ್ಯಾಃ ಕಂಸ ಸುವ್ರತ ॥೫೭॥
ಮೃತ್ಯುರೇವ ನ ಸಂದೇಹ ಇತಿ ವಾಣೀ ಪುರಾತನೀ ।
ತತಸ್ತಾಂ ಹಂತು ಮಾರೇಭೇ ಕಂಸಃ ಸೋಲ್ಲಂಘ್ಯ ಚಾಂಬರಂ॥೫೮॥
ಉವಾಚಾಷ್ಟಭುಜಾ ದೇವೀ ಮೇಘ ಗಂಭೀರಯಾ ಗಿರಾ ।
ರಕ್ಷಸ್ವ ತತ್ಸ್ವಕಂ ದೇಹ ಮಾಯಾತೋ ಮೃತ್ಯು ರೇವ ತೇ ॥೫೯॥
ರಕ್ಷಮಾಣಸ್ಯ ದೇಹಸ್ಯ ಮಾಯಾವೀ ಕಂಸರೂಪಿಣಃ ।
ಕಿಂಕೃತಂ ದುಷ್ಕೃತಂ ಮೂರ್ಖ ಜಾತಃ ಖಲು ತವಾಂತಕೃತ್ ॥
ದೇವಕ್ಯಾಃ ಸ ಭಯಾತ್ಕಂಸೋ ಜಘಾನ್ಯೈ ವಾಷ್ಟಮಂ ಕ್ಷಿತಿ ।
ಸ್ಮರಂತಿ ವಿಹಿತೋ ಮೃತ್ಯು ರ್ದೇವಕ್ಯಾಸ್ತನಯೋಽಷ್ಟಮಃ ॥೬೧॥
ಯಸ್ತತ್ಪ್ರತಿ ಕೃತೌ ಯತ್ನೋ ಭೋಜಸ್ಯಾಸೀ ದ್ವೃಥಾ ಹರೇಃ ।
ಪ್ರಭಾವಾನ್ಮುನಿ ಶಾರ್ದೂಲಾ ಸ್ತಯಾ ಚೈವ ಜಡೀ ಕೃತಃ ॥೬೨॥

---

ಮಗನಾದ ಕಂಸನನ್ನು, ಕುರಿತು ದೇವಕಿಗೆ ಎಂಟನೆಯ ಶಿಶುವಾಯಿ ತೆಂದೂ, ಇನ್ನೊಂದು ವಿಲಕ್ಷಣವಾದ ಹೆಣ್ಣುಮಗುವೆಂದೂ, ತಿಳಿಸಿದನು. ಇದು ನಮಗೆ ಮೃತ್ಯುಪ್ರಾಯವೇ ಆಗಿರಬಹುದೆಂದೂಹಿಸಿ ಕಂಸನು ಆಕಾಶಕ್ಕೆ ಹಾರಿ ಕೊಲ್ಲಲು ಉಪಕ್ರಮಿಸಿದನು.

೫೯–೬೧. ಎಂಟು ತೋಳುಳ್ಳ ದುರ್ಗಿಯು ಮೇಘದಂತೆ ಗಂಭೀರ ವಾದ ಧ್ವನಿಯಿಂದ, ಎಲೈ ಕಂಸನೇ, ನಿನ್ನ ದೇಹವನ್ನೇ ನೀನು ಕಾಪಾಡಿ ಕೊಂಡರೆ ಸಾಕು. ಎಲೈ ಮೂರ್ಖನೇ, ನೀನು ಪಾಪವನ್ನು ಏಕೆ ಮಾಡಿದೆ? ನಿನಗೆ ಮೃತ್ಯುವು ಸಮೀಪಿಸಿದೆ ಎಂದು ಹೇಳಿದಳು. ಮಾಯಾವಿಯಾದ ಕಂಸನು ಇದು ಮತ್ಯುವೇ ಆಗಿದೆಯೇನೋ ಎಂಬ ಭಯದಿಂದ ತನ್ನ ದೇಹ ರಕ್ಷಣೆಗಾಗಿ ಚಿಂತಿಸುತ್ತಾ ಇದ್ದನು. ದೇವಿಕಿಯ ಎಂಟನೆಯ ಗರ್ಭವೇ ಕಂಸನಿಗೆ ನಿಜವಾದ ಮೃತ್ಯುವಾಗುವುದು. ಎಂದು ಋಷಿಗಳೂ, ಹೇಳುತ್ತಿದ್ದರು.

೬೨–೬೪. ಕಂಸನು ಶ್ರೀಕೃಷ್ಣನನ್ನು ನಾಶಮಾಡಲು ಏನೇನನ್ನು ಮಾಡಿದರೂ ಅದೊಂದೂ ಸಫಲವಾಗಲಿಲ್ಲ. ಕೊನೆಗೆ ಕೃಷ್ಣನಿಂದ

ಕಂಸೋಽಪಿ ನಿಹತಸ್ತೇನ ಕೃಷ್ಣೇನಾ ಕ್ಲಿಷ್ಟ ಕರ್ಮಣಾ ।
ನಿಹತಾ ಬಹವಶ್ಚಾಽನ್ಯೇ ದೇವ ಬ್ರಾಹ್ಮಣ ಘಾತಿನಃ ॥೬೩॥

ತಸ್ಯ ಕೃಷ್ಣಸ್ಯ ತನಯಾಃ ಪ್ರದ್ಯುಮ್ನ ಪ್ರಮುಖಾ ಸ್ತಥಾ ।
ಬಹವಃ ಪರಿಸಂಖ್ಯಾತಾಃ ಸರ್ವೇ ಯುದ್ಧ ವಿಶಾರದಾಃ ॥೬೪॥

ಕೃಷ್ಣಪುತ್ರಾಃ ಸಮಾಖ್ಯಾತಾಃ ಕೃಷ್ಣೇನ ಸದೃಶಾಃ ಸುತಾಃ ।
ಪುತ್ರೇಷ್ವೇತೇಷು ಸರ್ವೇಷು ಚಾರುದೇಷ್ಣಾ ದಯೋ ಹರೇಃ ॥೬೫॥

ವಿಶಿಷ್ಟಾ ಬಲವಂತಶ್ಚ ರೌಕ್ಮಿಣೇ ಯಾರಿ ಸೂದನಾಃ ।
ಷೋಡಶಸ್ತ್ರೀ ಸಹಸ್ರಾಣಿ ಶತಮೇಕಂ ತಥಾಽಧಿಕಂ ॥೬೬॥

ಕೃಷ್ಣಸ್ಯ ತಾಸು ಸರ್ವಾಸು ಪ್ರಿಯಾ ಜ್ಯೇಷ್ಠಾ ಚ ರುಕ್ಮಿಣೀ ।
ತಯಾ ದ್ವಾದಶ ವರ್ಷಾಣಿ ಕೃಷ್ಣೇನಾಕ್ಲಿಷ್ಟ ಕರ್ಮಣಾ ॥೬೭॥

ಉಷ್ಯತಾ ವಾಯು ಭಕ್ಷೇಣ ಪುತ್ರಾರ್ಥಂ ಪೂಜಿತೋ ಹರಃ ।
ಚಾರು ದೇಷ್ಣಃ ಸುಚಾರುಶ್ಚ ಚಾರುವೇಷೋ ಯಶೋಧರಃ ॥೬೮॥

---

ಕಂಸನು ನಾಶಮಾಡಲ್ಪಟ್ಟನು. ಕೃಷ್ಣನ ಅನೇಕ ಮಕ್ಕಳಾದ ಪ್ರದ್ಯುಮ್ನ ಮೊದಲಾದವರೂ, ಬಹಳ ಶೂರರಾಗಿಯೂ, ಯುದ್ಧದಲ್ಲಿ ಗಟ್ಟಿಗರಾಗಿಯೂ ಇದ್ದರು.

೬೬–೬೮. ಕೃಷ್ಣನ ಮಕ್ಕಳು ಶಕ್ತಿಯಲ್ಲಿ ಕೃಷ್ಣನಿಗೆ ಸಮಾನರಾಗಿಯೇ ಇದ್ದರು. ಈ ಮಕ್ಕಳಲ್ಲಿ ಚಾರುದೇಷ್ಣ, ಮುಂತಾದ ರುಕ್ಮಿಣಿಯ ಮಕ್ಕಳು ಬಹಳ ಬಲಿಷ್ಠರಾಗಿಯೂ, ಶ್ರೇಷ್ಠರಾಗಿಯೂ, ಇದ್ದರು. ಕೃಷ್ಣನಿಗೆ ಹದಿನಾರುಸಾವಿರದ ನೂರು ಮಂದಿ ಪತ್ನಿಯರಿದ್ದರು. ಇವರೆಲ್ಲರಿಗಿಂತಲೂ ರುಕ್ಮಿಣಿಯೇ ಕೃಷ್ಣನಿಗೆ ಹಿರಿಯಳಾಗಿ ಪ್ರಿಯಳಾಗಿದ್ದಳು. ಕೃಷ್ಣನು ಇವಳ ಸಹವಾಸದಲ್ಲಿ ಹನ್ನೆರಡು ವರ್ಷಕಾಲವಿದ್ದು, ಮಕ್ಕಳಾಗಬೇಕೆಂಬ ಅಪೇಕ್ಷೆಯಿಂದ ಶಿವನನ್ನು ಪೂಜಿಸಿದನು. ಅದರ ಫಲವಾಗಿ ಚಾರುದೇಷ್ಣ, ಸುಚಾರು, ಚಾರುವೇಷ, ಯಶೋಧರ, ಮುಂತಾದವರು ಹುಟ್ಟಿದರು.

ಚಾರುಶ್ರವಾಃ ಚಾರುಯಶಾಃ ಪ್ರದ್ಯುಮ್ನಃ ಸಾಂಬ ಏವಚ ।
ಏತೇ ಲಬ್ಧಾಸ್ತು ಕೃಷ್ಣೇನ ಶೂಲಪಾಣಿ ಪ್ರಸಾದತಃ ॥೬೯॥
ತಾನ್ದೃಷ್ಟ್ವಾ ತನಯಾನ್ವೀರಾನ್ ರೌಕ್ಮಿಣೇಯಾಂಶ್ಚ ರುಕ್ಮಿಣೀಂ ।
ಜಾಂಬವತ್ಯ ಬ್ರವೀತ್ಕೃಷ್ಣಂ ಜಗನ್ನಾಥ ಸ್ತತೋ ಹರಿಃ ॥೭೦॥
ಮಮ ತ್ವಂ ಪುಂಡರೀಕಾಕ್ಷ ವಿಶಿಷ್ಟಂ ಗುಣವತ್ತರಂ ।
ಸುರೇಶ ಸಂಮಿತಂ ಪುತ್ರಂ ಪ್ರಸನ್ನೋ ದಾತುಮರ್ಹಸಿ ॥೭೧॥
ಜಾಂಬವತ್ಯಾ ವಚಃ ಶ್ರುತ್ವಾ ಜಗನ್ನಾಥ ಸ್ತತೋ ಹರಿಃ ।
ತಪಸ್ತಪ್ತುಂ ಸಮಾರೇಭೇ ತಪೋನಿಧಿ ರನಿಂದಿತಃ ॥೭೨॥
ಸೋಽಥ ನಾರಾಯಣಃ ಕೃಷ್ಣಃ ಶಂಖ ಚಕ್ರ ಗದಾಧರಃ ।
ವ್ಯಾಘ್ರ ಪಾದಸ್ಯ ಚ ಮುನೇ ರ್ಗತ್ವಾ ಚೈವಾಶ್ರಮೋತ್ತಮಂ॥೭೩॥

---

೬೯. ಕೃಷ್ಣನು ಶಿವನನ್ನು ಪೂಜಿಸಲಾಗಿ ಚಾರುಶ್ರವ, ಚಾರುಯಶ, ಪ್ರದ್ಯುಮ್ನ, ಸಾಂಬ, ಎಂಬ ಮಕ್ಕಳೂ, ಉತ್ಪನ್ನರಾದರು.

೭೦. ಆ ವೀರರಾದ ರುಕ್ಮಿಣಿಯ ಮಕ್ಕಳನ್ನೂ, ರುಕ್ಮಿಣಿಯನ್ನೂ ನೋಡಿ ಜಾಂಬವತಿಯು ಕೃಷ್ಣನನ್ನು ಪುತ್ರಾರ್ಥವಾಗಿ ತಪಸ್ಸುಮಾಡಲು ಪ್ರೇರಿಸಿದಳು. ಜಗನ್ನಾಯಕನಾದ ಶ್ರೀ ಕೃಷ್ಣನು ಅವಳ ಮಾತನ್ನು ಅನುಮೋದಿಸಿದನು.

೭೧–೭೩. ಜಾಂಬವತಿಯು ಕೃಷ್ಣನನ್ನು ಕುರಿತು, ಎಲೈ ಸ್ವಾಮಿಯೇ, ನೀನು ನನ್ನ ಮೇಲೆ ಅನುಗ್ರಹಮಾಡಲು ದೇವರಾಜಸಮನಾದ ಕುಮಾರನನ್ನು ದಯಪಾಲಿಸು, ಎಂದು ಬೇಡಿದಳು. ಜಗನ್ನಾಯಕನಾದ ಶ್ರೀ ಕೃಷ್ಣನು ಜಾಂಬವತಿಯ ಮಾತಿನ ಪ್ರಕಾರ, ಸಂತಾನಕ್ಕಾಗಿ ತಪಸ್ಸನ್ನು ಮಾಡಲು ಪ್ರಾರಂಭಿಸಿದನು. ಶಂಖ ಚಕ್ರ ಗದಾಧಾರಿಯಾದ ಶ್ರೀ ಕೃಷ್ಣನು ವ್ಯಾಘ್ರಪಾದ ಮಹರ್ಷಿಯ ಆಶ್ರಮವನ್ನು ತಪಸ್ಸಿಗಾಗಿ ಸೇರಿದನು.

ಋಷಿಶ್ಚಾಪ್ಯಭಿಗಮ್ಯತಂ ಗಿರಸಂ ಪ್ರಣಿಪತ್ಯ ಜನಾರ್ದನಃ ।
ದಿವ್ಯಂ ಪಾಶುಪತಂ ಯೋಗಂ ಲಬ್ಧವಾಂಸ್ತಸ್ಯ ಚಾಜ್ಞಯಾ ॥೭೪॥
ಪ್ರಲುಪ್ತ ಶ್ಮಶ್ರು ಕೇಶಶ್ಚ ಘೃತಾಕ್ತೋ ಮುಂಜಮೇಖಲೀ ।
ದೀಕ್ಷಿತೋ ಭಗವಾನ್ಕೃಷ್ಣ ಸ್ತತಾಪ ಚ ಪರಂ ತಪಃ ॥೭೫॥
ಊರ್ಧ್ವ ಬಾಹು ರ್ನಿರಾಲಂಬಃ ಪಾದಾಂಗುಷ್ಠಾಗ್ರ ಧಿಷ್ಠಿತಃ ।
ಫಲಾಂ ಬ್ವನಿಲ ಭೋಜೀ ಚ ಋತುತ್ರಯ ಮಥೋಕ್ಷಜಃ ॥೭೬॥
ತಪಸಾ ತಸ್ಯ ಸಂತುಷ್ಟೋ ದದೌ ರುದ್ರೋ ಬಹೂನ್ ವರಾನ್ ।
ಸಾಂಬಂ ಜಾಂಬವತೀ ಪುತ್ರಂ ಕೃಷ್ಣಾಯ ಚ ಮಹಾತ್ಮನೇ ॥೭೭॥
ತಥಾ ಜಾಂಬವತೀ ಚೈವ ಸಾಂಬಂ ಭಾರ್ಯಾ ಹರೇಃ ಸುತಂ ।
ಪ್ರಹರ್ಷ ಮತುಲಂ ಲೇಭೇ ಲಬ್ಧ್ವಾಽಽದಿತ್ಯಂ ಯಥಾಽದಿತಿಃ॥೭೮॥

---

೭೪–೭೬. ಕೃಷ್ಣನು ಅಂಗಿರ ಮಹರ್ಷಿಗಳ ದರ್ಶನವನ್ನು ಪಡೆದು ಅವರನ್ನು ನಮಸ್ಕರಿಸಿ, ಅವರ ಅಪ್ಪಣೆಯಂತೆ "ಪಾಶುಪತ" ಎಂಬ ಯೋಗಾಭ್ಯಾಸವನ್ನು ಕೈಗೊಂಡನು. ತಪಸ್ವಿಯಾದ ಶ್ರೀ ಕೃಷ್ಣನು ತನ್ನ ಕೇಶ, ಮೀಸೆಗಳನ್ನು ತೆಗೆದು ಹಾಕಿಸಿ, ಮೈಗೆಲ್ಲಕ್ಕೂ ತುಪ್ಪವನ್ನು ಸವರಿಕೊಂಡು, ಮೌಂಜೀ ಎಂಬ ಧಾರವನ್ನು ಸೊಂಟಕ್ಕೆ ಸುತ್ತಿಕೊಂಡು ದೀಕ್ಷಾಧಾರಿಯಾಗಿ ತಪಸ್ಸನ್ನು ಮಾಡಲು ಪ್ರಾರಂಭಿಸಿದನು. ತೋಳುಗಳನ್ನು ಮೇಲಕ್ಕೆತ್ತಿ ಕೆಳಗಡೆ ಏನೂ ಆಧಾರವಿಲ್ಲದೇ ಕೇವಲ ಕಾಲಿನ ಹೆಬ್ಬೆರಳಿನ ತುದಿಯಲ್ಲಿ ನಿಂತು, ಕೃಷ್ಣನು ಹಣ್ಣು ನೀರು, ಗಾಳಿಗಳನ್ನು ಮಾತ್ರ ಸೇವಿಸುತ್ತಾ ಮೂರು ತಿಂಗಳು ಕಠೋರ ತಪಸ್ಸನ್ನು ಆಚರಿಸಿದನು.

೭೭–೭೮. ಕೃಷ್ಣನ ತಪಸ್ಸಿನಿಂದ ಸಂತುಷ್ಟನಾದ ರುದ್ರನು ಅವನಿಗೆ ಅನೇಕ ವರಗಳನ್ನು ಕೊಟ್ಟನು. ಮಹಾತ್ಮನಾದ ಕೃಷ್ಣನಿಗೆ ಜಾಂಬವತಿಯಲ್ಲಿ ಸಾಂಬನೆಂಬ ಮಗನಾಗುವಂತಾಯಿತು. ಜಾಂಬವತಿಯು ಕೃಷ್ಣನಿಂದ ಸಾಂಬನೆಂಬ ಮಗನನ್ನು ಪಡೆದು, ಅದಿತಿಯು ಸೂರ್ಯನನ್ನು ಪಡೆದು ಎಷ್ಟು ಸಂತೋಷಪಟ್ಟಳೋ, ಅಷ್ಟೇ ಸಂತೋಷ

ಬಾಣಸ್ಯಚ ತದಾ ತೇನ ಚ್ಛೇದಿತಂ ಮುನಿ ಪುಂಗವಾಃ ।
ಭುಜಾನಾಂ ಚೈವ ಸಾಹಸ್ರಂ ಶಾಪಾ ದ್ರುದ್ರಸ್ಯ ಧೀಮತಃ ॥೭೯॥

ಅಥ ದೈತ್ಯ ವಧಂ ಚಕ್ರೇ ಹಲಾಯುಧ ಸಹಾಯವಾನ್ ।
ತಥಾ ದುಷ್ಟ ಕ್ಷಿತೀಶಾನಾಂ ಲೀಲಯೈವ ರಣಾಜಿರೇ ॥೮೦॥

ಸ ಹತ್ವಾ ದೇವ ಸಂಭೂತಂ ನರಕಂ ದೈತ್ಯ ಪುಂಗವಂ ।
ಬ್ರಾಹ್ಮಣಸ್ಯೋರ್ದ್ವ ಚಕ್ರಸ್ಯ ವರದಾನಾ ನ್ಮಹಾತ್ಮನಃ ॥೮೧

ಸ್ವೋಪ ಭೋಗ್ಯಾನಿ ಕನ್ಯಾನಾಂ ಷೋಡಶಾ ತುಲ ವಿಕ್ರಮಃ ।
ಶತಾಧಿ ಕಾನಿ ಜಗ್ರಾಹ ಸಹಸ್ರಾಣಿ ಮಹಾಬಲಃ ॥೮೨॥

ಶಾಪ ವ್ಯಾಜೇನ ವಿಪ್ರಾಣಾ ಮುಪ ಸಂಹೃತ ವಾನ್ಕುಲಂ ।
ಸಂಹೃತ್ಯ ತತ್ಕುಲಂ ಚೈವ ಪ್ರಭಾಸೇಽತಿಷ್ಠದ ಚ್ಯುತಃ ॥೮೩॥

---

ಗೊಂಡಳು. ಎಲೈ ಋಷಿ ಶ್ರೇಷ್ಠರೇ, ಆಮೇಲೆ ಶ್ರೀ ಕೃಷ್ಣನು ರುದ್ರನ ಶಾಪಕ್ಕೆ ತುತ್ತಾಗಿದ್ದ ಬಾಣಾಸುರನ ಸಾವಿರ ತೋಳುಗಳನ್ನು ಕತ್ತರಿಸಿದನು.

೮೦. ಅನಂತರದಲ್ಲಿ ಕೃಷ್ಣನು ಬಲರಾಮನ ಸಹಾಯದಿಂದ ಯುದ್ಧಮಾಡಿ, ರಾಕ್ಷಸರ ಸಂಹಾರವನ್ನೂ, ಮತ್ತು ಕೆಟ್ಟ ದೊರೆಗಳ ನಾಶವನ್ನೂ ಮಾಡಿದನು.

೮೧–೮೩. ಕೃಷ್ಣನು ಅಸುರರಿಗೆ ಅಧಿಪತಿಯಾಗಿದ್ದ ಮತ್ತು ದೈವ ಸಹಾಯವನ್ನು ಪಡೆದಿದ್ದ ಬ್ರಾಹ್ಮಣರ ವರಪ್ರಸಾದದಿಂದ ಮಹಾ ಶೂರನಾಗಿದ್ದ, ನರಕಾಸುರನನ್ನು ಸಂಹಾರಮಾಡಿದನು. ಅನಂತರ ಮಹಾಪರಾಕ್ರಮಶಾಲಿಯಾದ ಕೃಷ್ಣನು, ಹದಿನಾರು ಸಾವಿರದ ನೂರು ಕನ್ಯೆಯರನ್ನು ತನ್ನ ಭೋಗಕ್ಕಾಗಿ ಸ್ವೀಕರಿಸಿದನು. ತರುವಾಯ ಅವನು ಬ್ರಾಹ್ಮಣರ ಶಾಪದ ವ್ಯಾಜದಿಂದ ಅವರ ವಂಶವೆಲ್ಲವನ್ನೂ ಉಪಸಂಹರಿಸಿ ಅವರಿಗೆ ಮೋಕ್ಷವುಂಟಾಗುವಂತೆ ಮಾಡಿದನು. ಆ ಮೇಲೆ ಬಹಳಕಾಲ ಪ್ರಭಾಸ ಕ್ಷೇತ್ರದಲ್ಲಿದ್ದನು.

ತದಾ ತಸ್ಯೈವ ತು ಗತಂ ವರ್ಷಾಣಾ ಮಧಿಕಂ ಶತಂ ।
ಕೃಷ್ಣಸ್ಯ ದ್ವಾರಕಾಯಾಂ ವೈ ಜರಾ ಕ್ಲೇಶಾಪಹಾರಿಣಃ ॥೮೪॥
ವಿಶ್ವಾಮಿತ್ರಸ್ಯ ಕಣ್ವಸ್ಯ ನಾರದಸ್ಯ ಚ ಧೀಮತಃ ।
ಶಾಪಂ ಪಿಂಡಾರಕೇಽರಕ್ಷ ದ್ವಚೋ ದುರ್ವಾಸಸ ಸ್ತದಾ ॥೮೫॥
ತ್ಯಕ್ತ್ವಾ ಚ ಮಾನುಷಂ ರೂಪಂ ಜರಕಾಸ್ತ್ರಚ್ಛಲೇನ ತು ।
ಅನುಗೃಹ್ಯ ಚ ಕೃಷ್ಣೋಽಪಿ ಲುಬ್ಧಕಂ ಪ್ರಯಯೌ ದಿವಂ ॥೮೬॥
ಅಷ್ಟಾವಕ್ರಸ್ಯ ಶಾಪೇನ ಭಾರ್ಯಾಃ ಕೃಷ್ಣಸ್ಯ ಧೀಮತಃ ।
ಚೋರೈ ಶ್ಚಾಪ ಹೃತಾಃ ಸರ್ವಾ ಸ್ತಸ್ಯ ಮಾಯಾ ಬಲೇನ ಚ ॥೮೭॥
ಬಲ ಭದ್ರೋಽಪಿ ಸಂತ್ಯಜ್ಯ ನಾಗೋ ಭೂತ್ವಾ ಜಗಾಮ ಚ ।
ಮಹಿಷ್ಯ ಸ್ತಸ್ಯ ಕೃಷ್ಣಸ್ಯ ರುಕ್ಮಿಣೀ ಪ್ರಮುಖಾಃ ಶುಭಾಃ ॥೮೮॥

---

೮೪-೮೬. ಮುಪ್ಪು ಮೊದಲಾದ ಪ್ರಾಪಂಚಿಕ ಕ್ಲೇಶಗಳೆಲ್ಲವನ್ನೂ ದೂರಮಾಡುವ ಶ್ರೀ ಕೃಷ್ಣನು, ನೂರಾರು ವರ್ಷಗಳು ದ್ವಾರಕಾಪಟ್ಟಣದಲ್ಲಿ ವಾಸಿಸುತ್ತಿದ್ದನು. ಆ ಮೇಲೆ ಕೃಷ್ಣನು, ವಿಶ್ವಾಮಿತ್ರ, ಕಣ್ವ, ನಾರದ, ದುರ್ವಾಸ, ಮುಂತಾದ ಋಷಿಗಳ ಅಭಿಪ್ರಾಯದಂತೆ, ತನಗೆ ಯಾವುದೋ ಒಂದು ಶಾಪವಿದೆಯೆಂದು ನೆಪಮಾಡಿಕೊಂಡು, ಯಾವನೋ ಒಬ್ಬ ಬೇಡರವನ ಜರಕೆ, ಎಂಬ ಅಸ್ತ್ರಕ್ಕೆ ಸಿಕ್ಕಿಬಿದ್ದವನಂತೆ ನಟಿಸಿ, ಆ ಬೇಡರವನನ್ನೂ ಅನುಗ್ರಹಿಸಿ, ಶ್ರೀ ಕೃಷ್ಣಪರಮಾತ್ಮನು ಮಾನವ ದೇಹವನ್ನು ತ್ಯಜಿಸಿ ಸ್ವರ್ಗವನ್ನು ಸೇರಿದನು.

೮೭-೮೯. ಅನಂತರ ಅಷ್ಟಾವಕ್ರನ ಶಾಪದಿಂದಲೂ, ಕೃಷ್ಣನ ಮಾಯಾ ಶಕ್ತಿಯಿಂದಲೂ, ಕೃಷ್ಣನ ಪತ್ನಿಯರೆಲ್ಲರೂ ಕಳ್ಳರಿಂದ ಅಪಹರಿಸಲ್ಪಟ್ಟರು. ಬಲರಾಮನೂ ಕೂಡ ತನ್ನ ಮನುಷ್ಯ ಶರೀರವನ್ನು ಬಿಟ್ಟು ಆದಿಶೇಷನಾದನು. ರುಕ್ಮಿಣಿಯೇ ಮೊದಲಾದ ಪಟ್ಟಮಹಿಷಿಯರೂ,

ಸಹಾಗ್ನಿಂ ವಿವಿಶುಃ ಸರ್ವಾಃ ಕೃಷ್ಣೇನಾ ಕ್ಲಿಷ್ಟ ಕರ್ಮಣಾ ।
ರೇವತೀ ಚ ತಥಾ ದೇವೀ ಬಲಭದ್ರೇಣ ಧೀಮತಾ ॥೮೯॥

ಪ್ರವಿಷ್ಟಾ ಪಾವಕಂ ವಿಪ್ರಾಃ ಸಾ ಚ ಭರ್ತೃ ಪಥಂ ಗತಾ ।
ಪ್ರೇತಕಾರ್ಯಂ ಹರೇಃ ಕೃತ್ವಾ ಪಾರ್ಥಃ ಪರಮವೀರ್ಯವಾನ್ ॥೯೦॥

ರಾಮಸ್ಯ ಚ ತಥಾಽನ್ಯೇಷಾಂ ವೃಷ್ಣೀನಾಮಪಿ ಸುವ್ರತಾಃ ।
ಕಂದ ಮೂಲ ಫಲೈ ಸ್ತಸ್ಯ ಬಲಿಕಾರ್ಯಂ ಚಕಾರ ಸಃ ॥೯೧॥

ದ್ರವ್ಯಾಭಾವಾ ತ್ಸ್ವಯಂ ಪಾರ್ಥೋ ಭ್ರಾತೃಭಿಶ್ಚ ದಿವಂ ಗತಃ ।
ಏವಂ ಸಂಕ್ಷೇಪತಃ ಪ್ರೋಕ್ತಃ ಕೃಷ್ಣಸ್ಯಾ ಕ್ಲಿಷ್ಟ ಕರ್ಮಣಃ ॥೯೨॥

ಪ್ರಭಾವೋ ವಿಜಯ ಶ್ಚೈವ ಸ್ವೇಚ್ಛಯೈವ ಮಹಾತ್ಮನಃ ।
ಇತ್ಯೇತತ್ಸೋಮ ವಂಶಾನಾಂ ನೃಪಾಣಾಂ ಚರಿತಂ ದ್ವಿಜಾಃ ॥೯೩॥

---

ಕೃಷ್ಣನ ಚಿತಾಧಿ ರೋಹಣವನ್ನು ಮಾಡಿದರು. ಬಲರಾಮನ ಚಿತಾಧಿ ರೋಹಣವನ್ನು ರೇವತಿಯೂ ಮಾಡಿದಳು.

೯೦–೯೨. ಕೃಷ್ಣನು ಶರೀರ ತ್ಯಾಗಮಾಡಲು ಬ್ರಾಹ್ಮಣರೆಲ್ಲರೂ ಅಗ್ನಿಪ್ರವೇಶ ಮಾಡಿದರು. ಅವನ ಸ್ತ್ರೀಯರು ಅವನ ಮಾರ್ಗವನ್ನೇ ಹಿಡಿದರು. ಬಹಳ ಪರಾಕ್ರಮಶಾಲಿಯಾದ ಅರ್ಜುನನು, ಕೃಷ್ಣನ ಮತ್ತು ಇತರ ಯಾದವರ ಮತ್ತು ಬಲರಾಮನ ಪ್ರೇತಕರ್ಮಗಳನ್ನೂ ಮಾಡಿ, ಅವರ ತೃಪ್ತ್ಯರ್ಥವಾಗಿ, ಗೆಡ್ಡೆ, ಗೆಣಸು, ಮುಂತಾದ ಫಲಗಳಿಂದ ಬಲಿಯನ್ನು ಕೊಟ್ಟನು. ದೇಶದಲ್ಲಿ ದ್ರವ್ಯಗಳೇನೂ ಇಲ್ಲದೇ ಅರ್ಜುನನೂ ಸಹ ತನ್ನ ಅಣ್ಣತಮ್ಮಂದಿರೊಂದಿಗೆ ಸ್ವರ್ಗವನ್ನು ಸೇರಿದನು. ಈ ರೀತಿ ಯಾಗಿ ಮಹಾನುಭಾವನಾದ ಶ್ರೀ ಕೃಷ್ಣನ ಜನ್ಮವೃತ್ತಾಂತವನ್ನು ಸಂಕ್ಷೇಪವಾಗಿ ತಿಳಿಸಿದ್ದೇನೆ.

೯೩. ಶ್ರೀ ಕೃಷ್ಣ ಪರಮಾತ್ಮನು ತನ್ನ ಇಚ್ಛೆಯಿಂದಲೇ ಈ ರೀತಿ ಯಾಗಿ ಹುಟ್ಟಿ, ನಾಶಹೊಂದಿದನೆಂದು ತಿಳಿಯಬೇಕು. ಎಲೈ ಬ್ರಾಹ್ಮಣರೇ, ಚಂದ್ರವಂಶದ ಚರಿತ್ರೆಯು ಈ ರೀತಿಯಾಗಿ ನಡೆಯಿತೆಂದು ತಿಳಿಯಬೇಕು.

**ಯಃ ಪಠೇ ಚ್ಛೃಣುಯಾ ದ್ವಾಽಪಿ ಬ್ರಾಹ್ಮಣಾನ್ ಶ್ರಾವಯೇದಪಿ ।**
**ಸ ಯಾತಿ ವೈಷ್ಣವಂ ಲೋಕಂ ನಾತ್ರಕಾರ್ಯಾ ವಿಚಾರಣಾ ॥೯೪॥**

**ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಸೋಮ ವಂಶ ಚರಿತ್ರ ವಿವ ರಣಂ ನಾಮ ಏಕೋನ ಸಪ್ತತಿ ತಮೋಽಧ್ಯಾಯಃ**

---

೯೪. ಈ ಚರಿತ್ರೆಯನ್ನು ಯಾವನು ಓದುವನೋ ಅಥವಾ ಕೇಳುವನೋ ಅಥವಾ ಬ್ರಾಹ್ಮಣ ಮುಂತಾದವರಿಗೆ ಹೇಳುವನೋ, ಅವನು ವೈಷ್ಣವ ಲೋಕವನ್ನು ಹೊಂದುವನೆಂಬುದರಲ್ಲಿ ಸಂದೇಹವಿಲ್ಲ.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಸೋಮವಂಶದ ಚರಿತ್ರೆಯ ವಿವರಣೆ ಎಂಬ ಅರವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



ಶ್ರೀ ಲಿಂಗಮಹಾಪುರಾಣ

ಕರ್ಣಾಟಾಧಿಪತಿ ಶ್ರೀ ಮಜ್ಜಯ ಚಾಮೇಂದ್ರ ಶಾಸನಾತ್ ।
ಲಿಂಗಮಹಾಪುರಾಣಾನುವಾದಂ ಕನ್ನಡಭಾಷಯಾ ॥

ಸುಬ್ಬಮ್ಮಾಂಬಾ ದೇವಯಜ್ವತನಯಃ ಚಂದ್ರಶೇಖರಃ ।
ಜನಾನಾ ಮುಪಕಾರಾಯ ರಚ ಯಾಮಾಸ ಸಾದರಂ ॥

ವಾಣೀಸೇವಾಂ ರಾಜಸೇವಾಂ ಜನಸೇವಾಂ ಮಯಾ ಕೃತಾಂ ।
ಸ್ವೀಕೃತ್ಯ ತುಷ್ಯತು ಗುರುಃ ದೇವೋ ರಾಜಾ ಚ ಭಾರತೀ ॥





ಬೆಂಗಳೂರು ಪ್ರೆಸ್, ಮೈಸೂರು ಬ್ರಾಂಚ್‌ನಲ್ಲಿ ಮುದ್ರಿಸಲ್ಪಟ್ಟಿತು.